॥ ಓಂ ॥

ಶ್ರೀ ಸದ್ಗುರು ಸಮರ್ಥ

# ನಿತ್ಯ ನೇಮಾವಲಿ

ಅನುವಾದಕರು :

ಇಂದಿರಾಬಾಯಿ ದೇಶಪಾಂಡೆ

ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್

ನಿಂಬಾಳ (ಆರ್.ಎಸ್.) ಪಿನ್ ೫೮೬೨೧೧

೨೦೧೪

॥ ಓಂ ॥

ಶ್ರೀ ಸದ್ಗುರು ಸಮರ್ಥ

# ನಿತ್ಯ ನೇಮಾವಲಿ

(ಕನ್ನಡ ಭಾವಾರ್ಥಸಹಿತ)


ಅನುವಾದಕರು :

ಇಂದಿರಾಬಾಯಿ ದೇಶಪಾಂಡೆ



ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್

ನಿಂಬಾಳ (ಆರ್.ಎಸ್.) ಪಿನ್ ೫೮೬೨೧೧

೨೦೧೪

ಪ್ರಕಾಶಕರು : ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್,
ನಿಂಬಾಳ (ಆರ್.ಎಸ್.) ಪಿನ್ ೫೮೬೨೧೧
ಜಿಲ್ಲಾ ವಿಜಾಪುರ (ಕರ್ನಾಟಕ)

ಪ್ರಥಮ ಆವೃತ್ತಿ : ೨೦೦೧

ಎರಡನೇ ಆವೃತ್ತಿ =೨೦೧೪



ಬೆಲೆ : ೩೦.೦೦ ರೂ.

ಛಾಯಾಕ್ಷರ ಜೋಡಣೆ ಮತ್ತು ಮುದ್ರಣ
ತನುಷ ಗ್ರಾಫಿಕ್ಸ್
ಶ್ರೀ ಶಾಹು ಮಾರ್ಕೆಟ್ ಯಾರ್ಡ್,
ಹನುಮಾನ ಹೋಟೇಲಿನ ಹತ್ತಿರ, ಕೊಲ್ಹಾಪುರ.
ಪಿನ್ : ೪೧೬೦೦೫. ಮೊ.೯೨೨೪೩೦೬೮೪

# ಎರಡನೇಯ ಆವೃತ್ತಿಯ ನಿವೇದನೆ

ನಿತ್ಯನಿಯಮಾವಳಿ ಪ್ರಕಾಶನೆಗೆ ಈಗಾಗಲೇ ೧೦೩ ವರ್ಷಗಳಾದವು. ಕನ್ನಡ ಭಾಷೆಯಲ್ಲಿ ಇದು ಎರಡನೇಯ ಆವೃತ್ತಿ. ನಿತ್ಯನಿಯಮಾವಳಿ ಎಂದರೆ ಶ್ರೀ ಭಾವುಸಾಹೇಬ ಮಹಾರಾಜರ ಆಜ್ಞೆಯಂತೆ ಶ್ರೀ ಗುರುದೇವ ರಾನಡೆ ಮಹಾರಾಜರು ರಚಿಸಿದ ''ಭಜನಾಮೃತ''.

''ಭಜನಾಮೃತವನ್ನು ನಿತ್ಯವೂ ತಪ್ಪದೇ ಪಠಿಸಿದರೆ ಪರಮಾರ್ಥ ಸಾಧನೆಯಾಗುತ್ತದೆ. ನಿತ್ಯನಿಯಮಾವಳಿಯ ಮೊದಲನೇಯ ಮರಾಠಿ ಆವೃತ್ತಿ ೧೯೧೧ ರಲ್ಲಿ ಪ್ರಕಾಶಿತವಾಗಿತ್ತು. ಇದರಲ್ಲಿರುವ ಎಲ್ಲ ಭಜನೆಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ನಿತ್ಯ ಪಠಿಸಬೇಕು. ಹಾಗಾದರೊಂದೆ ನಮ್ಮ ಭಕ್ತಿ ಭಾವನೆ ಬೆಳೆದು ಬಲವತ್ತರವಾಗುತ್ತದೆ.

ಇದರಲ್ಲಿರುವ ಎಲ್ಲ ಭಜನೆಗಳಿಗೂ ಸ್ವತಃ ಭಾವುಸಾಹೇಬರೇ 'ಸ್ವರ-ಸಂಯೋಜನೆ' ಮಾಡಿದ್ದಾರೆ. ಕನ್ನಡ ಸಾಧಕರಿಗಾಗಿ ಈ ಆವೃತ್ತಿಯನ್ನು ಬಿಡುಗಡೆ ಮಾಡುವಾಗ ನಮಗೆ ತುಂಬಾ ಸಂತೋಷವಾಗುತ್ತದೆ.

ಧನ್ಯವಾದಗಳು.

ನಿಂಬಾಳ ಆರ್.ಎಸ್.ಶ್ರೀ ಗುರುದೇವ ರಾನಡೆ

ಸಮಾಧಿ ಟ್ರಸ್ಟ

# ಹೃದ್ಗತ

ದಿವಂಗತ ಪಿ.ಎಚ್. ಕುಲಕರ್ಣಿಯವರನ್ನು ಮೊದಲ ಬಾರಿಗೆ ನಾನು ಭೆಟ್ಟಿಯಾದಾಗ ನನಗೆ ಅವರು "ನಿತ್ಯನೇಮಾವಳಿ"ಯನ್ನು ಕನ್ನಡದಲ್ಲಿ ಅನುವಾದಿಸಲು ಸೂಚಿಸಿದರು. ಮರಾಠೀಭಾಷೆ ಗೊತ್ತಿದ್ದರೂ, ನನಗೆ ಅರ್ಥವಾಗವ ಅಭಂಗಗಳ, ಭಜನೆಗಳ ವಿವರಣೆಯನ್ನು ಅವರಿಂದ ತಿಳಿದುಕೊಳ್ಳುತ್ತಿದ್ದೆ. ನಾನು ಬರೆದ ಪ್ರತಿಯೊಂದು ಶಬ್ದವನ್ನು ಅವರು ಪರಿಶೀಲಿಸಿ, ಹಸ್ತಪ್ರತಿಯ ಮುಕ್ಕಾಲು ಭಾಗವನ್ನು ತಿದ್ದಿಕೊಟ್ಟರು. ಅವರು ಕೊಟ್ಟ ಸ್ಫೂರ್ತಿಯಿಂದಲೇ ಈ ಕೆಲಸ ಸಾಧ್ಯವಾಯಿತು. ದುರ್ದೈವದಿಂದ ಅವರು ನಮ್ಮನ್ನು ಅಕಸ್ಮಾತ್ತಾಗಿ ಅಗಲಿದ್ದರಿಂದ ಅನುವಾದದ ಕೆಲಸ ಹಾಗೆಯೇ ಉಳಿಯಿತು. ಉದ್ದಿಷ್ಟಕಾರ್ಯ ಪೂರ್ತಿಯಾಗಲಿಲ್ಲವೆಂದು ಕೈಚೆಲ್ಲಿ ಕುಳಿತಿದ್ದೆ. ಅಷ್ಟರಲ್ಲಿ ಸುದೈವದಿಂದ ಶ್ರೀ ಪ್ರಲ್ಹಾದರಾಯರ ಧರ್ಮಪತ್ನಿ ಶ್ರೀಮತಿ ಲಲಿತಕ್ಕನವರು ಹಸ್ತಲಿಖಿತವನ್ನು ತೆಗೆದುಕೊಂಡು, ಅದನ್ನು ಪ್ರೊಫೆಸರ ಬಿ.ಆರ್. ಕುಲಕರ್ಣಿ ಅವರಿಗೆ ತೋರಿಸಿ, ಮುಕ್ತಾಯದ ಹಂತಕ್ಕೆ ಬರುವಂತೆ ಸಲಹೆಸೂಚನೆಗಳನ್ನು ಪಡೆದುಕೊಂಡು ಬಂದರು. ಉಳಿದ ಕಾಲುಭಾಗ ಹಸ್ತಪ್ರತಿಯನ್ನು ತಿದ್ದಿ, ಅರ್ಥವಾಗದ ಭಾಗಗಳ ಭಾವಾರ್ಥ ಬರೆದು ಕೆಲಸ

ಮುಂದುವರಿಸಲು ಪ್ರೊಫೆಸರ ಕುಲಕರ್ಣಿಯವರು ಸೂಚಿಸಿದರು. ಅವರ ಸಹಕಾರಕ್ಕಾಗಿ ಅವರಿಗೆ ನಾನು ತುಂಬಾ ಕೃತಜ್ಞಳಾಗಿದ್ದೇನೆ.

ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್, ನಿಂಬಾಳ ಆರ್.ಎಸ್. ಈ ಸಂಸ್ಥೆಯವರು ಹೊರತಂದ ನಿತ್ಯನೇಮಾವಲಿಯ ೧೯೯೪ನೆಯ ಆವೃತ್ತಿಯನ್ನು ಅನುಸರಿಸಿ ಭಾಷಾಂತರ ಮಾಡಿದ್ದೇನೆ.

ಪ್ರಸ್ತುತ ಪುಸ್ತಕದಲ್ಲಿದ್ದ ಮರಾಠೀ ಭಜನೆಯ ಅವತರಣವನ್ನು ಕನ್ನಡಲಿಪಿಯಲ್ಲಿ ಮೊದಲುಕೊಟ್ಟು, ಅದರ ಕೆಳಗೆ ಕನ್ನಡದ ಭಾವಾರ್ಥ ಬರೆದಿದ್ದೇನೆ.

ಅಧ್ಯಾತ್ಮದಲ್ಲಿ ನನಗೆ ಆಸಕ್ತಿಯಿದ್ದರೂ ಮೊದಲಬಾರಿಗೆ ಇಂಥ ಭಜನೆಗಳನ್ನು ಕನ್ನಡಿಸಿದ್ದರಿಂದ ಲೋಪದೋಷಗಳು ಇರಬಹುದು. ಅದಕ್ಕಾಗಿ ಓದುಗರ ಕ್ಷಮೆ ಕೇಳಿಕೊಳ್ಳುತ್ತೇನೆ. ಈ ನಿತ್ಯನೇಮಾವಲಿ ಪುಸ್ತಕದ ಪ್ರಕಾಶಕರಾದ ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ, ನಿಂಬಾಳ ಆರ್.ಎಸ್. ಇವರಿಗೆ ನಾನು ತುಂಬಾಋಣಿಯಾಗಿದ್ದೇನೆ. ಈ ಕೆಲಸದಲ್ಲಿ ನನಗೆ ಸಹಾಯಮಾಡಿದ ಶ್ರೀ ಬಿ.ಆರ್. ಕುಲಕರ್ಣಿ ಹಾಗೂ ಶ್ರೀಮತಿ ಲಲಿತಕ್ಕನವರಿಗೂ, ಹಸ್ತಪ್ರತಿಯನ್ನು ಸಿದ್ಧಪಡಿಸುವಲ್ಲಿ ನೆರವಾದ ನನ್ನ ಮಗಳು ಶ್ರೀಮತಿ ಗೀತಾ ಕುಲಕರ್ಣಿ ಇವಳಿಗೂ ನನ್ನ ಕೃತಜ್ಞತೆಗಳು.

ಬೆಂಗಳೂರು ಇಂದಿರಾಬಾಯಿ. ಕೇ. ದೇಶಪಾಂಡೆ

೨೭-೧-೨೦೦೧

# ಅನುಕ್ರಮಣಿಕೆ

# ಪ್ರಥಮ ಆವೃತ್ತಿಯ ಪ್ರಸ್ತಾವನೆ
## (೧೯೧೧)

ಈ ಪುಸ್ತಕವಲ್ಲಿ ಶ್ರೀ ಭಾವ್ರೂರಾವಮಹಾರಾಜ ಉಮದೀಕರ ಇವರ ಸಂಪ್ರದಾಯದಲ್ಲಿ ಪ್ರಚಲಿತವಿರುವ ಭಜನೆಯ ಕ್ರಮವನ್ನು ಕೊಡಲಾಗಿವೆ. ಅದರಲ್ಲಿ ಮೊದಲು ರಾತ್ರಿಯ ಭಜನೆ, ಅನಂತರ ಕಾಕಡಾರತಿ ಹೀಗೆ ಯೋಜನೆ ಮಾಡಲಾಗಿದೆ. ನಂತರ ಭಾವ್ರೂರಾವಮಹಾರಾಜರ ಶಿಷ್ಯನಾದ ಗಣಪತಿ ಪವಾರ ಎಂಬ ಹದಿನಾರು ವರ್ಷದ ಬಾಲಕನು ರಚಿಸಿದ "ಪಂಚಸಮಾಸೀ" ಎಂಬ ಪ್ರಕರಣವು ಇದೆ. ತದನಂತರ ಅವರ ಶಿಷ್ಯರು ರಚಿಸಿದ ನಾಲ್ಕೇ ಪದ್ಯಗಳನ್ನು ಸೇರಿಸಲಾಗಿದೆ. ಈ ಪುಸ್ತಕವು ಸಂಪ್ರದಾಯವನ್ನುಸರಿಸುವವರಿಗೇ ಮೆಚ್ಚುಗೆಯಾಗುವ ಹಾಗೆ ವಿಸ್ತೃತವಾದ ಗ್ರಂಥವೊಂದನ್ನು ಪ್ರಕಟಿಸುವ ವಿಚಾರವಿತ್ತು. ಆದರೆ ಕಾರಣಾಂತರದಿಂದ ಅದನ್ನು ಮುಂದೂಡುವ ಪ್ರಸಂಗ ಬಂದಿತು. ಅಂಥ ಪುಸ್ತಕವನ್ನು ಪ್ರಸಿದ್ಧಿಸುವ ಸುಯೋಗವು ಒದಗಿದರೆ ಅದರಲ್ಲಿ ಸಾಕಷ್ಟು ಉಪಯುಕ್ತ ಸಂಗತಿಗಳನ್ನು ಸೇರಿಸಬಹುದು. ಈ ಪುಸ್ತಕದ ಬೆಲೆಯನ್ನು ಆದಷ್ಟು ಕಡಿಮೆ ಇಡುವದು ಅವಶ್ಯವೆನಿಸಿದ್ದರಿಂದ ಭಜನೆಯಲ್ಲಿಯ ಆರತಿ-ಅಷ್ಟಕ-ಭಾರುಡಗಳನ್ನು ಕಡಿಮೆ ಮಾಡಲಾಗಿದೆ. ಅವುಗಳನ್ನೂ,

ಮಹಾರಾಜರ ಹತ್ತಿರವಿರುವ ಅಸಂಖ್ಯ ಅನುಭವಪದಗಳ ಹಾಗೂ ಅಭಂಗಗಳ ಸಂಗ್ರಹವನ್ನೂ, ಅವರ ಅನೇಕ ಮಹತ್ವಪೂರ್ಣ ಪತ್ರಗಳನ್ನೂ, ಸಾಂಪ್ರದಾಯಿಕ ಆಮೂಲಾಗ್ರ ಇತಿಹಾಸವನ್ನೂ ಮತ್ತು ಮಹಾರಾಜರ ವಿಸ್ತೃತಚರಿತ್ರೆಯನ್ನೂ ಮುಂಬರುವ ಗ್ರಂಥದಲ್ಲಿ ಅಳವಡಿಸಬೇಕಾಗುವದು. ಅವರ ಶಿಷ್ಯರು ಬರೆದ ಅನೇಕ ಪದಗಳನ್ನೂ ಆ ಗ್ರಂಥದಲ್ಲಿಯೇ ಸೇರಿಸಬೇಕಾಗಿದೆ. ಆ ಸುಯೋಗ ಬಂದಾಗ ಬರಲಿ. ಸದ್ಯಕ್ಕೆ ಪೂರ್ಣಚಂದ್ರನ ಆಹ್ಲಾದವನ್ನು ಚಂದ್ರಕಲೆಯಿಂದಲೇ ಪಡೆಯಬೇಕಾಗಿದೆ.

ಶ್ರೀ ಭಾವೂರಾವಮಹಾರಾಜರ ಪರಂಪರೆಯು ರೇವಣನಾಥರಿಂದ ಆರಂಭವಾಗಿದೆ. ಅವರಿಗೆ ರೇವಣಸಿದ್ಧರೆಂದೂ ಕರೆಯುತ್ತಾರೆ. ನವನಾಥರ ಹೆಸರುಗಳು ಕೆಳಗಿನ ಸಂಸ್ಕೃತ ಶ್ಲೋಕದಲ್ಲಿ ಬಂದಿವೆ. ಆ ಶ್ಲೋಕವು ಹೀಗಿದೆ:

> "ಗೋರಕ್ಷಜಾಲಂಧರಚರ್ಪಟಾಶ್ಚ।
> ಅಡ್‌ಭಂಗಕಾನೀಫಮಚ್ಛಿಂದರಾದ್ಯಾ॥
> ಚೌರಂಗಿರೇವಾಣ ಚ ಭರ್ತೃಸಂಜ್ಞಾ।
> ಭೂಮ್ಯಾಂ ಬಭೂವುರ್ನವನಾಥಸಿದ್ಧಾಃ" ॥ ೪ ॥

ಭಾವಾರ್ಥ: ಗೋರಕ್ಷ, ಜಾಲಂಧರ, ಚರ್ಪಟ, ಅಡ್ಭಂಗ, ಕಾನೀಫ, ಮಚ್ಛೇಂದ್ರ, ಚೌರಂಗಿ, ರೇವಾಣ ಮತ್ತು ಭರ್ತೃಸಂಜ್ಞಾ, ಈ ನವನಾಥ ಸಿದ್ಧರು ಭೂಮಿಯಮೇಲೆ ಆಗಿಹೋದರು.

# ಪ್ರಸ್ತಾವನೆ

ಸಂಸ್ಕೃತ ಬಲ್ಲವರಿಗೆ ಈ ಶ್ಲೋಕದಲ್ಲಿ ಕೆಲವು ದೋಷಗಳು ಕಂಡುಬರಬಹುದು. ಆದರೆ ನವನಾಥರ ಹೆಸರುಗಳನ್ನು ಹೇಳುವದೇ ಶ್ಲೋಕದ ಉದ್ದೇಶವಾಗಿದ್ದರಿಂದ, ಅವರಲ್ಲಿಯ ದೋಷಗಳನ್ನು ಕಾಣುವದು ಇಷ್ಟವಲ್ಲ. "ನವನಾಥ ಭಕ್ತಿಸಾರ" ಎಂಬ ಗ್ರಂಥದಲ್ಲಿ ರೇವಣಸಿದ್ಧರ ಚರಿತ್ರೆಯು ೩೪, ೩೫, ೩೬ನೆಯ ಅಧ್ಯಾಯಗಳಲ್ಲಿ ನಿರೂಪಿಸಲಾಗಿದೆ. ಆದರಲ್ಲಿ "ರೇವಣನಾಥ" ಈ ಹೆಸರು ಹೇಗೆ ಬಂದಿತೆಂಬುದನ್ನು ಹೀಗೆ ವಿವರಿಸಲಾಗಿದೆ:

"ಪೂರ್ವೀ ಅಠ್ಯಾಂಶಿ ಸಹಸ್ರ ಋಷೀ। ಝಾಲೇ ಆಹೇತ ವಿಧಿವೀರ್ಯಾಸೀ।
ತ್ಯಾಚ ಸಮಯೀ ರೇತ ಮಹೀಸೀ। ರೇವಾತೀರೀ ಪಡಿಯೇಲೆ ॥ ೧೭ ॥
ರೇವಾತೀರಿ ತೇಹೀ ರೇವೇತ। ರೇತ ಪಡಲೇ ಅಕಸ್ಮಾತ। ಚಮಸ ನಾರಾಯಣ
ಸಂಚಾರ ಕರೋನಿ ತ್ಯಾತ। ದೇಹಧಾರೀ ಮಿರವಲಾ ॥ ೧೮ ॥"

ಭಾವಾರ್ಥ: ಪೂರ್ವಕಾಲದಲ್ಲಿ ವಿಧಿಯ ವೀರ್ಯದಿಂದ ಎಂಬತ್ತೆಂಟು ಸಹಸ್ರ ಋಷಿಗಳು ಹುಟ್ಟಿದ್ದಾರೆ. ಆ ಸಮಯದಲ್ಲಿ ರೇವಾತೀರದಲ್ಲಿ (ನರ್ಮದಾ) ಭೂಮಿಯಮೇಲೆ ವೀರ್ಯವು ಬಿದ್ದಿತು. ರೇವಾತೀರದ ಉಸುಕಿನಲ್ಲಿ ಅಕಸ್ಮಾತ್ ಬಿದ್ದ ವೀರ್ಯದಲ್ಲಿ, ಚಮಸ ನಾರಾಯಣನು ಪ್ರವೇಶಿಸಿ ದೇಹಧಾರಿಯಾಗಿ ಮೆರೆದನು.

ರೇವಣನಾಥರು ಕೃಷಿವ್ಯವಸಾಯ ಮಾಡುತ್ತಿರುವಾಗ ಅವರಿಗೆ ಶ್ರೀ ದತ್ತಾತ್ರೇಯರ ಭೆಟ್ಟಿ ಹೇಗಾಯಿತು? ದತ್ತಾತ್ರೇಯರು ಅವರಿಗೆ ಪೂರ್ಣ

ಅನುಗ್ರಹ ಮಾಡದೆ ಕೇವಲ ಮಹಿಮಾಸಿದ್ಧಿಯನ್ನು ಹೇಗೆ ಕರುಣಿಸಿದರು? ಆ ಸಿದ್ಧಿಯ ಬಲದಿಂದ ರೇವಣನಾಥರು ಚಮತ್ಕಾರಗಳನ್ನು ಹೇಗೆ ಮಾಡಿದರು? ಮುಂದೆ ಮತ್ಸ್ಯೇಂದ್ರನಾಥರ ಆಗಮನವಾಗಿ ಅವರು ಅಷ್ಟಸಿದ್ಧಿಗಳನ್ನು ವಶಪಡಿಸಿಕೊಂಡಿದ್ದರಿಂದ ರೇವಣನಾಥರ ಮಾನಹಾನಿಯು ಹೇಗಾಯಿತು? ಆಮೇಲೆ ದತ್ತಾತ್ರೇಯರ ಪೂರ್ಣಾನುಗ್ರಹವನ್ನು ಸಂಪಾದಿಸಲು ಅವರು ಹೇಗೆ ಯತ್ನಿಸಿದರು? ಮತ್ಸ್ಯೇಂದ್ರನಾಥರು ಗಿರಿನಾರ ಪರ್ವತಕ್ಕೆ ಹೋಗಿ ಶ್ರೀ ದತ್ತಾತ್ರೇಯರನ್ನು ಹೇಗೆ ಕರೆತಂದರು, ನಂತರ ದತ್ತಾತ್ರೇಯರು, ರೇವಣನಾಥರನ್ನು ಆತ್ಮಜ್ಞಾನ ಪಾರಂಗತರನ್ನಾಗಿಮಾಡಿ ಎಲ್ಲ ವಿದ್ಯೆಗಳನ್ನೂ ಎಲ್ಲ ಕಲೆಗಳನ್ನೂ ಹೇಗೆ ಅನುಗ್ರಹಿಸಿದರೆಂಬುದರ ಸ್ವಾರಸ್ಯಪೂರ್ಣ ವರ್ಣನೆಯು "ನವಭಕ್ತಿಸಾರ" ಗ್ರಂಥದ ೩೬ನೆಯ ಅಧ್ಯಾಯದಲ್ಲಿದೆ. ಜಿಜ್ಞಾಸುಗಳು ಅದನ್ನು ಓದಿಕೊಳ್ಳಬೇಕು.

ರೇವಣನಾಥಚರಿತ್ರೆಯ ಮುಂದಿನ ಉಪಯುಕ್ತಭಾಗವು "ಸಿದ್ಧಾಂತಸಾರ"ವೆಂಬ ಗ್ರಂಥದಲ್ಲಿ ದೊರೆಯುತ್ತದೆ. ರೇವಣನಾಥರಿಂದ ಮರುಳಸಿದ್ಧರೆಂಬವರು ಅನುಗೃಹೀತರಾದರು. ಕರವೀರಕ್ಷೇತ್ರದಲ್ಲಿ ಸಿದ್ಧಪುರುಷರ ವಿರೋಧವನ್ನು ಮಾಡುತ್ತಿದ್ದ "ಮಾಯಿ" ಎಂಬ ಸ್ತ್ರೀಯು ಪಣಕಟ್ಟಿ ಎಷ್ಟೋ ಸಿದ್ಧಪುರುಷರನ್ನು ಜಯಿಸಿ, ಅವರನ್ನು ಬಂದಿಯಲ್ಲಿ ಇಟ್ಟಿದ್ದಳು. ಮರುಳಸಿದ್ಧರು ಆಕಸ್ಮಾತ್ತಾಗಿ ಅಲ್ಲಿಗೆ ಬಂದು ಅವಳ ಪಣವನ್ನು ಗೆದ್ದರು. ಆದರೆ ಅವಳ ಭ್ರಾಂತಿಯನ್ನು ಪೂರ್ಣವಾಗಿ ತೊಡೆದು ಹಾಕಲಿಕ್ಕೆ

ಗುರುಗಳ ಆಜ್ಞೆ ಇರಲಿಲ್ಲವಾದ್ದರಿಂದ ಅವರು ತಮ್ಮ ಗುರುಗಳನ್ನು ಕರವೀರಕ್ಕೆ ಬರುವಂತೆ ಪ್ರಾರ್ಥಿಸಿದರು. ಅದಕ್ಕೆ ಒಪ್ಪಿ, ರೇವಣನಾಥರು ಬರುವಾಗ, ದಾರಿಯಲ್ಲಿ ರೇವಣಗಿರಿ ಪರ್ವತದ ಮೇಲೆ ವಿಶ್ರಾಂತಿ ಪಡೆದರು. ಅವರು ಕರವೀರಕ್ಕೆ ಬಂದು ಮಾಯಿಯು ಕೊಟ್ಟ ವಿಷವನ್ನು ಪ್ರಾಶನಮಾಡಿ ಅವಳ ಶಕ್ತಿಯನ್ನೆಲ್ಲ ನಿರ್ಮೂಲ ಮಾಡಿದರು. ಆಗ ಅವಳು ಅವರಿಗೆ ಶರಣುಬಂದಳು. ಅವರು ಅವಳನ್ನು ಒಂದು ಕಿನ್ನರಿಯನ್ನಾಗಿ ಮಾರ್ಪಡಿಸಿ, ಅದನ್ನು ಯಾವಾಗಲೂ ಬಾರಿಸುತ್ತಿದ್ದರೆಂದು ಹೇಳುತ್ತಾರೆ.

ಈ ರೀತಿಯಾಗಿ ಆ ಮಾಯಿಯ ಮರ್ದನಮಾಡಿದ್ದರಿಂದ ಆ ಪ್ರದೇಶದಲ್ಲಿ ಅವರು ಕಾಡಸಿದ್ಧರೆಂಬ ಹೆಸರಿನಿಂದ ಪ್ರಸಿದ್ಧರಾದರು. ಮಾಯಿಯನ್ನು ಕಾಡಿದ್ದರಿಂದ ಅವರಿಗೆ ಕಾಡಸಿದ್ಧ ಎಂಬ ಹೆಸರು ಬಂದಿತೆಂದು "ಸನ್ಮಾರ್ಗವೈಭವ"ದಲ್ಲಿ ಹೇಳಲಾಗಿದೆ. ಕಾಡಿನಲ್ಲಿದ್ದು ಸಿದ್ಧಿಯನ್ನು ತಲುಪಿದ್ದಕ್ಕಾಗಿ ಕಾಡಸಿದ್ಧ ಎಂಬ ಹೆಸರು ಬಂದಿದೆ ಎಂದೂ ಕೆಲವರು ಹೇಳುತ್ತಾರೆ. ರೇವಣಸಿದ್ಧ ಹಾಗೂ ಕಾಡಸಿದ್ಧರ ಉಲ್ಲೇಖವು ಸ್ಕಂದಪುರಾಣದಲ್ಲಿಯ "ಶಿವಪಾರ್ವತಿ" ಸಂವಾದದಲ್ಲಿ ಬರುತ್ತದೆ ಎಂಬುದು "ಸನ್ಮಾರ್ಗವೈಭವ" ಕರ್ತರ ಅಭಿಪ್ರಾಯ. ಲೇಖಕರು ಆ ಗ್ರಂಥದ ಅವಲೋಕನ ಮಾಡಿಲ್ಲವಾದ್ದರಿಂದ ಆಬಗ್ಗೆ ನಿರ್ಧಾರವಾಗಿ ಹೇಳಲು ಬರುವಂತಿಲ್ಲ. ರೇವಣಸಿದ್ಧರಿಂದ ಮರುಳಸಿದ್ಧರೂ ಮತ್ತು ಮರುಳಸಿದ್ಧರಿಂದ ಕಾಡಸಿದ್ಧರಾದರೆಂದು ಆ ಗ್ರಂಥದಲ್ಲಿದೆ ಎನ್ನುತ್ತಾರೆ. ಏನೇ ಇರಲಿ,

ರೇವಣಸಿದ್ಧರೇ ಕಾಡಸಿದ್ಧರೆಂಬ ಹೆಸರಿನಿಂದ ಪ್ರಸಿದ್ಧರಾಗಿರಲಿ, ಅಥವಾ ರೇವಣಸಿದ್ಧರಿಂದ ಕಾಡಸಿದ್ಧರ ಉತ್ಪತ್ತಿಯಾಗಿರಲಿ, ಇವರೀರ್ವರಲ್ಲಿ ನಿಕಟ ಸಂಬಂಧವಿರುವದು ಮಾತ್ರ ನಿಶ್ಚಿತ. ಅವರ ಸಂಬಂಧದ ಪೂರ್ಣ ಇತಿಹಾಸವನ್ನು ಮುಂದಿನ ಗ್ರಂಥಕ್ಕೆ ಬಿಟ್ಟುಕೊಡುವದು ಅನಿವಾರ್ಯವಾಗಿದೆ.

ಮೇಲಿನ ವಿವರಣೆಯಿಂದ ಮತ್ಸ್ಯೇಂದ್ರನಾಥ ಹಾಗೂ ರೇವಣನಾಥ ಇವರಲ್ಲಿಯೂ ನಿಕಟ ಸಂಬಂಧವಿತ್ತೆಂಬುದು ವಾಚಕರ ಗಮನಕ್ಕೆ ಬಂದಿರಲು ಸಾಕು. ಮತ್ಸ್ಯೇಂದ್ರನಾಥರ ಸಂಪ್ರದಾಯದಲ್ಲಿ ಗೋರಕ್ಷನಾಥ, ಗೈನೀನಾಥ, ನಿವೃತ್ತಿನಾಥ, ಜ್ಞಾನದೇವ, ಸೋಪಾನ, ಮುಕ್ತಾಬಾಯಿ, ವಿಸೋಬಾಖೇಚರ, ನಾಮದೇವ ಮೊದಲಾದ ಪ್ರಸಿದ್ಧ ಸಂತರು ಆಗಿಹೋದರೆಂಬುದು ವಾಚಕರಿಗೆ ಗೊತ್ತಿರಬಹುದು. ಹಾಗೆಯೇ ರೇವಣನಾಥರ ಸಂಪ್ರದಾಯದಲ್ಲಿ, ಕಾಡಸಿದ್ಧ, ನಿಂಬರಗಿಮಹಾರಾಜ ಈ ಸಂತಮಹಾತ್ಮರು ಆಗಿಹೋಗಿದ್ದಾರೆ. ಶ್ರೀ ಕಾಡಸಿದ್ಧರ ಸ್ಥಾನವು ಕರವೀರದ ಹತ್ತಿರವಿರುವ ಸಿದ್ಧಗಿರಿ ಬೆಟ್ಟದ ಮೇಲಿದೆ. ಶ್ರೀ ಕಾಡಸಿದ್ಧರನ್ನು ಎಲ್ಲ ಲಿಂಗಾಯತರೂ ಶಂಕರನ ಅವತಾರವೆಂದೂ ಅವರು ಅಯೋನಿಸಂಭೂತರೆಂದೂ ಮನ್ನಿಸುತ್ತಾರಲ್ಲದೆ, ಅವರ ಮುಖ್ಯಧರ್ಮೋಪ ದೇಶಕರಾದ ಬಸವಣ್ಣನವರಿಗಿಂತ ಕಾಡಸಿದ್ಧರನ್ನು ಹೆಚ್ಚು ಗೌರವದಿಂದ ಕಾಣುತ್ತಾರೆ. ಬಸವಣ್ಣನವರು ಕೇವಲ ನಂದಿಯ ಅವತಾರವಾಗಿದ್ದರೆ, ಕಾಡಸಿದ್ಧರು ಪ್ರತ್ಯಕ್ಷ ಶಂಕರನ ಅವತಾರವಾಗಿದ್ದಾರೆಂಬುದೇ ಅದಕ್ಕೆ ಕಾರಣ. ಎಷ್ಟೋ ಲಿಂಗಾಯತ ಧರ್ಮಾನುಯಾಯಿಗಳು ಆತ್ಮಜ್ಞಾನಿಗಳಾಗಿ

# ಪ್ರಸ್ತಾವನೆ

ಹೋಗಿದ್ದಾರೆ. ಅದು ಅವರಲ್ಲಿಯ ಅನೇಕ ಶರಣರು ರಚಿಸಿದ ಭಾವಪೂರ್ಣ ಅನುಭವಪದಗಳಿಂದ ಸ್ಪಷ್ಟವಾಗುತ್ತದೆ. ಆ ಪದ್ಯಗಳ ಕುಸುಮಾವಲಿಯೊಂದನ್ನು ತಯಾರಿಸಬೇಕೆಂದು ನಮ್ಮ ಮಿತ್ರರೊಬ್ಬರು ನಿಶ್ಚಯಿಸಿದ್ದಾರೆ. ಮತ್ತು ಆ ಕಾರ್ಯವನ್ನು ಆರಂಭಿಸಿದ್ದಾರೆ. ಆತ್ಮಜ್ಞಾನಿಗಳು ಯಾವುದೇ ಧರ್ಮದಲ್ಲಿರಲಿ ಅಥವಾ ಧರ್ಮಶಾಖೆಯಲ್ಲಿರಲಿ, ಅವರು ಲಿಂಗಾಯತರೇ ಇರಲಿ, ವೈಷ್ಣವರೇ ಆಗಿರಲಿ ಅಥವಾ ದತ್ತೋಪಾಸಕರಾಗಿರಲಿ, ಆತ್ಮಜ್ಞಾನವಾದ ಮೇಲೆ, ಪರಸ್ಪರರನ್ನು ಪ್ರೀತಿವಿಶ್ವಾಸಗಳಿಂದ ಕಾಣುತ್ತಾರೆಂಬುದರ ಉತ್ಕೃಷ್ಟ ಉದಾಹರಣೆಯನ್ನು ಶ್ರೀ ಜ್ಞಾನದೇವಮಹಾರಾಜರ ಗಾಥೆಯಲ್ಲಿ ನೋಡಬಹುದು:

"ಓಂ ನಮೋ ಶಿವಾ ಆದಿ। ಕಾವಡಿ ಘೇತಲೀ ಖಾಂದೀ।
ಮಿಳಾಲೀ ಸಂತಮಾಂದೀ। ತ್ಯಾಂಚೇ ರಜರೇಣು ವಂದೀ ॥ ಧೃ ॥

ಗುರುಲಿಂಗಜಂಗಮ। ತ್ಯಾನೇ ದಾವಿಲಾ ಆಗಮ।
ಆಧಿವ್ಯಾಧಿ ಝಾಲೀ ಸಮ। ತೇಣೇ ವಿಶ್ರಾಮ ಪಾವಲೋ ರೇ ॥ ೧ ॥

ಜವಳೀ ಅಸತಾ ಜಗಜ್ಜೀವನ। ಕಾ ಧಾಂಡೋಳಿಸೀ ವನ।
ಏಕಾಗ್ರ ಕರೀ ಮನ। ತೇಣೇಹೋಯೀಲ ಸಮಾಧಾನ ರೇ ॥ ೨ ॥

ದೇಹಭಾವ ಜೇಥೇ ವಿರೇ। ತೇ ಸಾಧನ ದಿಧಲೇ ಪುರೇ।
ಬಾಪರಖುಮಾದೇವಿವರೇ। ವಿಠ್ಠಲುರೇ, ವಿಠ್ಠಲುರೇ, ವಿಠ್ಠಲುರೇ"
॥ ೩ ॥

ಭಾವಾರ್ಥ: ಓಂ, ಮೊದಲು ಶಿವನಿಗೆ ಸಮಸ್ಕಾರ. ಹಗಲಲ್ಲಿ ಕಾವಡಿ ಹೊತ್ತುಬಂದಿರುವ ಸಂತಸಮೂಹದ ಚರಣಧೂಳಿಗೆ ನಮಸ್ಕರಿಸುತ್ತೇನೆ. ಗುರುಲಿಂಗಜಂಗಮನು ಆಗಮವ ತೋರಿದನು. ಆಧಿವ್ಯಾಧಿಗಳು ಇಲ್ಲದಂತಾಗಿ ಸಮಸ್ಥಿತಿಗೆ ಬಂದು ನನಗೆ ವಿಶ್ರಾಂತಿ ದೊರಕಿತು. ಜಗಜ್ಜೀವನನೇ ಹತ್ತಿರವಿರುವಾಗ, ಕಾಡಿನಲ್ಲೇಕೆ ಹುಡಕುತ್ತೀ? ಮನಸ್ಸನ್ನು ಏಕಾಗ್ರಗೊಳಿಸು. ಆದರಿಂದ ಸಮಾಧಾನ ದೊರೆಯುವುದು. ದೇಹಭಾವ ಪೂರ್ಣವಡಗುವ ಸಾಧನವನ್ನು ದಯಪಾಲಿಸಿದ್ದಾನೆ, ತಂದೆ ರುಕ್ಮಿಣೀಪತಿ ವಿಠ್ಠಲನು.

ಶ್ರೀ ಜ್ಞಾನದೇವಮಹಾರಾಜರ ಕಾಲದಲ್ಲಿ ಸಹ ಆತ್ಮಜ್ಞಾನಿಗಳಾದ ಜಂಗಮರು ಇದ್ದರೆಂಬುದು ಇದರಿಂದ ಉತ್ತಮ ರೀತಿಯಲ್ಲಿ ಸಿದ್ಧವಾಗುತ್ತವೆ. ಅವರ ಯೋಗ್ಯತೆಯನ್ನು ಜ್ಞಾನದೇವರು ಮಾನ್ಯಮಾಡಿದ್ದಾರೆ. ಇರಲಿ, ಮೇಲೆ ಹೇಳಿದ ಶ್ರೀ ಕಾಡಸಿದ್ಧರಿಂದ ಅನುಗ್ರಹೀತರಾದ ನಾರಾಯಣರಾವ ಮಹಾರಾಜರು, ನಿಂಬರಗಿಮಹಾರಾಜರೆಂದು ಪ್ರಸಿದ್ಧರಾಗಿದ್ದಾರೆ. ಅವರ ವಿಸ್ತೃತ ಚರಿತ್ರೆಯನ್ನು ಚಿಮ್ಮಡದ ರಾಮಭಾವೂ ಮಹಾರಾಜರ ವೇಳೆಯಲ್ಲಿ ಅವರ ಶಿಷ್ಯರೊಬ್ಬರು "ಸನ್ಮಾರ್ಗವೈಭವ"ವೆಂಬ ಹೆಸರಿನಿಂದ ಪ್ರಸಿದ್ಧಿಸಿದ್ದಾರೆ. ಅದರಂತೆ ಅವರು ಸಹಜವಾಗಿ ಮಾಡಿದ ಉಪದೇಶವನ್ನು "ಮಹಾರಾಜರವರ ವಚನ"ವೆಂಬ ಹೆಸರಿನಿಂದ ವಿಜಾಪುರದ ಬಾಬಾಚಾರ್ಯ ಕಾವ್ಯ ಅವರು ಪ್ರಸಿದ್ಧಿಸಿದ್ದಾರೆ. ನಿಂಬರಗಿಮಹಾರಾಜರು ಸ್ವತಃ ರಚಿಸಿದ ಕೆಲವು ಕನ್ನಡಪದಗಳನ್ನು ಆ ಪುಸ್ತಕದ ಕೊನೆಯಲ್ಲಿ ಸೇರಿಸಲಾಗಿದೆ.



ಶ್ರೀ ಸದ್ಗುರುನಾಥ ನಾರಾಯಣರಾವ ಭಾವೂಸಾಹೇಬ
ಊರ್ಫ ನಿಂಬರಗಿ ಮಹಾರಾಜ ಇವರ ಸಮಾಧಿ ನಿಂಬರಗಿ.

ಜನ್ಮ: ಕ್ರಿ.ಶ. ೧೭೮೯ ಸಮಾಧಿ : ಕ್ರಿ.ಶ. ೧೮೮೫.

ಶ್ರೀ ನಿಂಬರಗಿ ಮಹಾರಾಜರ ಹಸ್ತಾಕ್ಷರ



(ಭಾವೂ ವಲ್ಲದ ಭೀಮಣ್ಣಾ ನಿರಾಳಿ)

# ಪ್ರಸ್ತಾವನೆ

ನಿಂಬರಗಿಮಹಾರಾಜರ ಜನ್ಮವು, ಲಿಂಗಾಯತ ನೀಲವಾಣಿ ಜಾತಿಯಲ್ಲಿ ಶಕೆ ೧೭೧೨ರಲ್ಲಿಯೂ ಅವರ ನಿರ್ಯಾಣವು ಶಕೆ ೧೮೦೭ರ ಚೈತ್ರ ಶುದ್ಧ ದ್ವಾದಶಿಯಂದು ಆಯಿತು. ಅವರು ತಮ್ಮ ೨೫ನೆಯ ವಯಸ್ಸಿನಲ್ಲಿ ಸಿದ್ಧಗಿರಿಗೆ ಹೋದ ಸಮಯದಲ್ಲಿ (೧-೨೨-೨೩ ಪೂ.ಸ) ಅವರಿಗೆ ಜಂಗಮರೂಪದಲ್ಲಿ ಕಾಡಸಿದ್ಧರು ಅನುಗ್ರಹಿಸಿದರು. ಮುಂದೆ ಮನೆಗೆ ಹಿಂತಿರುಗಿದ ನಂತರ ಅವರು ಆರು ವರ್ಷಗಳವರೆಗೆ ಸಾಧನವನ್ನು ಸರಿಯಾಗಿ ಮಾಡಲಿಲ್ಲ. ನಂತರ ಪುನಃ ಕಾಡಸಿದ್ಧರು ಅವರಿಗೆ ದರ್ಶನಕೊಟ್ಟು ತಮ್ಮ ಅಲೌಕಿಕ ಸಾಮರ್ಥ್ಯವನ್ನು ತೋರಿಸಿ ಪುನಃ ಸಾಧನೆ ಮಾಡುವಂತೆ ಅವರಿಗೆ ನೆನಪು ಕೊಟ್ಟರು. ಇದಾದ ನಂತರ ನಾರಾಯಣರಾಯರು ೩೭ ವರ್ಷಗಳವರೆಗೆ ಅವಿಶ್ರಾಂತ ಸಾಧನೆ ಮಾಡಿ ಸಿದ್ಧಗಿರಿಗೆ ಹೋಗಿ ಸದ್ಗುರುವಿಗೆ ಭೆಟ್ಟಿಯಾಗಿ ಲೋಕೋದ್ಧಾರದ ಕಾರ್ಯಕ್ಕೆ ಅಪ್ಪಣೆಪಡೆದರು. ಮುಂದೆ ೨೮ ವರ್ಷಗಳಕಾಲ ಜಗದುದ್ಧಾರದ ಕಾರ್ಯ ಮಾಡಿ ನಿಂಬರಗಿಯಲ್ಲಿ ದೇಹವಿಟ್ಟರು. ಅವರ ಸಮಾಧಿಯಮೇಲೆ ದೇವಾಲಯವನ್ನು 'ಕಟ್ಟುವ ಕೆಲಸವು ನಿಂಬರಗಿಯಲ್ಲಿ ನಡೆದಿದೆ.

ನಿಂಬರಗಿಮಹಾರಾಜರ ಅಲ್ಪಚರಿತ್ರೆಯು "ಪಂಚ ಸಮಾಸಿಯ" ಮೊದಲನೆಯ ಸಮಾಸದಲ್ಲಿದೆ. ಜಿಜ್ಞಾಸುಗಳು ಅದನ್ನು ಓದಿಕೊಳ್ಳಬೇಕು. ಅವರು ಅಲೌಕಿಕ ಪುರುಷರಾಗಿ ಹೋದರು. ಸ್ವಾಮಿ ವಿವೇಕಾನಂದರು ಒಂದೆಡೆ ಹೀಗೆ ಹೇಳಿದ್ದಾರೆ:

"The greatest men in the world have passed away unknown. The Buddhas and the Christs that we know are but second-rate heroes in comparison with the greatest men of whom the world knows nothing. Silently they live and silently they pass away; and in time, their thoughts find expression in Buddhas and Christs and it is these latter that become known to us" -On Freedom.

"ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠರಾದ ಮಹಾತ್ಮರು ಪ್ರಸಿದ್ಧಿಯನ್ನು ಪಡೆಯದೆ ಗತಿಸಿ ಹೋಗಿದ್ದಾರೆ. ಬುದ್ಧಕ್ರಿಸ್ತರು ನಮಗೇನೋ ಪರಿಚಿತರಿರಬಹುದು. ಆದರೆ ಇವರು ಈ ಅಜ್ಞಾತ ಮಹಾತ್ಮರ ಮುಂದೆ ಏನೂ ಅಲ್ಲ. ಈ ಅಜ್ಞಾತ ಸತ್ಪುರುಷರ ಜೀವನ ಸದ್ದಿಲ್ಲದ್ದು. ಅದರಂತೆ ನಿರ್ಯಾಣವೂ ಸದ್ದಿಲ್ಲದ್ದು. ಕಾಲಗತಿಸಿದಂತೆ ಅವರ ವಿಚಾರಗಳು ಬುದ್ಧ-ಕ್ರಿಸ್ತರಲ್ಲಿ ಅಭಿವ್ಯಕ್ತವಾಗುತ್ತವೆ. ಆ ಬುದ್ಧ-ಕ್ರಿಸ್ತರೇ ನಮಗೆ ಪರಿಚಿತರಾಗಿದ್ದಾರೆ." -(ಸ್ವಾತಂತ್ರ್ಯದ ಬಗ್ಗೆ).

ನಾರಾಯಣರಾವ ಮಹಾರಾಜರು ಅಂಥ ಮಹಾಪುರುಷರು: ದಾಸಬೋಧ ಮತ್ತು ತುಕಾರಾಮರ ಅಭಂಗಗಳ ಮೇಲೆ ಅವರಿಗೆ ಅತ್ಯಂತ ಶ್ರದ್ಧೆಯಿತ್ತು. ಶ್ರೀ ಕಾಡಸಿದ್ಧರ ಅನುಗ್ರಹದಿಂದ ಮತ್ತು ತಮ್ಮ ಸಾಧನದ ಬಲದಿಂದ ಅವರು ಪೂರ್ಣ ಆತ್ಮಜ್ಞಾನದ ಅನುಭವವನ್ನು ಪಡೆದಿದ್ದರು.

ಅವರು ತಮ್ಮ ಮಾರ್ಗವನ್ನು ಅತ್ಯಂತ ಗುಪ್ತವಾಗಿ ಇಟ್ಟಿದ್ದರು. ಆದರಿಂದ ಅವರ ಯೋಗ್ಯತೆಯು ಅವರ ಜೀವದ ಗೆಳೆಯರಿಗೂ ಗೊತ್ತಿರಲಿಲ್ಲ.

"ಗುಪ್ತ ಆಹೇ ಉದಂಡ ಧನ। ಕಾಯ ಜಾಣತೀ ಸೇವಕ ಜನ।
ತ್ಯಾಸ ಆಹೇ ತೇ ಜ್ಞಾನ। ಬಾಹ್ಯಾಕಾರಾಚೇ॥"

"ವಿಪುಲ ಸಂಪತ್ತಿಯು ಗುಪ್ತವಾಗಿಡಲ್ಪಟ್ಟಿದ್ದರೂ, ಸೇವಕರು ಅದನ್ನೇನು ಬಲ್ಲರು? ಅವರಿಗೆ ಹೊರಗಿನದಷ್ಟೇ ತಿಳಿದಿರುತ್ತದೆ" ಎನ್ನುವಂತೆ ಅವರ ಯೋಗ್ಯತೆಯನ್ನು ಇತರರು ಹೇಗೆ ತಿಳಿಯಬಲ್ಲರು? ಅವರು ಜೀರ್ಣವಾಗಿದ್ದ ಆತ್ಮಜ್ಞಾನದ ಜೀರ್ಣೋದ್ಧಾರ ಮಾಡಿದರು. ಅವರು ನೆಟ್ಟ ಆತ್ಮಜ್ಞಾನವೃಕ್ಷವು ಬೆಳೆದು ಮುಂದೆ ಅದಕ್ಕೆ ಫಲಗಳು ಬಂದಂತೆ, ಅವರ ಯೋಗ್ಯತೆಯೂ ಪ್ರಕಟವಾಗುವುದು.

ನಾರಾಯಣರಾವಮಹಾರಾಜರ ಶಿಷ್ಯರಲ್ಲಿ ಪ್ರಮುಖರಾದವರೆಂದರೆ ರಘುನಾಥಪ್ರಿಯ ಸಾಧುಗಳು. ಇವರು ಬಾಲಬ್ರಹ್ಮಚಾರಿಗಳು. ಕಾಶೀಯಾತ್ರೆಮಾಡಿ ರಾಮೇಶ್ವರಕ್ಕೆ ಹೋಗುವಾಗ ನಿಂಬರಗಿ ಹತ್ತರವಿರುವ ಸೊನಗಿ ಗ್ರಾಮದಲ್ಲಿದ್ದಾಗ ತಮ್ಮ ತಪೋಬಲದಿಂದ ಅವರು ಅನೇಕ ಚಮತ್ಕಾರಗಳನ್ನು ಮಾಡಿದರು ಮತ್ತು ಪ್ರಸಿದ್ಧಿಗೆ ಬಂದರು. ನಂತರ ನಿಂಬರಗಿಮಹಾರಾಜರು ಅಲ್ಲಿಗೆ ಹೋಗಿ "ನಿಮ್ಮ ಮಾರ್ಗವು ಕೇವಲ ಪುಣ್ಯ ಸಂಚಯ ಮಾಡುವಂಥದು, ಅದು ಆತ್ಮಜ್ಞಾನದ ಮಾರ್ಗವಲ್ಲ" ಎಂದು

ಅವರಿಗೆ ಮನವರಿಕೆ ಮಾಡಿಕೊಟ್ಟರು. ರಘುನಾಥಪ್ರಿಯ ಸಾಧುಗಳು ಶರಣುಬಂದಮೇಲೆ ಅವರಿಗೆ ಅನುಗ್ರಹ ಮಾಡಿದರು (ಪ.ಸ. ೧,೩೦,೩೧). ನಂತರ ಸಾಧುಬುವಾ ಅವರು ನಿಂಬರಗಿಯ ಹತ್ತಿರದ ಉಮದಿಗ್ರಾಮಕ್ಕೆ ಹೋಗಿ ವಾಸಮಾಡಿದರು. ಅಲ್ಲಿ ಹನ್ನೆರಡು ವರ್ಷ ಸಾಧನೆಮಾಡಿ ಜ್ಞಾನವನ್ನು ಸಂಪಾದಿಸಿದರು. ನಂತರ ಗುರ್ವಾಜ್ಞೆ ಪಡೆದು ಅನೇಕರನ್ನು ಅನುಗ್ರಹಿಸಿದರು. ಆಮೇಲೆ ಅವರು ಚಿಮ್ಮಡಗ್ರಾಮಕ್ಕೆ ಹೋಗಿ ವಾಸ ಮಾಡಿದರು. ಅಲ್ಲಿ ಅವರು ಶಕೆ ೧೮೦೧ರ ಚೈತ್ರಶುದ್ಧ ತೃತೀಯಾದ ದಿನ ದೇಹವಿಟ್ಟರು. ಅವರನ್ನು ದಹನಮಾಡಿದ ಸ್ಥಳದಲ್ಲಿ ಒಂದು ದೊಡ್ಡ ವೃಕ್ಷವಿದೆ. ಅಲ್ಲಿಯ ತಾಪನಾಶೀ ತೀರ್ಥದಲ್ಲಿ ಅವರ ಶಿಷ್ಯರಾದ ರಾಮಭಾವೂಮಹಾರಾಜರು ಒಂದು ಶಾಲಿಗ್ರಾಮವನ್ನು ಸ್ಥಾಪಿಸಿದ್ದಾರೆ.

ರಘುನಾಥಪ್ರಿಯ ಸಾಧುಗಳು ಉಮದಿಯಲ್ಲಿ ವಾಸಿಸುವಾಗ ಭಾವೂರಾವ ಮಹಾರಾಜರ ಅಂತಃಕರಣವನ್ನು ನಿರ್ಗುಣ ಉಪಾಸನೆಯ ಕಡೆಗೆ ಹೇಗೆ ಸೆಳೆದುಕೊಂಡರು? ಅವರನ್ನು ನಿಂಬರಗಿಮಹಾರಾಜರ ಕಡೆಗೆ ಹೇಗೆ ಕರೆದೊಯ್ದರು? ಗುರ್ವಾಜ್ಞೆಯಿಂದ ಸ್ವತಃ ತಾವು ಭಾವೂರಾಯರಿಗೆ ಹೇಗೆ ಅನುಗ್ರಹಿಸಿದರು? (ಪ.ಸ-೨-೧೭-೨೧), ಮುಂದೆ ಭಾವೂರಾಯರು ಪ್ರಪಂಚದಲ್ಲಿದ್ದುಕೊಂಡು ಪರಮಾರ್ಥವನ್ನು ಹೇಗೆ ಸಾಧಿಸಿದರು? (೨೧-೩೧), ಲೋಕನಿಂದೆಗೆ ಅವರು ಹೇಗೆ ಬಗ್ಗಲಿಲ್ಲ? (೩೧-೩೯), ಗುರುಗಳ ಮೇಲೆ ವಿಶ್ವಾಸವಿಟ್ಟು, ಎಷ್ಟೋ ವರ್ಷಗಳವರೆಗೆ ಹೇಗೆ ಉಗ್ರ

# ಪ್ರಸ್ತಾವನೆ

ತಪಸ್ಸನ್ನಾಚರಿಸಿದರು? (೪೦-೪೫), . ನಿಂಬರಗಿಮಹಾರಾಜರ ದೇಹಾಂತವಾದಮೇಲೆ ಶೋಕದಿಂದ ವಿಹ್ವಲರಾಗಿ ಇಮ್ಮಡಿ ಜೋರಿನಿಂದ ಸಾಧನಮಾಡಿ ಅದ್ವೈತಸಿದ್ಧಿಯನ್ನು ಹೇಗೆ ಗಳಿಸಿದರು? (೫೦-೫೫), ಇದೆಲ್ಲದರ ವರ್ಣನೆಯು ಪಂಚಸಮಾಸಿಯ ಎರಡನೆಯ ಸಮಾಸದಲ್ಲಿ ಬಂದಿದೆ. ಪೂರ್ಣ ಅದ್ವೈತ ಬೋಧವಾದನಂತರ ಕೇವಲ ಲೋಕಾನುಗ್ರಹ ಮಾಡುವಇಚ್ಛೆಯಿಂದ ಊರೂರುಗಳನ್ನು ಸುತ್ತಾಡಿ ಜನರಲ್ಲಿ ಭಕ್ತಿಪ್ರಸಾರ ಹೇಗೆ ಮಾಡಿದರು, ಭಕ್ತ ಸಮುದಾಯವನ್ನು ಬೆಳೆಸುತ್ತಿರುವಾಗ ಅವರ ವರ್ತನೆ ಹೇಗೆ ಇತ್ತು ಎಂಬುದರ ಅಲ್ಪ ಪರಿಚಯವನ್ನು ಅದೇ ಸಮಾಸದಲ್ಲಿ (೫೬ ರಿಂದ ೭೪) ಶ್ಲೋಕಗಳಲ್ಲಿ ಕಾಣಬಹುದು. ಅವರ ವಯಸ್ಸು ಈಗ ೭೮ ವರ್ಷವಿದ್ದು ಅವರಿಗೆ ಇಬ್ಬರು ಮಕ್ಕಳಿದ್ದಾರೆ. ಅವರು ವಿಜಾಪುರ ಜಿಲ್ಲೆಯಲ್ಲಿಯ ಇಂಚಗೇರಿಯಲ್ಲಿ ಒಂದು ಮಠ ಸ್ಥಾಪಿಸಿದ್ದಾರೆ. ಅಲ್ಲಿ ವರ್ಷದಲ್ಲಿ ಮೂರು ಸಲ ಉತ್ಸವವಾಗುತ್ತದೆ. ಚೈತ್ರ ಶುದ್ಧ ನವಮಿಯಿಂದ ಹುಣ್ಣಿಮೆಯವರೆಗೆ ಸಪ್ತಾಹ ನಡೆಯುತ್ತದೆ. ನಂತರ ಇಡೀ ಶ್ರಾವಣಮಾಸ ಅವರ ಶಿಷ್ಯರೆಲ್ಲರೂ ಸೇರಿ ತಮ್ಮ ಸಾಧನವನ್ನು ಬೆಳೆಸಿಕೊಳ್ಳುತ್ತಾರೆ. ಮತ್ತೆ ಮಾರ್ಗಶೀರ್ಷ ಶುದ್ಧ ನವಮಿಯಿಂದ ಹುಣ್ಣಿಮೆಯವರೆಗೆ ಎರಡನೆಯ ಸಪ್ತಾಹ ಜರುಗುತ್ತದೆ. ಆ ಮಠದ ಮತ್ತು ಸಪ್ತಾಹಗಳ ವರ್ಣನೆಯು ಪಂಚಸಮಾಸಿಯ ಮೂರನೆಯ ಸಮಾಸದಲ್ಲಿದೆ. ಮಹಾರಾಜರ ಮುಖ್ಯಶಿಷ್ಯರ ವರ್ಣನೆಯು ನಾಲ್ಕನೆಯ ಸಮಾಸದಲ್ಲಿದೆ. ಐದನೆಯ ಸಮಾಸದಲ್ಲಿ ವಿವಿಧ ವಿಷಯಗಳನ್ನು ವಿವರಿಸಿದ್ದಾರೆ.

ಯಾವುದೇ ಮಹಾಪುರುಷನ ಯೋಗ್ಯತೆಯು ಅವನ ಹತ್ತಿರ ಬಹಳ ದಿನಗಳವರೆಗೆ ಸತತವಾಗಿ ಇರದಹೊರತು ತಿಳಿಯುವುದಿಲ್ಲ. ಈ ನಿಯಮದಂತೆ ಭಾವೂರಾವ ಮಹಾರಾಜರ ಯೋಗ್ಯತೆಯ ಅರಿವು ಅಲ್ಪಮಟ್ಟಿಗಾದರೂ ಆಗಬೇಕಾದರೆ ಬಹಳ ದಿವಸಗಳವರೆಗೆ ಅವರ ಹತ್ತಿರವಿದ್ದು ಅವರ ಪ್ರತಿಯೊಂದು ಚಟುವಟಿಕೆಯನ್ನೂ ಅವಲೋಕಿಸಬೇಕು. ಅವರ ಪೂರ್ಣಯೋಗ್ಯತೆ ತಿಳಿಯಬೇಕಾದರೆ ಪ್ರತ್ಯಕ್ಷ ಅವರಂತೆ ಆಗಬೇಕು. "ತುಕಾ ಮ್ಹಣೆ ಅಂಗೇ ಹ್ವಾವೇ ತೇ ಆಪಣ। ತರೀಚ ಮಹಿಮಾನ ಯೇಈಲ ಕಳೋ॥" ನಾವೂ ಅವರಂತೇ ಆಗಬೇಕು ಎಂದರೇನೆ ಅವರ ಯೋಗ್ಯತೆಯನ್ನು ತಿಳಿಯಬಹುದು ಎಂದು ತುಕಾರಾಮರು ಹೇಳಿದ್ದಾರೆ. ಅದು ಶಕ್ಯವಿಲ್ಲವೆಂದಮೇಲೆ ಅವರ ಯೋಗ್ಯತೆಯ ಸಾಧಾರಣ ತಿಳುವಳಿಕೆಯಾಗಬೇಕೆಂದರೂ ಅವರ ಸಹವಾಸದಲ್ಲಿ ಇರುವವರಿಂದಲೇ ತಿಳಿಯುವದು. ಪ್ರಸ್ತುತ ಲೇಖಕನಿಗೆ ಇತ್ತೀಚೆಗೆ ಬಹಳ ದಿವಸ ಅವರ ಹತ್ತಿರ ಇರುವ ಅವಕಾಶ ದೊರಕಿತು. ಆಗ ಅವರ ಪ್ರತಿಯೊಂದು ಚಟುವಟಿಕೆಯ ಸೂಕ್ಷ್ಮ ಅವಲೋಕನ ಮಾಡಿದ್ದೂ ಆಯಿತು. ಅವರ ನಿಸ್ಪೃಹತೆ, ದಯೆ, ನಿಯಮಿತತನ, ದೃಢತರಮನೋನಿಗ್ರಹ, ಅಬಾಲವೃದ್ಧರ ಬಗ್ಗೆ ಅವರಲ್ಲಿದ್ದ ಸಮಭಾವ, ಶಿಷ್ಯರ ಮೇಲಿನ ಅಪಾರಪ್ರೇಮ, ಗುರುಗಳ ಹಾಗೂ ಆತ್ಮಜ್ಞಾನದ ಮೇಲೆ ಅವರಿಗಿರುವ ನಿಸ್ಸೀಮ ಭಕ್ತಿ, ಅಲೌಕಿಕಶಾಂತಿ, ಉಪಾಧಿಯಿಂದ ಅಲಿಪ್ತರಾಗಿರುವ ಶೈಲಿ ಹಾಗೂ ಇನ್ನಿತರ ಅನೇಕ ಸದ್ಗುಣಗಳು ಮೇಲೆಮೇಲೆ

ನೋಡುವವರಿಗೂ ಸಹ ಕಾಣಿಸುತ್ತವೆ. ಹೆಚ್ಚಿಗೆ ಹೇಳುವದೇನು? ದಾಸಬೋಧದಲ್ಲಿ ಹೇಳಿದ ನಿಸ್ಪೃಹವರ್ತನ (೧೧:೧೦), ನಿಸ್ಪೃಹಲಕ್ಷಣ (೧೪:೧) ನಿಸ್ಪೃಹವ್ಯಾಪಲಕ್ಷಣ (೧೫:೨) ಮುಂತಾದ ಆಚಾರಬೋಧನೆಯ ಸಮಾಸಗಳಲ್ಲಿಯ ಪ್ರತಿಯೊಂದು ಶ್ಲೋಕದಲ್ಲಿ ಹೇಳಿದಂತೆ ಅವರು ತಮ್ಮ ವರ್ತನೆಯನ್ನು ಇಟ್ಟುಕೊಂಡಿದ್ದಾರೆ.

ಯಾರಿಗೆ ಸಾಧು ಎನ್ನಬೇಕು, ಎನ್ನುವುದರ ಬಗ್ಗೆ ಬಹಳ ಜನರ ಕಲ್ಪನೆ ಅತ್ಯಂತ ಚಮತ್ಕಾರಿಕವಾಗಿರುತ್ತದೆ. ಅನುಭವಸಿದ್ಧ ಬ್ರಹ್ಮಜ್ಞಾನವಿದೆಯೇ ಎಂದು ಯಾರೂ ನೋಡುವುದಿಲ್ಲ. ನಾನಾಬಗೆಯ ಚಮತ್ಕಾರಗಳನ್ನು ಮಾಡುವವನೂ, ಅಪ್ರಬುದ್ಧನಂತೆ ಮಾತನಾಡುವವನೂ ಸಾಧುವು. ಅವನ ಶರೀರವು ವೃದ್ಧಾಪ್ಯಕಾಲದಲ್ಲಿಯೂ ತೇಜಃಪುಂಜವಾಗಿದ್ದರೆ, ಇಲ್ಲವೆ ಅವನ ಶಿಷ್ಯಸಮುದಾಯವು ದೊಡ್ಡದಾಗಿದ್ದರೆ, ಅವನು ಸಾಧುವು. ಅವನ ಶಿಷ್ಯವರ್ಗದಲ್ಲಿ ಅನೇಕ ವಿದ್ವಾಂಸರೂ, ಶ್ರೀಮಂತರೂ ಇದ್ದರೆ, ಇಲ್ಲವೆ ಅವನು ಉಪನಿಷತ್ತು, ಭಾಷ್ಯ ಮುಂತಾದವುಗಳ ಉತ್ಕೃಷ್ಟ ವಿವರಣೆ ಮಾಡಬಲ್ಲವನಿದ್ದರೆ ಅವನೇ ಸಾಧು, ಎಂಬ ಅನೇಕ ಕಲ್ಪನೆಗಳು ಜನರಲ್ಲಿ ಗೊಂದಲವನ್ನುಂಟುಮಾಡಿವೆ. ಆತ್ಮಜ್ಞಾನವು ಲೋಪವಾಗಿರುವುದರಿಂದ ಎಲ್ಲೆಡೆಯಲ್ಲಿಯೂ ಅಜ್ಞಾನಾಂಧಕಾರವು ಆವರಿಸಿದೆ. ಈ ಅಜ್ಞಾನಾಂಧಕಾರವನ್ನು ನಾಶಮಾಡುವ ಶ್ರೇಷ್ಠಕಾರ್ಯವನ್ನು ಭಾವೂರಾವ ಮಹಾರಾಜರು

ಮಾಡುತ್ತಿದ್ದಾರೆ. ಅವರು ಸ್ವತಃ ಚಮತ್ಕಾರಗಳನ್ನು ಮಾಡುವುದಿಲ್ಲ; ಆದರೆ ಅನೇಕ ಚಮತ್ಕಾರಗಳು ತಾವಾಗಿಯೇ ಆಗುತ್ತಿರುತ್ತವೆ:

"ಆಪಣ ಮಹಂತೀ ನ ಕರಿತೀ। ಪರೀ ಸರ್ವತ್ರ ಚಮತ್ಕಾರ ಹೋತೀ।
ಕಾ ತೇ ಪುಣ್ಯ ಮಾರ್ಗೇ ಚಾಲತೀ ಮ್ಹಣೋನಿಯಾ॥
ಜ್ಞಾನಾಸ ಸಿದ್ಧೀಚಾ ವಿಟಾಳ। ಐಸೇ ವದತೀ ವೇಳೋವೇಳ।
ಪರೀ ತೋ ಗೋವಿಂದ ಕೃಪಾಳ। ಭಕ್ತಕಾಜ ಕರೀತಸೇ॥"

(ಪ.ಸ. ೨. ೭೧-೭೨).

"ಅವರು ಸ್ವತಃ ಚಮತ್ಕಾರ ಮಾಡುವುದಿಲ್ಲ. ಆದರೂ ಚಮತ್ಕಾರಗಳು ಸಂಭವಿಸುತ್ತಿವೆ. ಏಕೆಂದರೆ ಅವರು ಪುಣ್ಯಮಾರ್ಗದಲ್ಲಿ ನಡೆಯುತ್ತಾರೆ. ಜ್ಞಾನವ ಸಿದ್ಧಿಯಿಂದ ದೂರವಿರುತ್ತವೆಂದು ಅವರು ಬಾರಿಬಾರಿಗೆ ಹೇಳುತ್ತಾರೆ. ಆದರೆ ಕೃಪಾಳುವಾದ ಭಗವಂತನು ಭಕ್ತರ ಸಲುವಾಗಿ ಮಾಡಬೇಕಾದುದನ್ನು ಮಾಡುತ್ತಾನೆ" (ಪ.ಸ. ೨. ೭೧-೭೨).

"ಶಬ್ದಜ್ಞಾನಕ್ಕೆ ಮರುಳಾಗಬೇಡಿರಿ", ಎಂದು ಅವರು ಯಾವಾಗಲೂ ಹೇಳುತ್ತಿರುತ್ತಾರೆ. "ಬಂಧುಗಳೇ, ನಾನು ಒಬ್ಬ ಕುರುಬ. ನನಗೆ ವ್ಯಾಕರಣ, ಕೋಶ ಯಾವುದೂ ಗೊತ್ತಿಲ್ಲ. ಕೃಪಾಳುವಾದ ನನ್ನ ಸ್ವಾಮಿಯು ನನ್ನ ಹೃದಯದಲ್ಲಿ ವಾಸಮಾಡಿದ್ದಾನೆ", ಎಂದೂ ಅವರು ಮೇಲಿಂದ ಮೇಲೆ ಹೇಳುತ್ತಾರೆ.

# ಪ್ರಸ್ತಾವನೆ

ಮಹಾರಾಜರಿಗೆ ಸಂಸ್ಕೃತ ಬರುವುದಿಲ್ಲ. ಉಪನಿಷತ್ತು ಮತ್ತು ಭಾಷ್ಯಗಳನ್ನು ಓದದ ಇವರು ಸಾಧು ಹೇಗೆ ಆಗಬಲ್ಲರೆಂದು ಎಷ್ಟೋ ಜನರು ಆಕ್ಷೇಪಿಸುತ್ತಾರೆ. ಅಂಥ ಅಜ್ಞ ಜನರಿಗೆ ವಿದ್ವತ್ತೆ ಮತ್ತು ಆತ್ಮಜ್ಞಾನ ಇವುಗಳ ನಡುವಿನ ಅಂತರ ಎಳ್ಳಷ್ಟೂ ತಿಳಿದಿಲ್ಲ. ವೇದವು ಹೀಗೆ ಘೋಷಿಸುತ್ತದೆ:

"ದ್ವೇ ವಿದ್ಯೆ ಇತಿ ವೇದಿತವ್ಯೆ ಋತ್ಪರಾ ಚಾಪರಾ ಚೇತಿ।
ಅಪರಾ ಯದ್ಯೃಗ್ವೇದೋ ಯಜುರ್ವೇದೋಽಥರ್ವವೇದಃ ಸಾಮವೇದಃ।
ಪರಾ ಯಯಾ ತದಕ್ಷರಮಧಿಗಮ್ಯತೇ॥"

"ಇಲ್ಲಿ ಪರಾ ಮತ್ತು ಅಪರಾ ವಿದ್ಯೆ ಎಂಬ ಎರಡು ತರದ ವಿದ್ಯೆಗಳನ್ನು ಕಲಿತುಕೊಳ್ಳುವದಿದೆ. ವೇದಾಭ್ಯಾಸವು ಅಪರಾ ವಿದ್ಯೆಯು, ಕೆಳಮಟ್ಟದ ವಿದ್ಯೆಯು; ಯಾವ ವಿದ್ಯೆಯಿಂದ ಅವಿನಾಶಿಯಾದ ವಸ್ತುವು ಪ್ರಾಪ್ತವಾಗುವುದೋ, ಅದು ಪರಾ ವಿದ್ಯೆ."

ವಿದ್ವತ್ತೆ ಮತ್ತು ಆತ್ಮಜ್ಞಾನ, ಪರಾ ಮತ್ತು ಅಪರಾ ವಿದ್ಯೆ, ಶಬ್ದಜ್ಞಾನ ಮತ್ತು ನಿಶ್ಶಬ್ದಜ್ಞಾನ, ಇವುಗಳಲ್ಲಿ ಭೂಮ್ಯಾಕಾಶದಷ್ಟು ಅಂತರವಿದೆ. ವೇದಶಾಸ್ತ್ರಗಳ ಪಠಣ ಮಾಡಿದರೆ, ಆತ್ಮಜ್ಞಾನವಾಗುವುದೆಂದೇನೂ ಇಲ್ಲ. ವೇದಶಾಸ್ತ್ರ ಅಧ್ಯಯನಮಾಡದೆ ಇದ್ದರೂ ಸಹ ಆತ್ಮಜ್ಞಾನವಾಗುವುದು ಸಾಧ್ಯವಿದೆ.

"ಸ್ಥಾಣುರಯಂ ಭಾರಹರೋಽವೇದಾನಧೀತ್ಯ ನ ವಿಜಾನಾತಿ ಯೋಽರ್ಥಮ್॥"
"ಅನುಭೂತಿಂ ವಿನಾ ಮೂಢೋ ವೃಥಾ ಬ್ರಹ್ಮಣಿ
ಮೋದತೆ। ಪ್ರತಿಬಿಂಬಿತಶಾಖಾಗ್ರಫಲಾಸ್ವಾದನಮೋದವತ್॥"

"ವೇದಗಳನ್ನು ಅಧ್ಯಯನ ಮಾಡಿಯೂ ಅರ್ಥವನ್ನು ತಿಳಿದುಕೊಳ್ಳದವನು ಅನುಭವವಿಲ್ಲದ ಮೂಢನು. ಬ್ರಹ್ಮನಲ್ಲಿ ಆನಂದಿಸುವೆನೆನ್ನುವುದು ಟೊಂಗೆಯ ತುದಿಯಲ್ಲಿದ್ದ ಹಣ್ಣಿನ ಪ್ರತಿಬಿಂಬಿವನ್ನು ಕಂಡು ಫಲಾಸ್ವಾದದ ಆನಂದವನ್ನು ಪಡೆದಂತೆ", ಎಂದು ಹೇಳಿದ ವೇದವಾಕ್ಯಗಳು, ವಿದ್ವತ್ತೆ ಮತ್ತು ಆತ್ಮಜ್ಞಾನ ಇವುಗಳಲ್ಲಿಯ ಭೇದವನ್ನು ಸ್ಪಷ್ಟಪಡಿಸುತ್ತವೆ. ಪ್ರತ್ಯಕ್ಷ ಆತ್ಮಾನುಭವ ಪಡೆಯದೆ ಕೇವಲ ವೇದಾಂತವನ್ನು ಓದಿ ನಾನು ಬ್ರಹ್ಮನಾಗಿದ್ದೇನೆ, ಎನ್ನುವ ಕಲ್ಪನೆಯಿಂದ ಎಷ್ಟೋ ಜನರು ಮೋಸಹೋಗುತ್ತಾರೆ. ಈ ವಿಷಯದ ವಿವೇಚನೆಯನ್ನು ವಿವರವಾಗಿ ಮಾಡುವದು ಸ್ಥಳಾಭಾವದ ಮೂಲಕ ಇಲ್ಲಿ ಶಕ್ಯವಾಗಿಲ್ಲ, ಇರಲಿ.

ಶ್ರೀ ಕಾಡಸಿದ್ಧರಿಂದ ನಿಂಬರಗಿಮಹಾರಾಜರು, ನಿಂಬರಗಿಮಹಾರಾಜರಿಂದ ಭಾವೂರಾವಮಹಾರಾಜರು ಸಂಪಾದಿಸಿದ ಆತ್ಮಜ್ಞಾನವು ಯಾವುದು ಎಂಬ ಶಂಕೆ ಜಿಜ್ಞಾಸುಗಳಾದ ವಾಚಕರಲ್ಲಿ ಬರಬಹುದು. ಯಾವ ಜ್ಞಾನದಿಂದ ಪೂರ್ವಕಾಲದಲ್ಲಿಯ ದೊಡ್ಡದೊಡ್ಡ ಋಷಿಗಳು ಭವಸಾಗರವನ್ನು ದಾಟಿದರೋ ಅದು ಈ ಜ್ಞಾನವೇ:

"ವ್ಯಾಸವಸಿಷ್ಠ ಮಹಾಮುನಿ। ಶುಕನಾರದ ಸಮಾಧಾನೀ।
ಜನಕಾದಿಕ ಮಹಾಜ್ಞಾನೀ। ಯೇಣೆಚಿ ಜ್ಞಾನೇ ॥ ೨೩ ॥

## ಪ್ರಸ್ತಾವನೆ

ವಾಮದೇವಾದಿಕ ಯೋಗೇಶ್ವರ। ವಾಲ್ಮೀಕ ಅತ್ರಿ ಋಷೇಶ್ವರ।
ಶೌನಕಾದಿ ಅಧ್ಯಾತ್ಮಸಾರ। ವೇದಾಂತಮತೇ ॥ ೨೪ ॥

ಸನಕಾದಿಕ ಮುಖ್ಯ ಕರೂನೀ। ಆದಿನಾಥ ಮೀನ ಗೋರಕ್ಷಮುನೀ।
ಅನೇಕ ಬೋಲತಾ ವಚನೀ। ಅಗಾಧ ಅಸತೀ" ॥ ೨೫॥

-ದಾಸಬೋಧ ೫.೬

ಅಥವಾ ಇತ್ತೀಚಿನ ಸಾಧುಸಂತರಲ್ಲಿ,

"ನಿವೃತ್ತಿ ಜ್ಞಾನೇಶ್ವರ। ನಾಮಾ ಆಣಿ ಕಬೀರ॥
ಏಕನಾಥ ಗೋರಾ ಕುಂಭಾರ। ಕಲಿಯುಗಾಮಾಜೀ ಜ್ಞಾನ ಯಾಸೀ
॥ ೨೪೩ ॥

ಸೋಪಾನ ಮುಕ್ತಾಬಾಯೀ। ಪರಮಾನಂದ ಜೋಗಾ ಪಾಹೀ॥
ಭಾನುದಾಸ ಮೀರಾಬಾಯೀ। ರಾಮದಾಸ ಸೋಈ ಲಾಗಲಾಸೇ
॥ ೨೪೪ ॥

ವೇಣೂಬಾಯೀ ವಿಸೋಬಾ ಖೇಚರ। ತುಕೋಬಾ ನರಹರೀ ಸೋನಾರ॥
ನರಸೀ ಮೆಹತಾ ರೋಹಿದಾಸ ಚಾಂಭಾರ। ಸಂತ ಅಪಾರ ಅನುಭವೀ॥
॥ ೨೪೫ ॥

ಚಹೂ ಯುಗಾಮಾಜೀ ಕೋಣೀ। ಜೇ ಜೇ ಝಾಲೇ ಬ್ರಹ್ಮಜ್ಞಾನೀ॥
ತೇ ಯಾಚಿ ಅನುಭವೇ ಕರೋನೀ। ಸತ್ಯ ಮಾನೀ ವಚನಾತೇ"
॥ ೨೪೬ ॥
(ದೀಪರತ್ನಾಕರ ಅಧ್ಯಾಯ-೪)

ಭಾವಾರ್ಥ: ಈ ಜ್ಞಾನದಿಂದಲೇ ವ್ಯಾಸವಸಿಷ್ಠರು ಮಹರ್ಷಿಗಳೆನಿಸಿದರು. ಶುಕನಾರದರು ಶಾಂತಿಯನ್ನು ಸಾಧಿಸಿದರು. ಜನಕನೇ ಮೊದಲಾದವರು ಮಹಾಜ್ಞಾನಿಗಳಾದರು. ವಾಮದೇವನೇ ಮೊದಲಾದ ಯೋಗೀಶ್ವರರೂ, ವಾಲ್ಮೀಕಿ ಅತ್ರಿಯಂತಹ ಋಷಿಶ್ರೇಷ್ಠರೂ, ಶೌನಕರೇ ಮೊದಲಾದವರೂ, ವೇದಾಂತದ ರಹಸ್ಯವೆನಿಸಿದ ಆಧ್ಯಾತ್ಮಸಾರವನ್ನು, ಜ್ಞಾನವನ್ನು ಗಳಿಸಿಕೊಂಡಿದ್ದರು. ಮುಖ್ಯವಾಗಿ ಸನಕರಿಂದ ಮೊದಲುಗೊಂಡು ಆಧಿನಾಥ, ಮತ್ಸ್ಯೇಂದ್ರನಾಥ, ಗೋರಖನಾಥರೂ ಇನ್ನೂ ಅಗಾಧ ಮಹಿಮಾನ್ವಿತರಾದ ಜ್ಞಾನಿಗಳೂ ಆಗಿಹೋದರು. (ದಾಸಬೋಧ ೫.೬)

ಇತ್ತೀಚಿನ ಕಲಿಯುಗದ ಸಾಧುಸಂತರಲ್ಲಿ, ನಿವೃತ್ತಿನಾಥ, ಜ್ಞಾನೇಶ್ವರ, ನಾಮದೇವ, ಕಬೀರ, ಏಕನಾಥ ಮತ್ತು ಗೋರಾಕುಂಭಾರರು ಜ್ಞಾನಗಳಿಸಿದರು. ಸೋಪಾನ, ಮುಕ್ತಾಬಾಯಿ, ಪರಮಾನಂದ ಜೋಗಾ, ಭಾನುದಾಸ, ಮೀರಾಬಾಯಿ ಮತ್ತು ರಾಮದಾಸ ಇದೇ ಮಾರ್ಗವನ್ನವಲಂಬಿಸಿದರು. ವೇಣೂಬಾಯಿ ವಿಸೋಬಾ ಖೇಚರ, ತುಕಾರಾಮ, ನರಹರಿ ಸೋನಾರ,

# ಪ್ರಸ್ತಾವನೆ

ನರಸೀಮೆಹತಾ ಮತ್ತು ರೋಹಿದಾಸ, ಈ ಸಂತರು ಅಪಾರ ಅನುಭವ ಪಡೆದರು. ನಾಲ್ಕೂ ಯುಗಗಳಲ್ಲಿ ಬ್ರಹ್ಮಜ್ಞಾನಿಗಳಾದವರು ಆತ್ಮಾನುಭವ ದಿಂದಲೇ ಈ ಮಾತನ್ನು ಸತ್ಯವೆಂದು ಮನ್ನಿಸಿದರು. (ದೀಪರತ್ನಾಕರ ಅಧ್ಯಾಯ-೪)

ಮೇಲೆ ಹೇಳಿದ ಉಲ್ಲೇಖಗಳಿಂದ, ಎಲ್ಲ ಸಾಧುಸಂತರ ಧ್ಯೇಯವೂ ಆತ್ಮಜ್ಞಾನ ಪ್ರಾಪ್ತಿಯೇ ಆಗಿತ್ತೆಂಬುದು ವ್ಯಕ್ತವಾಗುತ್ತದೆ.

ಇನ್ನು ಆತ್ಮಜ್ಞಾನವೆಂದರೇನು? ಆತ್ಮಜ್ಞಾನವೆಂದರೆ, ತನ್ನನ್ನು ತಾನೇ ನೋಡಿ ಕೊಳ್ಳುವುದು (ಆತ್ಮದರ್ಶನ).

"ಐಕ ಜ್ಞಾನಾಚೇ ಲಕ್ಷಣ। ಜ್ಞಾನ ಮ್ಹಣಜೇ ಆತ್ಮಜ್ಞಾನ॥
ಪಾಹಾವೇ ಆಪಣಾಸಿ ಆಪಣ। ಯಾ ನಾವ ಜ್ಞಾನ॥"

(ದಾಸಬೋಧ ೫-೬-೧)

"ಜ್ಞಾನದ ಲಕ್ಷಣವನ್ನು ಕೇಳು. ಜ್ಞಾನವೆಂದರೆ ಆತ್ಮಜ್ಞಾನವು. ತನ್ನನ್ನು ತಾನೇ ನೋಡಿಕೊಳ್ಳುವುದಕ್ಕೆ ಜ್ಞಾನ ಎಂಬ ಸಂಜ್ಞೆ ಇದೆ."

ಶ್ರೀಮದ್ಭಗವದ್ಗೀತೆಯಲ್ಲಿಯೂ ರಾಜಯೋಗದ ಫಲವು "ಆತ್ಮದರ್ಶನ"ವೆಂದೇ ಹೇಳಿದೆ:

"ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ।
ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ॥

ಸುಖಮಾತ್ಯಂತಿಕಂ ಯತ್ತದ್ ಬುದ್ಧಿಗ್ರಾಹ್ಯಮತೀಂದ್ರಿಯಮ್।
ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ॥"

(ಅ. ೬) ೨೦.೨೧

"ಯೋಗಾನುಷ್ಠಾನದಿಂದ ಚಿತ್ತವು ನಿರೋಧವಾಗಿ ಯಾವ ಸ್ಥಳದಲ್ಲಿ ರಮಮಾಣವಾಗುತ್ತದೋ, ಎಲ್ಲಿ ಆತ್ಮವು ಆತ್ಮನನ್ನು ನೋಡಿ ಸಂತುಷ್ಟನಾಗುತ್ತದೋ, ಎಲ್ಲಿ ಆತ್ಮಬುದ್ಧಿಗಮ್ಯ ಹಾಗೂ ಇಂದ್ರಿಯಗಳಿಗೆ ಅಗೋಚರವಿದ್ದ ಆತ್ಯಂತಿಕ ಸುಖವನ್ನು ಅವನು ಅನುಭವಿಸುವನೋ ಮತ್ತು ಎಲ್ಲಿ ಒಮ್ಮೆ ಸ್ಥಿರವಾದರೆ, ಮುಂದೆ ಎಂದೂ ಅಲ್ಲಿಂದ ಚ್ಯುತನಾಗಲಾರನು." ಉಪನಿಷತ್ತಿನಲ್ಲಿಯೂ ಸಹ ಹೀಗೆ ವಚನವಿರುವದು:

"ಪರಂ ಜ್ಯೋತಿರೂಪಸಂಪದ್ಯ ಸ್ವೇನರೂಪೇಣ ಅಭಿನಿಷ್ಪದ್ಯತೇ ಸೋಽಯಮಾತ್ಮಾ।"

"ಪರಂಜ್ಯೋತಿಯನ್ನು ಸಂಪಾದಿಸಿದ ಮೇಲೆ ಸ್ವ-ಸ್ವರೂಪದಲ್ಲಿ ಬೆಳಗುವದೇ ಆತ್ಮವು."

ಪತಂಜಲಿಯು ಯೋಗದ ಫಲವನ್ನು "ತದಾ ದ್ರಷ್ಟುಃ ಸ್ವರೂಪೇಽವಸ್ಥಾನಮ್।" ಎಂದರೆ, ಆತ್ಮಸ್ವರೂಪವನ್ನು ಕಂಡು ಅದರಲ್ಲಿಯೇ ಉಳಿಯುವದು ಯೋಗದ ಫಲವು ಎಂದು ತಿಳಿಸಿದ್ದಾನೆ. ಶ್ರುತಿಸ್ಮೃತಿ ಪುರಾಣಗಳು ಆತ್ಮಜ್ಞಾನದ ಕಲ್ಪನೆಯನ್ನು ಹೇಗೆ ಮಾಡಿ ಕೊಡುತ್ತವೆಂದರೆ,

# ಪ್ರಸ್ತಾವನೆ

ಆತ್ಮಜ್ಞಾನದ ಅನುಭವವು ಸದ್ಗುರುವಿಗೆ ಶರಣು ಹೋಗುವದರಿಂದಲೇ ದೊರೆಯುತ್ತದೆ. "ಸತ್ವಾಚೇ ಚಾಂದಣೇ", "ಪಹಾವಾ ದರ್ಪಣೀಚಾ ನಯನ", "ಪೋಥೀ ವಾಚೂ ಜಾತಾ ಪಾಹೇ ಮಾತ್ಕಕಾ ಮಧ್ಯೇಚಿ ಆಹೇ", "ಕರೇ ಘೇತಾ ವಸ್ತುಲಾಗೀ, ಆಡವೇ ಬ್ರಹ್ಮ" ಎಂದರೆ "ಸತ್ವದ ಬೆಳದಿಂಗಳಲ್ಲಿ, ಕನ್ನಡಿಯಲ್ಲಿಯ ಕಣ್ಣನ್ನು ನೋಡಿರಿ; ಗ್ರಂಥವನ್ನು ಓದಹೋದರೆ ಅದು ಅಕ್ಷರಗಳಲ್ಲಿಯೇ ಇದೆ ನೋಡಿರಿ. ವಸ್ತುವನ್ನು ಕೈಯಿಂದ ತೆಗೆದುಕೊಳ್ಳಹೋದರೆ, ನಡುವೆ ಬ್ರಹ್ಮವೇ ಕಾಣಸುತ್ತದೆ." ಈ ವಾಕ್ಯಗಳ ಅರ್ಥವು ಗುರುಕೃಪೆ ಇಲ್ಲದೆ ಆಗಲಾರದು. ಆತ್ಮಸಾಕ್ಷಾತ್ಕಾರ ಪ್ರಾಪ್ತ್ಯಾಗಿ ಸಾಧುಸಂತರೆಲ್ಲರು ರಾಜಯೋಗ ಮತ್ತು ಭಕ್ತಿಗಳ ವಿಲಕ್ಷಣ ಜೋಡಣೆಯನ್ನು ಮಾಡಿದ್ದಾರೆ. ಆತ್ಮಸಾಕ್ಷಾತ್ಕಾರದ ನಂತರ ದೇವ ಮತ್ತು ಭಕ್ತ ಇವರಲ್ಲಿಯ ವಿಭಕ್ತತೆ ಹೋಗಿ ತಾನೇ ಬ್ರಹ್ಮ ಎಂದು ನಿಶ್ಚಯವಾದಾಗ, ಭಗವದ್ಭಕ್ತನಿಗೆ ಭೂತಮಾತ್ರರಲ್ಲಿ ಆತ್ಮಸ್ವರೂಪವೇ ಕಾಣಸುತ್ತದೆ. ಇದೇ ಎಲ್ಲ ಸಾಧುಸಂತರ ಉಪದೇಶವಾಗಿದೆ. ಮೊದಲು ಆತ್ಮದರ್ಶನವಾಗಿ, ನಂತರ ಅಭೇದಬುದ್ಧಿ ಹೇಗೆ ಹುಟ್ಟಿಕೊಳ್ಳುತ್ತದೆ ಎಂಬುದನ್ನು ಜ್ಞಾನದೇವರು ಉತ್ಕೃಷ್ಟ ರೀತಿಯಿಂದ ನಿರೂಪಿಸಿದ್ದಾರೆ:

"ನುಸಧೇ ಮುಖ ಜೈಸೇ। ದರ್ಪಣೀ ದೇಖಿಜತಸೇ ದರ್ಶನಮಿಸೇ॥
ವಾಯಾಂಚಿ ದೇಖಣೇ ಐಸೇ। ಗಮೋ ಲಾಗೇ॥

ಜ್ಞಾನದೇವ ಚಕ್ರಪಾಣೀ ಐಸೇ। ದೋನ್ಹೀಹೀ ಡೋಳಸ ಆರಿಸೇ॥
ಪರಸ್ಪರೇ ಪಾಹತಾ ಕೈಸೇ। ಮುಕಲೇ ಭೇದಾ॥"

(ಚಾಂಗದೇವಪಾಸಷ್ಟಿ)

"ತಮ್ಮನ್ನು ಕನ್ನಡಿಯಲ್ಲಿ ನೋಡಿಕೊಳ್ಳುವ ಜನರು ತಮ್ಮ ಮುಖವನ್ನು ನೋಡಿಕೊಳ್ಳುತ್ತಾರೆ. ಹಾಗೆ ನೋಡಿಕೊಳ್ಳುವದು ವ್ಯರ್ಥವೆನಿಸಹತ್ತಿತು. ಜ್ಞಾನದೇವನೂ ಚಕ್ರಪಾಣಿಯೂ ಕಣ್ಣುಳ್ಳ ಕನ್ನಡಿಗಳಾಗಿ ಪರಸ್ಪರರನ್ನು ಕಂಡಮೇಲೆ ಅವರಲ್ಲಿಯ ಭೇದವಡಗಿತು."

ಈ ಅನುಭವ ಪಡೆದ ಸಾಧುಗಳು ನಿಜವಾಗಿ ಧನ್ಯರು. ಮೇಲಿನ ಎರಡು ಶ್ಲೋಕಗಳಲ್ಲಿ ಜ್ಞಾನದೇವ ಮಹಾರಾಜರು ಎಲ್ಲ ವೇದ, ಎಲ್ಲ ಶಾಸ್ತ್ರ, ಎಲ್ಲ ಪುರಾಣಗಳ ಸಾರವನ್ನು ಸ್ವಲ್ಪದರಲ್ಲಿ ಹೇಳಿದ್ದಾರೆ. ಈ ಅನುಭವವಾಗಲಿಕ್ಕೆ ಮೊಟ್ಟಮೊದಲು ಗುರುಕೃಪೆ ಬೇಕು. ಆಮೇಲೆ ಶ್ರವಣ, ಮನನ ಮತ್ತು ಅಭ್ಯಾಸ ಇವುಗಳು ಬೇಕು. ನಂತರ ವಿವೇಕವೈರಾಗ್ಯಗಳು ಉತ್ಪನ್ನವಾಗಿ ಮನುಷ್ಯನು ಆತ್ಮದರ್ಶನ ಪಡೆಯಲು ಅರ್ಹನಾಗುತ್ತಾನೆ. ಆತ್ಮದರ್ಶನವಾದ ನಂತರ ಹೃದಯಗ್ರಂಥಿಯು ಬಿಚ್ಚುತ್ತದೆ. ಎಲ್ಲ ಸಂಶಯಗಳು ನಷ್ಟವಾಗಿ ನೈಷ್ಕರ್ಮ್ಯಸಿದ್ಧಿಯು ಪ್ರಾಪ್ತವಾಗುತ್ತದೆ. ಮತ್ತು ದೇವ-ಭಕ್ತರಲ್ಲಿಯ ಭೇದ ಉಳಿಯದೆ ಸಾಧಕನು ದ್ವೈತದಿಂದ ಅದ್ವೈತಕ್ಕೆ, ಸಾಕಾರದಿಂದ ನಿರಾಕಾರಕ್ಕೆ, ಸ್ವರೂಪದಿಂದ ಬ್ರಹ್ಮಸ್ಥಿತಿಗೆ ಸಹಜವಾಗಿ ಮುಟ್ಟುತ್ತಾನೆ.

# ಪ್ರಸ್ತಾವನೆ

ಶ್ರೀ ಭಾವೂರಾವಮಹಾರಾಜರು ಆತ್ಮಜ್ಞಾನಪಾರಂಗತರಾಗಿರುವದರಿಂದಲೇ ಅವರಿಗೆ ಈ ಯೋಗ್ಯತೆ ಬಂದಿದೆ. ಉಪನಿಷತ್ತುಗಳ ಸಾರವನ್ನು ಅವರು ಅನುಭವಿಸಿದ್ದಾರೆ. ಪ್ರತ್ಯಕ್ಷವಾಗಿ ಅವರು ಉಪನಿಷತ್ತುಗಳನ್ನು ಓದಿರಲಿಕ್ಕಿಲ್ಲ. ಆದರೆ ಅವುಗಳ ಆಂದರೆ ಪ್ರತ್ಯಕ್ಷ ಪರಮೇಶ್ವರನೇ ಮಹಾರಾಜರ ನಾಲಿಗೆಯಮೇಲೆ ನಲಿಯುತ್ತಾನೆ. ಶ್ರೀ ತುಕಾರಾಮಮಹಾರಾಜರು ಹೇಳಿದ್ದಾರೆ:

"ವೇದ ಆಮ್ಹಾವರೀ ರುಸೋನಿಯಾ ಗೇಲಾ। ಆಮ್ಹೀ ತ್ಯಾಚ್ಯಾ
ಬಾಲಾ ಧರಿಲೇ ಕಂಠೀ॥"

"ವೇದವು ನಮ್ಮಮೇಲೆ ಕೋಪ ಮಾಡಿಕೊಂಡಿದೆ. ನಾವು ಅದರ ಅಪ್ಪನನ್ನೇ ಕಂಠದಲ್ಲಿರಿಸಿಕೊಂಡಿದ್ದೇವೆ" ಎಂದಿದ್ದಾರೆ. ಆತ್ಮಜ್ಞಾನಕ್ಕೆ ಶಬ್ದಜ್ಞಾನದ ಸಹಾಯವಾಗಬಲ್ಲದೇ ವಿನಃ ಅದರ ಅವಶ್ಯಕತೆ ಇಲ್ಲವೆಂಬ ತತ್ತ್ವವನ್ನು ಮನದಲ್ಲಿರಿಸಿಕೊಂಡಿರುವವರಲ್ಲಿಯೇ ನಿಃಶಬ್ದಜ್ಞಾನದ ಬಗ್ಗೆ ಪ್ರೀತಿಹುಟ್ಟಿ ಮನಬುದ್ಧಿಗಳಿಗೆ ಸಿಲುಕದ ಪರಮಾತ್ಮನು ದೊರಕುವ ಮಾರ್ಗಸಿಗಬಲ್ಲದು. ದೇವರ ನಾಮಸ್ಮರಣೆಯಿಂದ ರೂಪವು ಸಹಜವಾಗಿಯೇ ಪ್ರಕಟವಾಗುತ್ತದೆ. ಹಗಲಿರುಳೂ ನಾಮವನ್ನು ಪಠಿಸುತ್ತಿದ್ದರೆ ದೇವರಿಗೆ ಭಕ್ತನನ್ನು ಬಿಟ್ಟು ಬೇರೆಡೆಹೋಗಲು ಸಾಧ್ಯವೇ ಆಗದು. ಅಡವಿಯಿಂದ ಅಡವಿಗೆ ಹೋಗಬೇಡಿರಿ. ಕುಳಿತಲ್ಲಿಯೇ ನಿಮಗೆ ನಿಮ್ಮ ಶ್ರಮದ ಫಲವು ಪ್ರಾಪ್ತವಾಗುವುದು:

"ಬೈಸೋನಿ ನಿವಾಂತ ಶುದ್ಧ ಕರೀ ಚಿತ್ತ।
ತಯಾ ಸುಖ ಅಂತಪಾರ ನಾಹೀ ॥ ೧ ॥

ಯೇವೂನಿ ಅಂತರೀ ರಾಹೀಲ ಗೋಪಾಳ।
ಸಾಯಾಸಾಚೇ ಫಳ ಬೈಸಲೀಯಾ ॥ ೨ ॥

ರಾಮ ಕೃಷ್ಣ ಹರೀ ಮುಕುಂದ ಮುರಾರೀ।
ಮಂತ್ರ ಹಾ ಉಚ್ಚಾರೀ ವೇಳೋವೇಳಾ ॥ ೩ ॥

ತುಕಾ ಮ್ಹಣೇ ಐಸೇ ದೇಯಿೀನ ಮೀ ದಿವ್ಯ।
ಜರೀ ಹೋಯೀಲ ಭಾವ ಏಕವಿಧ" ॥ ೪ ॥

"ಮೌನ ಹಿಡಿದು ಕುಳಿತು ಶಾಂತನಾಗು. ಚಿತ್ತವನ್ನು ಶುದ್ಧಗೊಳಿಸು. ಆದರಿಂದ ದೊರೆಯುವ ಸುಖಕ್ಕೆ ಅಂತ್ಯವೇ ಇಲ್ಲ. ದೇವನು ನಿನ್ನ ಅಂತಃಕರಣದಲ್ಲಿ ಬಂದು ನೆಲಸುವನು. ಕುಳಿತಲ್ಲಿಯೇ ಪರಿಶ್ರಮದ ಫಲ ದೊರಕುವದು. ರಾಮ ಕೃಷ್ಣ ಹರೀ ಮುಕುಂದ ಮುರಾರಿ, ಈ ಮಂತ್ರವನ್ನು ವೇಳೆವೇಳೆಗೆ ಜಪಿಸುತ್ತಿರು. ನಿನ್ನಲ್ಲಿ ಅನನ್ಯಭಾವವುಂಟಾದರೆ ನನ್ನ ಅದ್ಭುತಶಕ್ತಿಯನ್ನು ತೋರಿಸುವೆನು" ಎಂದು ತುಕಾರಾಮರು ಹೇಳುತ್ತಾರೆ. ಮಹಾರಾಜರ ಈ ಉಪದೇಶವು ಹೃತ್ಪಟಲದ ಮೇಲೆ ಕೊರೆದು ಇಟ್ಟುಕೊಳ್ಳುವಂತಿದೆ.

"ನಿಮ್ಮ ಭಜನೆಯನ್ನು ಕೇಳಿದರೇ ನಿಮ್ಮ ಮಾರ್ಗವು ಏನು ಹೇಳುತ್ತದೆ ಎಂಬುದು ತಕ್ಷಣ ಲಕ್ಷಕ್ಕೆ ಬರುತ್ತದೆ," ಎಂದು ಒಬ್ಬ ಗೃಹಸ್ಥರು ಮಹಾರಾಜರಿಗೆ

ಹೇಳಿದ್ದರು. ಇದರ ಸತ್ಯತೆಯು ಮುಂದಿನ ಭಜನೆ ಓದುವವರಿಗೆ ತಿಳಿಯುತ್ತದೆ. ಭಜನೆಯ ಮುಖ್ಯಾಂಶಗಳನ್ನು ತಿಳಿಸಿದರೆ ಅನೇಕರಿಗೆ ಉಪಯೋಗವಾಗ ಬಹುದು ಎಂದೆನಿಸಿ ಅವುಗಳನ್ನು ಸ್ವಲ್ಪದರಲ್ಲಿಯೇ ನಿರ್ದೇಶಿಸಿ ಈಗಾಗಲೇ ಬೆಳೆದಿರುವ ಪ್ರಸ್ತಾವನೆಯನ್ನು ಮುಗಿಸುತ್ತೇನೆ. ಗುರೂಪದೇಶದ ಅನುಭವವು ಬಂದಂತೆ ಗುರುಚರಣದ ಅಭಿಲಾಷೆ ಹೆಚ್ಚಾಗುವದು (ವಿಷಯ. ನಂ.೨). ಅಲಕ್ಷ್ಯ ವಸ್ತುವಿನಲ್ಲಿ ಲಕ್ಷವಿಟ್ಟರೆ ನಿಜವಸ್ತುವಿನ ಅನುಭವ ಬರುವದು. ಅದಕ್ಕಾಗಿ ಕ್ಷಣಮಾತ್ರವೂ ವ್ಯರ್ಥಹೋಗದಂತೆ ಕಾಲದ ಸಾರ್ಥಕ ಮಾಡಿಕೊಳ್ಳಬೇಕು. ಆಗ ಸಂತರಿಂದ ಪ್ರಮಾಣಿತವಾದ ಆತ್ಮಜ್ಯೋತಿಯು ಸಹಜವಾಗಿ ಅನುಭವಕ್ಕೆ ಬರುವದು (ವಿ.ನಂ. ೩). ಅಹಂಕಾರದ ಮೇಲೆ ಸವಾರಿ ಮಾಡಿದರೆ ಎಲ್ಲೆಡೆಯಲ್ಲಿಯೂ ಆತ್ಮವನ್ನೇ ಕಾಣುವ ಏಕಾಂತಿಕ ಭಕ್ತಿಯು ಹುಟ್ಟುವುದು ಮತ್ತು ಅನಾಹತದ ವಿಜಯದುಂದುಭಿಯು ನಿನದಿಸುತ್ತಿದೆ (ವಿ.ನಂ.೪). ಗುರುಗಳ ಉಪಕಾರವನ್ನು ತೀರಿಸಿ ಋಣಮುಕ್ತನಾಗುವದು ಯಾವಕಾಲಕ್ಕೂ ಸಾಧ್ಯವಿಲ್ಲ (ವಿ.ನಂ.೬). ತ್ರಿವೇಣಿಯಲ್ಲಿ ನಿತ್ಯ ಸ್ನಾನಮಾಡಿ ಆತ್ಮಾರಾಮನ ದರುಶನ ಪಡೆದುಕೊಂಡರೆ, ಕರ್ಮಮಾಡಿದರೂ ಮಾಡದಂಥ ಮತ್ತು ಕರ್ಮಮಾಡದಲೆ ಕರ್ಮಮಾಡಿದಂಥ ಸ್ಥಿತಿಯು ಸಹಜವಾಗುವದು (ವಿ.ನಂ.೭). ದೇಹವೇ ನಿಜವಾದ ಪಂಢರಪುರ, ಆತ್ಮನೇ ವಿಠ್ಠಲನು (೯). ನಿಸ್ತ್ರೈಗುಣ್ಯದ ಪ್ರಾಪ್ತಿಗೆ ಮೊದಲು ಸತ್ವದ ಸಾಮರ್ಥ್ಯವು ಬೇಕು. ಆ ಸತ್ವದಿಂದ ಉಳಿದೆರಡು (ರಜ-ತಮ) ಗುಣಗಳನ್ನು ಕೊಲ್ಲಬೇಕು (೧೦). ತನ್ನ

ಉದ್ಧಾರವನ್ನು ತಾನು ಮಾಡಿಕೊಳ್ಳಬಹುದು. ಆದರೆ ಇತರರ ಉದ್ಧಾರ ಮಾಡುವವನೇ ನಿಜವಾದ ಸಾಧುವು (೧೧). ಗಂಗೆಯಂತೆ ನಿಮ್ಮ ಮನಸ್ಸು ಸ್ವಚ್ಛವಾಗಿದ್ದರೆ ಭಗವಂತನು ಹತ್ತಿರವೇ ನಿಲ್ಲುತ್ತಾನೆ. ಅಂಥ ಪುರುಷನಿಗೆ ಶ್ರುತಿಸಮ್ಮತವಾದ ಅಂಗುಷ್ಠಪ್ರಮಾಣದ ಪರಮೇಶ್ವರನ ರೂಪವು ಕಾಣುತ್ತದೆ. ಅನುಭವವಿದ್ದವನಿಗೇ ಇದರ ಗುರುತು ತಿಳಿಯುವುದು; ಅದಿಲ್ಲದವನು ಯಾವುದೋ ಕಡೆಗೆ ಟಕಮಕ ನೋಡುತ್ತಾನೆ. (೧೩). ಆತ್ಮಸ್ವರೂಪವನ್ನು ಜ್ಞಾನದೃಷ್ಟಿಯಿಂದ ನೋಡಬೇಕೇ ವಿನಃ ಚರ್ಮದೃಷ್ಟಿಯಿಂದಲ್ಲ. ಸತ್ಸಂಗದಿಂದ ಹೊಸ ಪ್ರಾರಬ್ಧರೇಷೆಯು ಹುಟ್ಟುತ್ತದೆ ಮತ್ತು ನಾಮಸ್ಮರಣೆಯಿಂದ ಪಾಪಗಳೆಲ್ಲವೂ ಸುಟ್ಟು ಹೋಗುತ್ತವೆ (೧೪). ದೇಹಭಾವವು ಅಳಿಯದಹೊರತು ಸತ್ಯವಸ್ತುವಿನ ಪ್ರಾಪ್ತಿಯಾಗದು (೧೫). ಸಾಧಕರು ವಿಷಯಸುಖದ (ಕಲ್ಪನೆ) ಅಡ್ಡದಾರಿಯನ್ನು ತುಳಿಯದೆ ಆತ್ಮಾನಂದದಲ್ಲಿ ನಿಮಗ್ನರಾಗಬೇಕು (೧೬). ಪ್ರಾಣಿ ಮಾತ್ರರಲ್ಲಿ ದಯೆತೋರುವುದೇ ಆತ್ಮಜ್ಞಾನದ ಪ್ರಥಮ ಸಾಧನವಾಗಿದೆ (೧೭). ಸ್ವರೂಪಾನುಸಂಧಾನದಿಂದ ಸಹಜಸಮಾಧಿಯು ಪ್ರಾಪ್ತವಾಗುತ್ತದೆ (೧೮). ಅಂತಃಕರಣದಲ್ಲಿ ಶಾಂತಿಸಾಗರ ಉದಿಸಿದ ಸಾಧುಗಳು ಜಡಮೂಢಪಿಶಾಚಿಗಳಂತೆ ಭೂಮಿಯಮೇಲೆ ಸಂಚರಿಸುತ್ತಾರೆ. ಜನರಿಗೆ ಮೂರ್ಖರಂತೆ ಭಾಸವಾಗುತ್ತಾರೆ. ಆದರೆ ತಾವು ಮಾತ್ರ ಬ್ರಹ್ಮಾನಂದದಲ್ಲಿ ತಲ್ಲೀನರಾಗಿರುತ್ತಾರೆ. ಅವರ ರಹಸ್ಯವು ಯೋಗಿಗಳಿಗೆ ಮಾತ್ರ ತಿಳಿಯುತ್ತದೆ (೧೯). ಉಪ್ಪು ಸಮುದ್ರದಲ್ಲಿ ಸೇರಿ ತದಾಕಾರವಾಗುವಂತೆ

# ಪ್ರಸ್ತಾವನೆ

ಸಾಧುಗಳು ಬ್ರಹ್ಮದಲ್ಲಿ ಏಕರೂಪರಾಗುತ್ತಾರೆ ಮತ್ತು ಅವರ ನಾಮರೂಪಗಳು ಲಯವಾಗುತ್ತವೆ (೨೦). ಸಾಧನದಿಂದ ಸದ್ಭಕ್ತಿಯೂ, ಸದ್ಭಕ್ತಿಯಿಂದ ಸಾಕ್ಷಾತ್ಕಾರವೂ ಆಗುವುದು (೨೧). ಮೊದಲು ಶ್ರೀಮುಖ ದರ್ಶನವಾದ ನಂತರ ಪ್ರತ್ಯಕ್ಷ ಚರಣಗಳು ಕಾಣಿಸಿಕೊಳ್ಳುತ್ತವೆ (೨೨). ಎಲೈ ತುಕಾರಾಮನೇ, ನಿನ್ನ ಅಭಂಗಗಳನ್ನು ಪ್ರೇಮಭಕ್ತಿಯಿಂದ ಪಠಿಸುವವರ ಸಂಕಟಗಳನ್ನು ಸ್ವತಃ ನಾನೇ ಪರಿಹರಿಸುತ್ತೇನೆಂದು ವಿಠ್ಠಲನು ಹೇಳುತ್ತಾನೆ (೨೫). ಯಾವ ಗುರುಗಳ ಬಳಿಯಲ್ಲಿ ದೇವನಿರುತ್ತಾನೋ ಆ ಗುರುವಿನ ಚರಣಗಳಲ್ಲಿ ಭಕ್ತಿಯನ್ನಿಟ್ಟರೆ ದೇವರಪ್ರಾಪ್ತಿಯಾಗಿ, ಎಡಬಲಕ್ಕೆ, ಮೇಲೆಕೆಳಗೆ, ಒಳಹೊರಗೆ ಎಲ್ಲಕಡೆಯಲ್ಲಿಯೂ ಅವನ ದರ್ಶನವಾಗುತ್ತದೆ (೩೯). ಆತ್ಮದರ್ಶನದ ನಂತರ ಆನಂದವು ತ್ರಿಭುವನದಲ್ಲಿ ತುಂಬಿ ತುಳುಕುವದು (೪೧). ದೇಹದಲ್ಲಿಯೇ ದೇವನನ್ನು ಕಂಡು ಅವನಿಗೆ ನಿರ್ಗುಣ ಜ್ಯೋತಿಯ ಆರತಿಎತ್ತಬೇಕು (೪೮). ಚಂದ್ರಸೂರ್ಯರೇ ಅಲ್ಲಿ ದೀಪಗಳಂತೆ ಬೆಳಗುತ್ತಾರೆ (೪೯). ಪಾಂಡುರಂಗನ ಆರತಿಯವೇಳೆಗೆ ಮಹಾದ್ವಾರದಲ್ಲಿ, ಸಿಂಹಶಂಖನಾದವಾಗುತ್ತದೆ. ಭೇರಿನಗಾರಿಗಳು ಮೊಳಗುತ್ತವೆ (ಕಾಕಡ ಆರತಿ. ೬). ಅಂತರಂಗದಲ್ಲಿ ಆರತಿಯು ನಡೆದಾಗ, ಆ ಪ್ರಕಾಶದಲ್ಲಿ ಸೂರ್ಯಚಂದ್ರರು ಕೂಡ ಇಲ್ಲದಂತಾಗುವರು. ಅನಹತ ವಾದ್ಯಘೋಷವಾಗುತ್ತದೆ. ಆ ಆನಂದ ಸಾಗರದಲ್ಲಿ ಮುಳುಗಿದನಂತರ ಪ್ರಾಪ್ತವಾಗುವ ಸ್ಥಿತಿಯನ್ನು ವಾಣಿಯಿಂದ ಹೇಳುವದು ಸಾಧ್ಯವಿಲ್ಲ. ಮನಸ್ಸಿನಲ್ಲಿ ಕಲ್ಪನೆ ಸಹ ಮಾಡಲಾಗದು (ಕಾ.ಆ.೭).

ಮುಂದಿನ ಭಜನೆಯಲ್ಲಿಯ ತುಕಾರಾಮರ ಹನ್ನೆರಡು (೧೦-೨೧) ಮತ್ತು ನಂತರ ಬಂದಿರುವ ಎರಡು ಅಭಂಗಗಳನ್ನು ನಿಂಬರಗಿಮಹಾರಾಜರ ಕಾಲದಿಂದಲೂ ನಿತ್ಯ ಅನ್ನುವ ರೂಢಿಇದೆ. ಇವೇ ಕೆಲವೆಡೆಯಲ್ಲಿ ಹದಿನಾಲ್ಕು ಅಭಂಗಗಳೆಂದು ಪ್ರಸಿದ್ಧವಾಗಿವೆ. ತುಕಾರಾಮ, ಜ್ಞಾನದೇವ, ನಾಮದೇವ ಮುಂತಾದವರು ರಚಿಸಿದ ಅಭಂಗಗಳ ಲೆಕ್ಕವೇಇಲ್ಲ ಎಂದು ವಿಷ್ಣುಶಾಸ್ತ್ರೀ ಚಿಪಳೂಣಕರರು ಹೇಳಿದ್ದಾರೆ!

"ಚಾರ ಕೋಟೀ ಏಕ ಲಕ್ಷಾಚ್ಯಾ ಶೇವಟೀ। ಚವತೀಸ ಸಹಸ್ರ ಸಾಂಗಿತಲೇ।
ಸಾಂಗುನಿ ಇತುಕೆ ತುಕಾ ಕಥಿತಾ ಝಾಲಾ। 'ಚವದಾ ಅಭಂಗಾ'
ಸೋಡೂ ನಕಾ॥"

"ನಾಲ್ಕುಕೋಟಿ, ಒಂದುಲಕ್ಷ, ಮೂವತ್ನಾಲ್ಕುಸಹಸ್ರ" ಎಂದು ನಮ್ಮ ಭಜನೆಯ ೨೩ನೇ ಅಭಂಗದಲ್ಲಿಯೂ ಹೇಳಲಾಗಿದೆ. "ಹದಿನಾಲ್ಕು ಅಭಂಗಗಳನ್ನು ಮರೆಯಬೇಡಿರಿ" ಎಂದುಹೇಳಿ, ತುಕಾರಾಮಮಹಾರಾಜರು ವಿದೇಹಮುಕ್ತಿ ಪಡೆದನಂತರ, ಅವರ ತಾಳ ಮತ್ತು ಕೌದಿ ಕೆಳಗೆಬಿದ್ದವು. ಅವುಗಳ ಜೊತೆಗೆ ಕೊನೆಯಸಂದೇಶವೆಂದು ಈ ಹನ್ನೆರಡು ಅಭಂಗಗಳನ್ನು ಅವರು ಕಳಿಸಿದ್ದಾರೆ:

"ಟಾಳ ಆಣಿ ಕಂಥಾ ಧಾಡಿಲೀ ನಿಶಾಣೀ। ಪ್ಹಾರೇ ಓಳಖೋನೀ
ಸಜ್ಜನ ಹೋ। ಮಾಝೀ ದಂಡವತ ತುಮ್ಹಾ ಸರ್ವ ಲೋಕಾ। ದೇಹಾ ಸಹಿತ
ತುಕಾ ವೈಕುಂಠಾಸೀ।" -ಭಜನ ಅಭಂಗ ೨೧

# ಪ್ರಸ್ತಾವನೆ

"ತಾಳ ಮತ್ತು ಕೌದಿಯನ್ನು ಗುರುತಿಗಾಗಿ ಕಳಿಸಿದ್ದೇನೆ. ಸಜ್ಜನರೇ, ಅವನ್ನು ಗುರುತಿಸಿರಿ. ತುಕಾರಾಮನು ದೇಹಸಹಿತ ವೈಕುಂಠಕ್ಕೆ ತೆರಳಿದ್ದಾನೆ. ನಿಮ್ಮೆಲ್ಲರಿಗೆ ದಂಡಪ್ರಣಾಮಗಳು."

ಹೀಗಿದ್ದರೂ ಅವುಗಳನ್ನು ರಚಿಸಿದವರು ತುಕಾರಾಮರೇ ಅಹುದೋ ಅಲ್ಲವೋ? ಎಂಬ ಬಗ್ಗೆ ದೊಡ್ಡವರಲ್ಲಿಯೂ ಮತಭೇದವಿದೆ. ಇತ್ತೀಚೆಗೆ ನಿರ್ಣಯಸಾಗರ ಪ್ರೆಸ್, ಇಂದಿರಾ ಪ್ರೆಸ್ ಮತ್ತು ಇಂದುಪ್ರಕಾಶ ಪ್ರೆಸ್ಸಿನವರು ಮುದ್ರಿಸಿದ ಗಾಥೆಗಳಲ್ಲಿ ಈ ಅಭಂಗಗಳನ್ನು ಸೇರಿಸಿಲ್ಲ. ಹರಿಭಕ್ತಪರಾಯಣ ವಿಷ್ಣುಬುವಾ ಜೋಗ ಅವರ ಸಾರ್ಥ ಗ್ರಂಥಗಳಲ್ಲಿಯೂ, ಟೀಕೆಟಿಪ್ಪಣಿಗಳಲ್ಲಿಯೂ ಈ ಅಭಂಗಗಳನ್ನು ಕೊಟ್ಟಿಲ್ಲ. ಇವು ಸ್ವತಂತ್ರ ರೂಪದಲ್ಲಿ ಮಾತ್ರ ಉಪಲಬ್ಧವಾಗಿರುತ್ತವೆ ಹಾಗೂ ಅನೇಕ ಸಾಧುಸಂತರ ಬಾಯಿಯಲ್ಲಿರುವುದರಿಂದ ಬಹಳ ಪ್ರಸಿದ್ಧಿಪಡೆದಿವೆ. ಇದೂಅಲ್ಲದೆ ತುಕಾರಾಮತಾತ್ಯಾ ಎಂಬುವವರ ಎಂಟಹತ್ತು ಸಾವಿರ ಅಭಂಗಗಳು "ತುಕಾರಾಮರ ಗಾಥಾ" ಎಂಬ ಹೆಸರಿನಿಂದ ಎರಡು ಭಾಗಗಳಲ್ಲಿ ಮುದ್ರಿತವಾಗಿವೆ. ಈ ಅಭಂಗಗಳಲ್ಲಿಯ ವಿಲಕ್ಷಣ ಭಾವಪೂರ್ಣತೆ ಮತ್ತು ಓತಪ್ರೋತವಾಗಿ ತುಂಬಿರುವ ಸ್ವಾನುಭವಗಳನ್ನು ಪರಿಶೀಲಿಸಿದರೆ, ಇವು ತುಕಾರಾಮ ಮಹಾರಾಜರ ವಾಣಿಯಿಂದಲೇ ಬಂದವುಗಳೆಂಬ ಸಬಲ ಅನುಮಾನವುಂಟಾಗುತ್ತದೆ.

ಇರಲಿ। ತುಕಾರಾಮಮಹಾರಾಜರ ಅಭಂಗಗಳ ಸಂಖ್ಯೆಯ ವಿಷಯವಾಗಿಯಾದರೂ ಜನರಲ್ಲಿ ಏಕಮತವೆಲ್ಲಿದೆ? ಇತ್ತೀಚಿನ ಹೆಸರುವಾಸಿಯಾದ ಗಾಥೆಗಳಲ್ಲಿ, ನಾಲ್ಕೈದು ಸಾವಿರದಷ್ಟೇ ಅಭಂಗ ಸಂಖ್ಯೆ ಇದೆ. ತುಕಾರಾಮತಾತ್ಯಾ ಅವರ ಗಾಥೆಯಲ್ಲಿ ಎಂಟಹತ್ತು ಸಾವಿರ ಅಭಂಗಗಳಿವೆ. ಮೇಲೆ ಹೇಳಿದ ಶಾಸ್ತ್ರೀಬುವಾ ಅವರ ಬರಹದ ಮೇಲಿಂದ ಮತ್ತು ನಮ್ಮ ೨೩ನೇ ಅಭಂಗ ಇವುಗಳ ಮೇಲಿಂದ ಅಭಂಗಗಳ ಸಂಖ್ಯೆ ನಾಲ್ಕುಕೋಟಿ, ಒಂದುಲಕ್ಷ, ಮೂವತ್ತುನಾಲ್ಕು ಸಾವಿರ ಇದೆ ಎಂದೆನಿಸುತ್ತದೆ. ಮಹಿಪತಿಯವರ ಹೇಳಿಕೆಯ ಮೇರೆಗೆ ನಾಲ್ಕುಕೋಟಿ ಮತ್ತು ಕೆಲವು ಲಕ್ಷ ಎಂದಿದೆ (ಸಂತಲೀಲಾಮೃತ). ಇದನ್ನು ನಿರ್ಧರಿಸುವಲ್ಲಿ ನಮ್ಮ ಭಜನೆಯಲ್ಲಿಯ ೨೪ನೆಯ ಅಭಂಗವು ಅತ್ಯಂತ ಮಹತ್ವಪೂರ್ಣವಾಗಿದೆ. ಅದನ್ನು ಜಿಜ್ಞಾಸುಗಳು ಅವಶ್ಯವಾಗಿ ಓದಬೇಕು. ಅದರಲ್ಲಿ ಐದುಕೋಟಿ, ಒಂದುಲಕ್ಷ, ಮೂವತ್ತುನಾಲ್ಕುಸಾವಿರ ಅಭಂಗಗಳಿರುವ ಬಗ್ಗೆ ಉಲ್ಲೇಖವಿದೆ. ರಾ|| ಶಂಕರ ಪಾಂಡುರಂಗ ಪಂಡಿತ ಇವರು ಈ ಅಭಂಗವನ್ನು ತಮ್ಮ "ಇಂದುಪ್ರಕಾಶ" ಎಂಬ ಗಾಥೆಯ ಪ್ರಸ್ತಾವನೆಯಲ್ಲಿ ಕೊಟ್ಟಿದ್ದಾರೆ. "ತೀಸ ಲಕ್ಷ ಕೇಲೀ ದೇವಾಸಿ ಕರುಣಾ। ಕರ್ಮಕಾಂಡ ಜಾಣಾ ಏಕ ಲಕ್ಷ||" ಎಂದರೆ ಮೂವತ್ತು ಲಕ್ಷ ಅಭಂಗಗಳಲ್ಲಿ ದೇವರ ಕರುಣೆಗಾಗಿ ಪ್ರಾರ್ಥನೆಯಿದ್ದು, ಒಂದು ಲಕ್ಷ ಅಭಂಗಗಳಲ್ಲಿ ಕರ್ಮಕಾಂಡವಿದೆ ಎಂದುತಿಳಿಯಿರಿ. ಈ ಸಾಲು

ಲೋಪವಾಗಿದೆ. ಹೀಗಿದ್ದರೂ ಬೇರೀಜು ಮೇಲೆ ಹೇಳಿದ ಸಂಖ್ಯೆಯನ್ನು ಮೀರುತ್ತದೆ. ಈಗ ನಮ್ಮ ಅಭಂಗದಲ್ಲಿ ಹೇಳಿದಂತೆ ಸಂಖ್ಯೆಯ ಬೇರೀಜು ಐದುಕೋಟಿ, ಒಂದುಲಕ್ಷ, ಮೂವತ್ತುನಾಲ್ಕುಸಾವಿರಕ್ಕೆ ಸರಿಯಾಗಿರುತ್ತದೆ:-

| | |
|---|---|
| ೧೨,೦೦೦ | ಸಂಹಿತಾ |
| ೧೦,೦೦೦ | ಉಪಗ್ರಂಥ (ಅವತಾರಸಹಸ್ರ) ದಶಸಹಸ್ರ |
| ೧೦೦,೦೦,೦೦೦ | ಭಕ್ತಿ |
| ೧೦೦,೦೦,೦೦೦ | ಜ್ಞಾನ |
| ೭೫,೦೦,೦೦೦ | ವೈರಾಗ್ಯ |
| ೭೫,೦೦,೦೦೦ | ನಾಮ |
| ೬೦,೦೦,೦೦೦ | ಬೋಧ |
| ೬೦,೦೦,೦೦೦ | ರೂಪ |
| ೩೦,೦೦,೦೦೦ | ಕರುಣಾ |
| ೧,೦೦,೦೦೦ | ಕರ್ಮಕಾಂಡ |
| ೧೨೦೦೦ | ಸ್ವಾನುಭವ |
| ೫,೦೧,೩೪,೦೦೦ | |

ಐದು ಕೋಟಿ, ಒಂದು ಲಕ್ಷ, ಮೂವತ್ತುನಾಲ್ಕು ಸಾವಿರ, ಈ ಅಭಂಗವು ತುಕಾರಾಮರ ಅಭಂಗಗಳ ಸಂಖ್ಯೆಯ ಚರ್ಚೆಯಲ್ಲಿ ಅತ್ಯಂತ ಮಹತ್ವದ್ದಾಗಿರುವುದರಿಂದ ಇಷ್ಟು ವಿಸ್ತಾರವಾಗಿ ಬರೆಯಬೇಕಾಯಿತು!

ಪ್ರಸ್ತಾವನೆಯು ಬಹುಮಟ್ಟಿಗೆ ಮುಗಿಯಿತು. ಮೊದಲು ಚಿಕ್ಕಪ್ರಸ್ತಾವನೆಯನ್ನು ಬರೆಯುವ ಉದ್ದೇಶವಿತ್ತು. ಆದರೆ ಬರೆಯಲಿಕ್ಕೆ ಆರಂಭಿಸಿದಾಗ, ಪ್ರತಿಯೊಂದು ಮಹತ್ವದ ಪ್ರಶ್ನೆಯು ಕಣ್ಣೆದುರಿಗೆ ಬಂದು, ಅದರ ವಿವರಣೆಯನ್ನು ಸ್ವಲ್ಪಮಟ್ಟಿಗಾದರೂ ಮಾಡದೆ ಇರಲಾಗಲಿಲ್ಲ. ಮಹಾರಾಜರ ಸಮಗ್ರ ಚರಿತ್ರೆಯನ್ನು ಬರೆಯುವ ಭಾಗ್ಯ ಯಾರಿಗಿದೆಯೋ ಇರಲಿ; ಆ ಕಾರ್ಯಕ್ಕೆ ಈ ಪ್ರಸ್ತಾವನೆಯು ಉಪಯೋಗಬೀಳಲಿ ಮತ್ತು ಈ ಸಂಪ್ರದಾಯದಲ್ಲಿರದವರಿಗೆ ಸಂಪ್ರದಾಯದ ಬೋಧನೆಯ ಮುಖ್ಯಾಂಶಗಳು ತಿಳಿಯಬೇಕೆಂಬ ಉದ್ದೇಶದಿಂದ ಈ ಪ್ರಸ್ತಾವನೆ ಬರೆಯಲಾಗಿದೆ. ಮುಂದೆ ಕೊಡಲಾದ ಭಜನೆಯಲ್ಲಿ ಕೆಲವೊಂದು ಅಶುದ್ಧ ಪಾಠವಿರುವ ಸಂಭವವಿದೆ. ಆದರೂ ಇತರ ಪಾಠಗಳೊಂದಿಗೆ ಈ ಪಾಠಗಳನ್ನು ಹೋಲಿಸಿ ಯೋಗ್ಯವಾದುದನ್ನು ತೆಗೆದುಕೊಳ್ಳಲಾಗಿದೆ. ಮೊದಲು ಭಜನೆಯ ಹಸ್ತಲಿಖಿತ ಪ್ರತಿ ಮತ್ತು ಪಂಚಸಮಾಸೀ ಈ ಪ್ರಕರಣಗಳನ್ನು ನಮ್ಮ ಮಿತ್ರರಾದ ರಾ|| ಪಂಚನದೀಕರರ ಕಡೆಗೆ ತಿದ್ದುಪಡಿಗಾಗಿ ಕಳಿಸಿತ್ತು. ಆಗ ಅವರು ರಚಿಸಿದ ಪದ್ಯವನ್ನು ಕೊನೆಗೆ ಕೊಡಲಾಗಿದೆ. ಕರಡುಪ್ರತಿಯನ್ನು ಇನ್ನೊಬ್ಬ



ಶ್ರೀ ಸದ್ಗುರು ಭಾವೂಸಾಹೇಬ ಮಹಾರಾಜ ಉಮದೀಕರ

ಜನ್ಮ : ಉಮದಿ
ಶಕೆ. ೧೭೬೫ ರಾಮನವಮಿ.
(ಕ್ರಿ.ಶ. ೧೮೪೩)

ಸಮಾಧಿ : ಇಂಚಗೇರಿ
ಶಕೆ. ೧೮೩೫ ಮಾಘ ಶು. ೩,
ಗುರುವಾರ (ಕ್ರಿ.ಶ. ೨೯-೧-೧೯೧೪)

## ಪ್ರಸ್ತಾವನೆ

ಗುರುಬಂಧುಗಳು ಅದನ್ನು ಶಕ್ಯವಿದ್ದಷ್ಟು ಶುದ್ಧಗೊಳಿಸಿ ಹಿಂದಿರುಗಿಸಿದರು. ಪ್ರಸ್ತಾವನೆ, ಎರಡನೆಯ ಸಮಾಸದ ಬಹಳಷ್ಟು ಭಾಗ, ಐದನೆಯ ಸಮಾಸದಲ್ಲಿಯ ಮುಕ್ತಿಲಕ್ಷಣ (೬೭-೮೧) ಇವು ಅವರು ರಚಿಸಿದವುಗಳು. ಕೊನೆಯದಾಗಿ ಈ ಪುಸ್ತಕವನ್ನು ಮುದ್ರಿಸುವ ಸುಯೋಗ ಒದಗಿಸಿದ ಆ ಪರಮಾತ್ಮನ ಚರಣಗಳಲ್ಲಿ ಇದನ್ನು ಅರ್ಪಿಸಿ ಪ್ರಸ್ತಾವನೆಯನ್ನು ಪೂರ್ಣಗೊಳಿಸುತ್ತೇನೆ.

**ಪ್ರಕಾಶಕ**

# ಶ್ರೀ ಸದ್ಗುರುನಾಥ ಭಾವೂಸಾಹೇಬ ಮಹಾರಾಜ ಉಮದೀಕರ ಇವರ ನಿರ್ಯಾಣ

ಗುರುವಾರ ಮಾಘ ಶುದ್ಧ ೩, ಶಕೆ, ೧೮೩೫
(ತಾರೀಖು ೨೯, ತಿಂಗಳು ಜನವರಿ, ಇಸ್ವಿ ಸನ್ ೧೯೧೪)

ಸಂಪಲೇಸ್ಸೇ ವಾಟೇ ಅವತಾರಕಾರ್ಯ।
ಮ್ಹಣೋನಿಯಾ ಕಾಯ ತ್ವರಾ ಕೇಲೀ ॥ ೧ ॥

ಜಾತೋ ಮ್ಹಣೋನಿಯಾ ಸಾಂಗಿತಲೇ ಆಧೀ।
ಸರ್ವಹೀ ಉಪಾಧೀ ತ್ಯಾಗಿಯೇಲೀ ॥ ೨ ॥

ಶಿಷ್ಯ ವಿನವಿತೀ ಆಪಣಾಸೀ ಜಾಣೇ।
ಮಾಗೇ ಭಕ್ತ ಕೋಣೇ ಚಾಲವಾವೀ ॥ ೩ ॥

ತುಮ್ಹಾಸೀ ಹೋ ತ್ಯಾಚೀ ಕಾಯ ಅಸೇ ಚಿಂತಾ।
ಭಕ್ತ ಚಾಲವಿತಾ ದೇವ ಅಸೇ ॥ ೪ ॥

ಚಿಂತಾ ಕೇಲೀ ತರೀ ಹೋಈಲ ತೇ ಹೋತೇ।
ಕದಾ ಚುಕೇನಾ ತೇ ದೇವಕಾಜ ॥ ೫ ॥

## ಶ್ರೀ ಭಾವೂಸಾಹೇಬ ಮಹಾರಾಜರ ನಿರ್ಯಾಣ

ಐಸೇ ವದೋನಿಯಾ ವಾಣೀ ಬಂದ ಕೇಲೀ।
ಆತ ನಾಮಾವಳೀ ಚಾಲಲೀಸೇ ॥ ೬ ॥

ನಾಮ ಚಾಲವಿಲೇ ಏಕಾದಶ ದಿನ।
ಭೋಜನಜೀವನ ತ್ಯಾಗಿಯೇಲೇ ॥ ೭ ॥

ಮಾಘ ಶುದ್ಧ ತೃತೀಯಾ ದಿನ ಗುರುವಾರ।
ರಾತ್ರ ಏಕ ಪ್ರಹರ ಝಾಲೀ ಅಸೇ ॥ ೮ ॥

ಶಿಷ್ಯ ಮಿಳೋನಿಯಾ ಕರಿತೀ ಭಜನ।
ಸಪ್ರೇಮ ಜೀವನ ಡೋಳಾ ಲೋಟೇ ॥ ೯ ॥

ಭಜನಾಚೇ ಅಂತೀ ವಿಠ್ಠಲಗರ್ಜನಾ।
ಅತಿಪ್ರೇಮೇ ಜಾಣಾ ಚಾಲಲೀಸೇ ॥ ೧೦ ॥

ಕಾಪುರಾಚೇ ಜ್ಯೋತೀ ನಿಮತಾ ದೇಖೋನಿ।
ಟಾಳೀ ವಾಜವೂನೀ ದೇಹ ಸೋಡೀ ॥ ೧೧ ॥

ಸೋಡೀ ದೇಹ ಆಮುಚಾ ಧನ್ಯ ಗುರುನಾಥ।
ಜ್ಯೋತೀಮಧ್ಯೇ ಜ್ಯೋತ ಗುಪ್ತ ಝಾಲೀ ॥ ೧೨ ॥

ಭಾವಾರ್ಥ : ಧರೆಯೊಳವತರಿಸಿದ ಕಾರ್ಯತೀರಿತು ಎಂದು ಬಗೆದು ತ್ವರೆ ಮಾಡಿದರೇನು? ಹೋಗುವಮೊದಲೇ "ನಾನು ಹೋಗಲಿರುವೆನು" ಎಂದು ಹೇಳಿ ಉಪಾಧಿಗಳನ್ನೆಲ್ಲ ತೊರೆದರು. "ತಾವು ತೆರಳಿದ ಮೇಲೆ

ಭಕ್ತಿಮಾರ್ಗವನ್ನು ನಡೆಸುವವರು ಯಾರು?" ಎಂದು ಶಿಷ್ಯರು ಕೇಳಲಾಗಿ, "ದೇವರು ತನ್ನ ಭಕ್ತಿ ಬೆಳೆಸುವ ಕಾರ್ಯವನ್ನು ನಡೆಸುವನು. ನಿಮಗದರ ಚಿಂತೆ ಏಕೆ?" ಎಂದು ಹೇಳಿ, "ಚಿಂತೆ ಮಾಡಿದರೂ ಆಗುವುದೆಲ್ಲವೂ ಆಗಿಯೇ ತೀರುವುದು. ದೇವಕಾರ್ಯವು ಎಂದೂ ನಿಲ್ಲುವುದಿಲ್ಲ", ಎಂದು ಹೇಳಹೇಳುತ್ತಲೇ ಮಾತು ನಿಂತು ಹೋಯಿತು. ಆದರೂ ಅಂತರಂಗದಲ್ಲಿ ನಾಮವು ನಡೆಯುತ್ತಿತ್ತು. ಅನ್ನನೀರು ಬಿಟ್ಟು ಹನ್ನೊಂದು ದಿನಗಳವರೆಗೂ ನಾಮಸ್ಮರಣೆ ನಡೆದಿತ್ತು. ಮಾಘ ಶುದ್ಧ ತೃತೀಯಾ ದಿವಸ ಗುರುವಾರ ರಾತ್ರಿಯ ಒಂದು ಪ್ರಹರದಲ್ಲಿ, ಶಿಷ್ಯರೆಲ್ಲರೂ ಭಜನೆಯನ್ನು ಮಾಡುತ್ತಿರಲಾಗಿ ಕಣ್ಣುಗಳಿಂದ ಪ್ರೇಮಾಶ್ರುಗಳು ಧಾರಾಕಾರವಾಗಿ ಸುರಿಯಹತ್ತಿದವು. ಭಜನೆಯಕೊನೆಗೆ ಭಕ್ತರು ವಿಠ್ಠಲನ ನಾಮವನ್ನು ಅತ್ಯಂತ ಪ್ರೀತಿಯಿಂದ ಗರ್ಜಿಸುತ್ತಿರಲು, ಕರ್ಪೂರದ ಜ್ಯೋತಿಯು ಶಾಂತವಾದುದನ್ನು ಕಂಡು, ಚಪ್ಪಾಳೆ ತಟ್ಟಿ ಗುರುಗಳು ದೇಹಬಿಟ್ಟರು. ಹೀಗೆ ಜ್ಯೋತಿಯಲ್ಲಿ ಜ್ಯೋತಿ ತಾ ಕೂಡುತ್ತಿರಲು, ಸದ್ಗುರುನಾಥರು ತೆರಳಿ ಧನ್ಯರಾದರು.

## ಕಾಕಡಆರತಿ (ಉದಯರಾಗ)

ನಾರಾಯಣ, ನಾರಾಯಣ, ನಾರಾಯಣ, ನಾರಾಯಣ।
ಬೆಳಗಾಯಿತು, ಬೆಳಗಾಯಿತು, ಬೆಳಗಾಯಿತು, ಬೆಳಗಾಯಿತು॥

ಏಳಯ್ಯಾ ಏಳು ನಿನಗೆಷ್ಟು ನಿದ್ರಾ।
ಏಳು ನಾರಾಯಣ ಏಳು ಲಕ್ಷ್ಮೀರಮಣ
ಏಳು ಶ್ರೀಗಿರಿವಾಸ ಶ್ರೀ ವೆಂಕಟೇಶಾ ॥ ಪಲ್ಲ ॥

ಕಾಸಿದ ಹಾಲುಗಳು ಕಾವಡಿಯಲ್ಲಿ ತುಂಬಿ।
ಲೇಸಾಗಿ ಹಾಲ್ಮೊಸರುಬೆಣ್ಣೆಯನು ಕಡೆದು॥
ಶೇಷಶಯನನೆ ಏಳು ಸಮುದ್ರಮಥನವ ಮಾಡು।
ದೇಶ ಕೆಂಪಾಯಿತು ಏಳು ಹರಿಯೇ ॥ ೧ ॥

ಅರಳುಮಲ್ಲಿಗಿಜಾಜಿ ಪರಿಮಳದ ಪುಷ್ಪವನು।
ಸುರರು ತಂದಿಟ್ಟಾರೆ ಸುಜನರೆಲ್ಲ।
ಅರವಿಂದಲೋಚನ ಶ್ರೀಗೋಪಾಲಕೃಷ್ಣ।
ಏಳಯ್ಯಾ ಏಳು ನಿನಗೆಷ್ಟು ನಿದ್ರಾ ॥ ೨ ॥

ದಾಸರೆಲ್ಲರು ಬಂದು ಧೂಳಿದರ್ಶನಗೊಂಡು।
ಲೇಸಾಗಿ ತಾಳದಂಡಿಗೆಯ ಪಿಡಿದು।
ಆದಿಕೇಶವ ನಿಮ್ಮ ಪುಣ್ಯನಾಮಸ್ಮರಣೆ
ಉದಯದಲ್ಲೆದ್ದು ಪಾಡುತಿರ್ಪರು ಹರಿಯೇ ॥ ೩ ॥

೨

ಶರಣು ಸಿದ್ಧಿವಿನಾಯಕ ಶರಣು ವಿದ್ಯಾಪ್ರದಾಯಕ।
ಶರಣು ಪಾರ್ವತಿತನಯ ಮೂರುತಿ ಶರಣುಮೂಷಕವಾಹನ॥
॥ ಪಲ್ಲ ॥

ನಿಟಿಲನೇತ್ರನ ವರದಪುತ್ರನೇ ನಾಗಭೂಷಣಪ್ರಿಯನೇ।
ಕಟಿಕರಾಂಕಿತಕೋಮಲಾಂಗನೇ ಕನಕಕುಂಡಲಧಾರನೇ ॥ ೧ ॥

ಬಟ್ಟುಮುತ್ತಿನ ಪದಕಧಾರನೇ ಬಾಹುಹಸ್ತಚತುಷ್ಟನೇ।
ಇಟ್ಟ ತೋಳದಿ ಹೇಮಕಂಕಣ ಪಾಶಾಂಕುಶಧಾರನೇ ॥ ೨ ॥

ಕುಕ್ಷಿಮಹಾಲಂಬೋದರನೇ ಇಕ್ಷುಚಾಪನ ಗೆಲಿದನೇ।
ಪಕ್ಷಿವಾಹನನಾದ ಪುರಂದರವಿಠ್ಠಲನ ನಿಜದಾಸನೇ ॥ ೩ ॥

೩

ಏಳು ಸದ್ಗುರುನಾಥ। ಏಳು ಕರುಣಾನಿಧಿಯೇ।
ಏಳು ನೀ ಉಮದೀಶ। ಜಗದೀಶನಯ್ಯಾ ॥ ಪಲ್ಲ ॥

## ಉದಯರಾಗ

ಜಗದೊಳಗೆ ದೃಶ್ಯ ಅವತಾರವನು ಧರಿಸಿದಿ।
ಸರ್ವಧರ್ಮದ ಮರ್ಮ ತಿಳಿಸಿಕೊಟ್ಟಿ।
ವೇದಕೆ ನಿಲುಕದ ಈಶನನು ತೋರಿಸಿದಿ।
ಗುರುದೇವ ನೀ ಎನ್ನನು ಧನ್ಯ ಮಾಡಿದಿ ॥ ೧ ॥

ಗುರುವಿನಿಂದಲೇ ಭಕ್ತಿ ಗುರುವಿನಿಂದಲೇ ಮುಕ್ತಿ।
ಗುರುವಿನಿಂದಲೇ ಸಹಜ ಪರಮೇಶಪ್ರಾಪ್ತೀ।
ಗುರುದೇವ ನಿನ್ನಹೊರತು ಅನ್ಯದೇವರು ಯಾಕೆ।
ಗುರುವಿನ ದಯವೊಂದಿದ್ದರೇ ಸಾಕೇ ॥ ೨ ॥

ಧನ್ಯ ಗುರುದೇವನೇ ಧನ್ಯ ಉಮದೀಶನೇ।
ಧನ್ಯ ನೀ ಸದ್ಧರ್ಮ ಪ್ರತಿಪಾಲಕನೇ।
ಧನ್ಯ ನಿನ್ನ ಭಕ್ತರು ಆರತಿಯ ಬೆಳಗುವರು।
ಭಕ್ತತಾರಕ ಗುರುವೇ- ಬೇಗನೇಳಯ್ಯಾ ॥ ೩ ॥

೪

ಉಠೋನಿಯಾ ಪ್ರಾತಃಕಾಳೀ ವೇಗೇ ಜಾವೂ ರಾವುಳಾಸೀ।
ಜಳತಿಲ ಪಾತಕಾಂಚ್ಯಾ ರಾಶೀ ಕಾಕಡಾರತೀ ದೇಖಿಲ್ಯಾ ॥ ೧ ॥

ಉಠಾ ಉಠಾ ಹೋ ಸಾಧುಜನ ಸಾಧಾ ಆಪುಲಾಲೇ ಹಿತ।
ಗೇಲಾ ಗೇಲಾ ನರದೇಹ ಮಗ ಕೈಚಾ ಭಗವಂತ ॥ ೨ ॥

ಉಠೋನಿಯಾ ಪಹಾಟೇ ವಿಠೋಬಾ ಪಾಹೂ ಬಾ ನೀಟ।
ಚರಣ ತಯಾಚೇ ಅಮೋಲಿಕ ಅವಲೋಕೂ ದೃಷ್ಟೀಯಾ ॥ ೩ ॥

ಜಾಗೇ ಕರಾ ರುಕ್ಮಿಣಿವರಾ ದೇವ ನಿಜಲೇ ನಿಜಮಂದಿರಾ।
ವೇಗೀ ನಿಂಬಲೋಣ ಕರಾ ದೃಷ್ಟ ಹೋಯೀಲ ತಯಾಸೀ ॥ ೪ ॥

ಢೋಲ ದಮಾಮೆ ಗರ್ಜತೀ ಪುಢೇ ವಾಜಂತ್ರೀ ವಾಜತೀ।
ಕಾಕಡಾರತಿ ಹೋತೀ ಪಾಂಡುರಂಗರಾಯಾಚೀ ॥ ೫ ॥

ಸಿಂಹಶಂಖನಾದಭೇರೀ ಗಜರ ಹೋತೋ ಮಹಾದ್ವಾರೀ।
ಕೇಶವರಾಜ ವಿಟೇವರೀ ನಾಮಾ ಚರಣೇ ವಂದಿತೋ ॥ ೬ ॥

ಭಾವಾರ್ಥ: ಪ್ರಾತಃಕಾಲದಲ್ಲಿ ಎದ್ದು ಬೇಗನೇ ವಿಠ್ಠಲಮಂದಿರಕ್ಕೆ ಹೋಗೋಣ. ಅಲ್ಲಿಯ ಕಾಕಡಆರತಿಯನ್ನು ನೋಡಿದರೆ ರಾಶಿಪಾಪಗಳು ಸುಟ್ಟುಹೋಗುವವು. ಸಜ್ಜನರೇ ಏಳಿರಿ, ನಿಮ್ಮ ಹಿತ ಸಾಧಿಸಿಕೊಳ್ಳಿರಿ. ಈಶ್ವರನ ದರ್ಶನದಲ್ಲಿ ನಿಮ್ಮ ನಿಜವಾದ ಹಿತವಿದೆ. ಈ ನರದೇಹ ಹೋಗಲಿದೆ. ಅದು ಹೋದಮೇಲೆ ಭಗವಂತನು ಹೇಗೆ ದೊರೆತಾನು? ಬೆಳಿಗ್ಗೆ ಎದ್ದು ಕಂಗಳಿಗೆ ತೃಪ್ತಿಯಾಗುವಂತೆ ವಿಠ್ಠಲನದರ್ಶನ ಪಡೆಯೋಣ. ಈ ಕಣ್ಣುಗಳಿಂದ ಅವನ ಅಮೌಲ್ಯವಾದ ಚರಣಗಳನ್ನು ನೋಡೋಣ. ದೇವನು ತನ್ನ ಮಂದಿರದಲ್ಲಿ ಮಲಗಿದ್ದಾನೆ. ಆ ರುಕ್ಮಿಣೀರಮಣನನ್ನು ಎಚ್ಚರಿಸಿರಿ. ಅವನಿಗೆ ದೃಷ್ಟಿಯಾದೀತು. ಬೇಗನೇ ದೃಷ್ಟಿ ತೆಗೆಯಿರಿ. ಪಾಂಡುರಂಗನ ಎದುರಿಗೆ

ಉದಯರಾಗ

ಡೋಲುನಗಾರಿಗಳು ಮೊಳಗುತ್ತವೆ. ಬಜಂತ್ರಿ ಬಾರಿಸಹತ್ತಿದೆ. ಪಾಂಡುರಂಗನ ಸುಪ್ರಭಾತದ ಆರತಿ ನಡೆಯುತ್ತಿದೆ. ಮಹಾದ್ವಾರದಲ್ಲಿ ಸಿಂಹನಾದ, ಶಂಖನಾದಗಳು, ಭೇರಿಗರ್ಜನೆಯು ಕೇಳುತ್ತಿದೆ. ಇಟ್ಟಿಗೆಯಮೇಲೆ ನಿಂತಿರುವ ಕೇಶವರಾಜನ ಚರಣಗಳಿಗೆ ನಾಮದೇವನು ವಂದಿಸುತ್ತಾನೆ.

೫

ಗುರು ಹಾ ಸಂತಕುಳೀಂಚಾ ರಾಜಾ। ಗುರು ಹಾ ಪ್ರಾಣವಿಸಾವಾ ಮಾಝಾ।
ಗುರುವಿಣ ದೇವ ನಾಹೀ ದುಜಾ। ಪಾಹತಾ ನಾಹೀ ತ್ರಿಲೋಕೀ
॥ ೧ ॥

ಗುರು ಹಾ ಸುಖಾಚಾ ಸಾಗರ। ಗುರು ಹಾ ಪ್ರೇಮಾಚಾ ಆಗರ।
ಗುರು ಹಾ ಧೈರ್ಯಾಚಾ ಡೋಂಗರ। ಕದಾಕಾಳೀ ಡಳಮಳೇನಾ
॥ ೨ ॥

ಗುರು ಹಾ ಸತ್ತ್ವಾಲಾಗೀ ಸಾಹ್ಯ। ಗುರು ಹಾ ಸಾಧಕಾಸೀ ಮಾಯ।
ಗುರು ಹಾ ಕಾಮಧೇನು ಗಾಯ। ಭಕ್ತಾಘರೀ ದುಭತಸೇ ॥ ೩ ॥

ಗುರು ಹಾ ಭಕ್ತಿಚೇ ಮಂಡಣ। ಗುರು ಹಾ ದೇಹಾಸೀ ದಂಡಣ।
ಗುರು ಹಾ ಪಾಪಾಚೇ ಖಂಡಣ। ನಾನಾಪರೀ ವಾರಿತಸೇ ॥ ೪ ॥

ಗುರು ಹಾ ವೈರಾಗ್ಯಾಚೇ ಮೂಳ। ಗುರು ಹಾ ಪರಬ್ರಹ್ಮ ಕೇವಳ।
ಗುರು ಹಾ ಸೋಡವೀ ತತ್ಕಾಳ। ಗಾಂಠೀ ಲಿಂಗದೇಹಾಚ್ಯಾ ॥ ೫ ॥

ಗುರು ಹಾ ಘಾಲೀ ಜ್ಞಾನಾಂಜನ। ಗುರು ಹಾ ದಾಖವೀ ನಿಜಧನ।
ಗುರು ಹಾ ಸೌಭಾಗ್ಯ ದೇವೂನ। ಸ್ವಾತ್ಮಬೋಧ ನಾಂದವೀ ॥ ೬ ॥
ಕಾಯಾ ಕಾಶೀ ಗುರು ಉಪದೇಶೀ। ತಾರಕ ಮಂತ್ರ ದಿಲಾ ಆಮ್ಹಾಸೀ।
ಬಾಪರಖುಮಾದೇವೀವರಾಸೀ। ಧ್ಯಾನ ಮಾನಸೀ ಲಾಗಲೇ ॥ ೭ ॥

ಭಾವಾರ್ಥ: ಗುರುವು ಸಂತಕುಲದ ರಾಜನು. ಗುರುವು ನನ್ನ ಜೀವದ ವಿಶ್ರಾಂತಿಸ್ಥಾನವು. ಮೂರೂ ಲೋಕದಲ್ಲಿ ನೋಡಿದರೂ ಗುರುವನ್ನುಬಿಟ್ಟು ಬೇರೆ ದೇವರಿಲ್ಲ. ಗುರುವು ಸುಖದ ಸಾಗರ, ಪ್ರೇಮದ ಆಗರ ಹಾಗೂ ಧೈರ್ಯದ ಪರ್ವತವು. ಅವನು ಎಂದಿಗೂ ವಿಚಲಿತನಾಗುವುದಿಲ್ಲ. ಗುರುವು ಸತ್ಯಕ್ಕೆ ಸಹಾಯಕನು. ಸಾಧಕನಿಗೆ ತಾಯಿಇದ್ದಂತೆ. ಭಕ್ತರ ಮನೆಗಳಲ್ಲಿ ಹಾಲುಕರೆಯುವ ಕಾಮಧೇನುವು ಅವನು. ಭಕ್ತಿಯ ಪ್ರತಿಪಾದಕನು. ದೇಹವನ್ನು ದಂಡಿಸಿ ಪಾಪಗಳನ್ನು ಖಂಡಿಸುವಲ್ಲಿ ನಾನಾಬಗೆಯಾಗಿ ಅವುಗಳ ನಿವಾರಣೆಯಾಗುವಂತೆ ಅವನು ಮಾಡುತ್ತಾನೆ. ಗುರುವು ವೈರಾಗ್ಯದ ಮೂಲ. ಗುರುವೇ ಪರಬ್ರಹ್ಮ. ಗುರುವು ತತ್‍ಕ್ಷಣ ಲಿಂಗದೇಹದ ಗಂಟನ್ನು ಬಿಚ್ಚುತ್ತಾನೆ. ಶಿಷ್ಯನ ಕಣ್ಣುಗಳಲ್ಲಿ ಜ್ಞಾನಾಂಜನವನ್ನು ಹಾಕಿ ಗುಪ್ತವಾದ ಆತ್ಮಧನವನ್ನು ತೋರಿಸುತ್ತಾನೆ. ಅವನಿಗೆ ಆತ್ಮಾನುಭವದ ಸೌಭಾಗ್ಯನೀಡಿ ಅದರ ಆನಂದದಲ್ಲಿರಿಸುತ್ತಾನೆ. ಈ ಕಾಯವೇ ಕಾಶೀಪುರವು. ಸದ್ಗುರುವು ನಮಗೆ ತಾರಕಮಂತ್ರವನ್ನು ಅನುಗ್ರಹಿಸಿದ್ದಾನೆ. ಮನದಲ್ಲಿ ನಿರಂತರವೂ

## ಉದಯರಾಗ

ವಿಠ್ಠಲರಖುಮಾಯಿ ಇವರ ಧ್ಯಾನವು ನೆಟ್ಟಿದೆ ಎಂದು ಜ್ಞಾನೇಶ್ವರ ಮಹಾರಾಜರು ಹೇಳುತ್ತಾರೆ.

೬

ಫಳಲೇ ಭಾಗ್ಯ ಮಾಝೇ। ಧನ್ಯ ಝಾಲೋ ಸಂಸಾರೀ।
ಸದ್ಗುರು ಭೇಟಲೇ ಹೋ। ತ್ಯಾನೀ ಧರಿಯೇಲೆ ಕರೀ॥
ಪಶ್ಚಿಮೇ ಚಾಲವೀಲೇ। ಆತ್ಮಾತೇಥೇ ನಿರ್ಧಾರೀ।
ತ್ರಿಕುಟಾವರೀ ನಾಂದೇ। ದೇಖಿಯೇಲೀ ಪಂಢರೀ॥ ॥ ೧ ॥

ತೇ ಸುಖ ಕಾಯ ಸಾಂಗೂ। ವಾಚೇ ಬೋಲತಾ ನಯೇ।
ಆರತೀಚೇನಿ ಯೋಗೇ। ಗೇಲೇ ಮೀಪಣ ಮಾಯೇ ॥ ಧೃಂ ॥

ರಾವುಳಾಮಾಜೀ ಜಾತಾ। ರಾಹೇ ದೇಹಅವಸ್ಥಾ।
ಮನ ಹೇ ಉನ್ಮನ ಝಾಲೇ। ನಸೇ ಬದ್ಧತೇಚೀ ವಾರ್ತಾ॥
ಹೇತು ಹಾ ಮಾವಳಲಾ। ಶಬ್ದಾ ಆಲೀ ನಿಶ್ಶಬ್ದತಾ।
ತಟಸ್ಥ ಹೋವುನಿ ಠೇಲೇ। ನಿಜರೂಪ ಪಾಹತಾ ॥ ೨ ॥

ತ್ರಿಗುಣ ಗುಣ ಬಾತೀ। ಪೂರ್ಣ ಉಜಳಲ್ಯಾ ವಾತೀ।
ನವಲಾವ ಅವಿನಾಶ। ನ ಜಾಯೇ ಸ್ವಯಂಜ್ಯೋತಿ॥
ಲಾವಿತಾ ಲಕ್ಷ ತೇಥೇ। ಹಾಲೂ ವಿಸರಲೀ ಪಾತೀ।
ನಾತುಡೇ ಮನ ಮಾಝೇ। ನ ಕಳೇ ದಿವಸರಾತ್ರೀ ॥ ೩ ॥

ಆರತೀವಿಠ್ಠಲಾಚೀ। ಪೂರ್ಣ ಉಜಳಲೀ ಅಂತರೀ।
ಪ್ರಕಾಶ ಥೋರ ಝಾಲಾ। ಸಾತವೇನಾ ಅಂಬರೀ॥
ರವಿಶಶೀ ಮಾವಳಲೇ। ತಯಾ ತೇಜಾಮಾಝಾರೀ।
ವಾಜತೀ ದಿವ್ಯವಾದ್ಯೇ। ಅನುಹತ ಗಜರೀ ॥ ೪ ॥

ಆನಂದ ಸಾಗರಾತ। ಪ್ರೇಮೇ ಬುಡೀ ದಿಧಲೀ।
ಲಾಧಲೇ ಸೌಖ್ಯ ಮೋಠೇ। ನಯೇ ಬೋಲತಾ ಬೋಲೀ।
ಸದ್ಗುರೂಚೀನಿ ಸಂಗೇ। ಐಸೀ ಆರತೀ ಕೇಲೀ।
ನಿವೃತ್ತಿ ಆನಂದಾತ। ತೇಥೇ ವೃತ್ತಿ ನಿಮಾಲೀ ॥ ೫ ॥

ವಿಠ್ಠಲ, ವಿಠ್ಠಲ, ವಿಠ್ಠಲ, ವಿಠ್ಠಲ, ವಿಠ್ಠಲ!!!
ಪುಂಡಲೀಕ ವರದಾ ಹರಿ ವಿಠ್ಠಲ!
ರಾಜಾಧಿರಾಜ ಸದ್ಗುರುನಾಥ ಶ್ರೀ ಗುರುಲಿಂಗಜಂಗಮ
ಮಹಾರಾಜ ಕೀ ಜಯ।
ಶ್ರೀ ಜ್ಞಾನದೇವ ತುಕಾರಾಮ ತುಕಾರಾಮ ತುಕಾರಾಮ।
ಶ್ರೀ ಸದ್ಗುರುನಾಥ ಭಾವೂಸಾಹೇಬ ಮಹಾರಾಜ ಕೀ ಜಯ।
ಶ್ರೀ ಸದ್ಗುರುನಾಥ ಅಂಬೂರಾವ ಮಹಾರಾಜ ಕೀ ಜಯ।
ಶ್ರೀ ಸದ್ಗುರುನಾಥ ಗುರುದೇವ ರಾಮಭಾವೂ ಮಹಾರಾಜ ಕೀ ಜಯ।
ಶ್ರೀ ಗುರುದೇವ ದತ್ತ ದತ್ತ ದತ್ತ॥

ಭಾವಾರ್ಥ: ಸದ್ಗುರುವಿನ ಭೆಟ್ಟಿಯಾಗಿ ನನ್ನ ಭಾಗ್ಯವು ತೆರೆಯಿತು. ಅವನು ಕೈಹಿಡಿದು ನಡೆಸಿದ್ದರಿಂದ ಸಂಸಾರದಲ್ಲಿ ಧನ್ಯನಾದೆನು. ಆತ್ಮನು ವಾಸವಾಗಿರುವ ಸುಷುಮ್ನಾಮಾರ್ಗದಲ್ಲಿ ನನ್ನನ್ನು ನಡೆಸಿದನು. ತ್ರಿಕೂಟದಮೇಲೆ ಶೋಭಿಸುತ್ತಿರುವ ಪಂಢರಿಯನ್ನು ನೋಡಿದೆನು. ಆ ಆನಂದವನ್ನು ಹೇಗೆ ವರ್ಣಿಸಲಿ? ಶಬ್ದಗಳಲ್ಲಿ ಅದನ್ನು ಹೇಳಲು ಸಾಧ್ಯವಾಗುವುದಿಲ್ಲ. ಆರತಿಯಿಂದಾಗಿ ನನ್ನ ಅಹಂಕಾರವು ನಷ್ಟವಾಯಿತು. ದೇವಾಲಯದಲ್ಲಿ ಹೋದೊಡನೆ ದೇಹಭಾವವಡಗಿತು. ಮನವು ಉನ್ಮನವಾಯಿತು. ಬಂಧನವು ಹೇಳಹೆಸರಿಲ್ಲದಾಯಿತು. ವಾಸನೆಗಳು ಅಳಿದು ಮೌನತಾಳಿದೆನು. ಆತ್ಮಸ್ವರೂಪವನ್ನು ಕಂಡು ನಿಶ್ಚಲನಾದೆನು. ತಟಸ್ಥನಾಗಿ ಕುಳಿತೆನು. ತ್ರಿಗುಣಗಳ (ಸತ್ವ-ರಜ-ತಮ) ಬತ್ತಿಯು ಪ್ರಕಾಶಮಾನವಾಗಿ ಉರಿಯತೊಡಗಿತು. ಆ ಸ್ವಯಂಪ್ರಕಾಶಿತ ಜ್ಯೋತಿಯು ಅವಿನಾಶಿಯಾಗಿ ಉಳಿದು ಆಶ್ಚರ್ಯವನ್ನುಂಟುಮಾಡಿತು. ಅದರಲ್ಲಿ ಲಕ್ಷ್ಯವು ಕೇಂದ್ರೀಕೃತವಾಗಲು ಕಣ್ಣೆವೆಗಳು ಅಲುಗಾಡುವುದನ್ನು ಮರೆತವು. ಮನವು ಮಾಯವಾಯಿತು. ಹಗಲೋ ಇರುಳೋ ಎಂಬುದೂ ತಿಳಿಯದಾಯಿತು. ವಿಠ್ಠಲನ ಆರತಿಯು ಅಂತಃಕರಣವನ್ನು ಪೂರ್ಣವಾಗಿ ಬೆಳಗಿತು. ಅದರ ಪ್ರಕಾಶವು ಹೆಚ್ಚುತ್ತಹೋಗಿ ಆಕಾಶದಲ್ಲಿ ಹಿಡಿಸದಂತಾಯಿತು. ಅದರ ತೇಜದಲ್ಲಿ ಸೂರ್ಯಚಂದ್ರರು ಅಡಗಿದರು. ಆಗ ಅನಾಹತದ ದಿವ್ಯವಾದ್ಯಗಳ ಘೋಷವು ಕೇಳಿಸಹತ್ತಿತು. ಅಂತಃಕರಣದಲ್ಲಿ ಪ್ರೇಮವುಕ್ಕಿ

ಆನಂದಸಾಗರದಲ್ಲಿ ಮುಳುಗುಹಾಕಿದೆನು. ಆತ್ಯಂತಿಕ ಸುಖ ಲಭಿಸಿತು. ಮಾತು ಬಾರದಾಯಿತು. ಸದ್ಗುರು ನಿವೃತ್ತಿನಾಥನ ಜೊತೆಯಲ್ಲಿ ಇಂಥ ಆರತಿ ಮಾಡಿದೆನು. ಅದರ ಆನಂದದಲ್ಲಿ ನಿವೃತ್ತಿಯೊಂದೇ ಉಳಿದು ವೃತ್ತಿಯು ಇಲ್ಲದಾಯಿತು. ಸಾರಾಂಶವೆಂದರೆ, ಜ್ಯೋತಿಯಲ್ಲಿ ಸದ್ಗುರುವಿನ ದರ್ಶನವಾಯಿತು.

ವಿಠ್ಠಲ ವಿಠ್ಠಲ ವಿಠ್ಠಲ; ಪುಂಡಲೀಕ ವರದಾ ಹರಿ ವಿಠ್ಠಲ.
ರಾಜಾಧಿರಾಜ ಸದ್ಗುರುನಾಥ ಶ್ರೀ ಗುರುಲಿಂಗಜಂಗಮ
ಮಹಾರಾಜರಿಗೆ ಜಯವಾಗಲಿ.
ಶ್ರೀ ಜ್ಞಾನದೇವ ತುಕಾರಾಮ, ತುಕಾರಾಮ, ತುಕಾರಾಮ.
ಶ್ರೀ ಸದ್ಗುರುನಾಥ ಭಾವೂಸಾಹೇಬ ಮಹಾರಾಜರಿಗೆ
ಜಯವಾಗಲಿ.
ಶ್ರೀ ಸದ್ಗುರುನಾಥ ಅಂಬೂರಾವ ಮಹಾರಾಜರಿಗೆ ಜಯವಾಗಲಿ.
ಶ್ರೀ ಸದ್ಗುರುನಾಥ ಗುರುದೇವ ರಾಮಭಾವೂ ಮಹಾರಾಜರಿಗೆ
ಜಯವಾಗಲಿ.
ಶ್ರೀ ಗುರುದೇವ ದತ್ತ ದತ್ತ ದತ್ತ.

## ೭ -ಪ್ರಾರ್ಥನೆ-

ಯಾಚೇಽಹಂ ಕರುಣಾಸಿಂಧೋ ಯಾವಜ್ಜೀವಮಿದಂ ತವ।
ಆದೈನ್ಯಂ ದೇಹದಾರ್ಢ್ಯಂ ಚ ತ್ವತ್ಪಾದಾಂಬುಜಸದ್ರತಿಂ ॥ ೧ ॥

## ಉದಯರಾಗ

ಅನಾದ್ಯನಂತಕಾಲೇಷು ಭೃತ್ಯೋಽಹಂ ತ್ವಂ ಹಿ ಮೇ ಪ್ರಭುಃ।
ತ್ವಂ ತುಷ್ಟೋವಾಽಥ ರುಷ್ಟೋ ವಾ ತ್ವಾಂ ವಿನಾ ಮೇ ಗತಿರ್ನಹಿ
॥ ೨ ॥

ತುಷ್ಟೋಽಸಿ ತ್ವಂ ದಯಾಸಿಂಧೋ ಕಿಮನ್ಯೈರ್ಮಮ ರಕ್ಷಣೇ।
ರುಷ್ಟೋಽಸಿ ತ್ವಂ ದಯಾಸಿಂಧೋ ಕಿಮನ್ಯೈರ್ಮಮ ರಕ್ಷಣೇ ॥ ೩ ॥

ದೋಷಾಣಾಂ ಚ ಸಹಿಷ್ಣುತ್ವೇ ತ್ವತ್ಸಮೋ ನಾಸ್ತಿ ಭೂತಲೇ।
ಮತ್ಸಮೋ ನಹಿ ದೇವೇಶ ಕೃತಘ್ನೋ ವಂಚಕೋಽಪಿ ವಾ ॥ ೪ ॥

ಈಶಸ್ಯಾಖಿಲವೀರ್ಯಸ್ಯ ಕಿಮಸಾಧ್ಯಂ ವದಾಚ್ಯುತ।
ಮಮೇಷ್ಟಂ ಚ ಕ್ರಿಯನ್ಮಾತ್ರಂ ಕಿಮೇತಾವದ್ವಿಲಂಬನಮ್ ॥ ೫ ॥

ಜಗತ್ಸ್ವಾಮೀ ಕೃಪಾಪೂರ್ಣಃ ಸಂಭವೇನಿರ್ದಯಾಪರಃ।
ಕಾ ತದಾ ಗತಿರಸ್ಮಾಕಂ ಗರದಾಯಾಂ ಸ್ವಮಾತರಿ ॥ ೬ ।

ತ್ವಮೇವೈಕೋ ಜಗತ್ತ್ರಾತಾ ದಾತಾ ಜ್ಞಾತಾ ದಯಾನ್ವಿತಃ।
ತ್ವಾಂ ವಿನಾ ಕಃ ಪುಮಾನ್ ಕರ್ತಾ ಹ್ಯಸ್ಮಾಕಂ ತು ಮನೋರಥಮ್
॥ ೭ ॥

ಆರ್ತಬಂಧುರಿತಿ ಜ್ಞಾತ್ವಾ ತ್ವಾಮಹಂ ಶರಣಂ ಗತಃ।
ರಕ್ಷಮಾಮಥವಾ ಸಮ್ಯಕ್ ತ್ವಂ ಯಶೋ ಮುಂಚಶಾಶ್ವತಮ್
॥ ೮ ॥

ದೀನಬಂಧೋ ದಯಾಸಿಂಧೋ ಸುಹೃದ್ಬಂಧೋ ಜಗತ್ಪತೇ।
ಸಂಸಾರಾರ್ಣವಮಗ್ನಂ ಮಾಂ ಕಾರುಣ್ಯೇಶ ಸಮುದ್ಧರ ॥ ೯ ॥
ನಿರ್ಗುಣೇಷ್ವಪಿ ಸರ್ವೇಷು ದಯಾಂ ಕುರ್ವಂತಿ ಸಾಧವಃ।
ನ ಹಿ ಸಂಹರತೇ ಜ್ಯೋತ್ಸ್ನಾಂ ಚಂದ್ರಶ್ಚಾಂಡಾಲವೇಶ್ಮನಿ ॥ ೧೦ ॥
ಪ್ರಸೀದ ಮೇ ಶ್ರಿಯಃ ಕಾಂತ ಸುಪ್ರಸೀದ ದಯಾನಿಧೇ।
ಪುನಃ ಪುನಃ ಪ್ರಸೀದ ತ್ವಂ ಪ್ರಸೀದ ವರದೋ ಭವ ॥ ೧೧ ॥

ಶ್ರೀಮತ್ಪಂಚರಾತ್ರಾಗಮೋಕ್ತಂ ಕರುಣಾರಸಸ್ತೋತ್ರಂ ಸಂಪೂರ್ಣಂ॥

ಭಾವಾರ್ಥ : ಕರುಣಾ ಸಿಂಧುವೇ, ನನ್ನ ಜೀವ ಇರುವವರೆಗೆ ನಿನ್ನ ಅನುಗ್ರಹವನ್ನು ಬೇಡುತ್ತೇನೆ. ನಿನ್ನ ಚರಣಗಳಲ್ಲಿ ನಾನು ರತನಾಗಿರಬೇಕು. ದೇಹದಾರ್ಢ್ಯವನ್ನು ದಯಪಾಲಿಸು. ದೈನ್ಯವಿರದಿರಲಿ ಎಂದು ಬೇಡಿಕೊಳ್ಳುತ್ತೇನೆ. ಅನಾದಿಅನಂತಕಾಲದಿಂದಲೂ ನಾನು ನಿನ್ನ ದಾಸನು. ನೀನೇ ನನಗೆ ಪ್ರಭುವು. ನೀನು ನನ್ನಮೇಲೆ ಪ್ರಸನ್ನನಾಗಿರಲಿ, ಇಲ್ಲವೆ ಕೋಪಗೊಂಡಿರಲಿ, ನಿನ್ನ ಹೊರತು ನನಗೆ ಬೇರೆ ಯಾರೂ ಇಲ್ಲ. ನೀನು ಪ್ರಸನ್ನನಾದರೆ ನನಗೆ ಅನ್ಯರಿಂದ ರಕ್ಷಣೆ ಬೇಕಾಗಿಲ್ಲ. ನೀನು ಕೋಪಗೊಂಡರೆ, ಎರಡನೆಯವರು ನನಗೇನು ರಕ್ಷಣೆ ಮಾಡುವರು? ಈ ಭೂಮಂಡಲದಲ್ಲಿ ನಮ್ಮ ದೋಷಗಳನ್ನು ಸಹಿಸಿಕೊಂಡವರಲ್ಲಿ ನಿನಗೆ ಸರಿಯಾರು? ದೇವಾಧಿದೇವಾ, ನನ್ನಂಥ ಕೃತಘ್ನನು, ವಂಚಕನು, ಎಲ್ಲಿಯೂ ಸಿಗಲಾರನು. ಅಚ್ಯುತನೇ, ಸರ್ವಶಕ್ತಿಶಾಲಿಯಾದ ನಿನಗೆ ಯಾವುದು ಅಸಾಧ್ಯವು?

ಉದಯರಾಗ

ಅತ್ಯಲ್ಪವಾದ ನನ್ನ ಇಚ್ಛಾಪೂರ್ತಿಗೆ ಇಷ್ಟು ವಿಲಂಬವೇಕೆ? ಜಗತ್ತಿಗೇ ಸ್ವಾಮಿಯಾದವನೂ ಕೃಪಾಪೂರ್ಣನೂ ಆದ ನೀನೇ ನಿರ್ದಯನಾದರೆ, ಹೆತ್ತ ತಾಯಿಯೇ ವಿಷವಿತ್ತರೆ, ನಮ್ಮ ಗತಿ ಏನು? ನೀನೇ ಜಗದ್ರಕ್ಷಕನು, ದಾನಿಯು, ಜ್ಞಾನಿಯು, ದಯಾನಿಧಿಯು. ನಿನ್ನ ಹೊರತು ಬೇರೆ ಯಾರು ನಮ್ಮ ಮನೋರಥವನ್ನು ಈಡೇರಿಸಬಲ್ಲರು? ನೀನು ಆರ್ತರ ಬಂಧು ಎಂದು ಶರಣು ಬಂದಿದ್ದೇನೆ. ನನ್ನನ್ನು ರಕ್ಷಿಸು ಇಲ್ಲವೆ ನಿನ್ನ ಶಾಶ್ವತ ಕೀರ್ತಿಯನ್ನು ಬಿಟ್ಟುಕೊಡು. ದೀನಬಂಧುವೇ, ದಯಾಸಿಂಧುವೇ, ಸುಹೃದ್ಬಂಧುವೇ; ಜಗತ್ಪತಿಯೇ, ಕರುಣಾಪೂರ್ಣನಾದ ಈಶನೇ, ಸಂಸಾರಸಮುದ್ರದಲ್ಲಿ ಮುಳುಗಿದ ನನ್ನನ್ನು ಉದ್ಧರಿಸು. ಚಂದ್ರನು ಚಾಂಡಾಲರ ಮನೆಯಲ್ಲಿಯೂ ಬೆಳದಿಂಗಳನ್ನು ಕೊಡುವಂತೆ, ಸಾಧುಗಳು ದುರ್ಜನರನ್ನೂ ದಯೆಯಿಂದ ನೋಡುತ್ತಾರೆ. ಲಕ್ಷ್ಮೀಕಾಂತನೇ, ನನ್ನಮೇಲೆ ಪ್ರಸನ್ನನಾಗು. ಹೇ ದಯಾಸಿಂಧುವೇ, ಮತ್ತೆ ಮತ್ತೆ ಪ್ರಸನ್ನನಾಗಿ ವರವನ್ನು ನೀಡು.

ಶ್ರೀಮತ್ಪಂಚರಾತ್ರಾಗಮದಲ್ಲಿ ಹೇಳಿದ ಕರುಣಾರಸಸ್ತೋತ್ರವು ಸಂಪೂರ್ಣವಾಯಿತು.

ಅ -ಪ್ರಾರ್ಥನೆ-

ತಾಪತ್ರಯೇ ಹಾ ಬಹು ಗಾಂಜಲೋ ಮೀ।
ಬುದ್ಧಿ ಸ್ಥಿರಾವೇ ನಚ ಶೀಘ್ರ ರಾಮೀ॥

ಮನೇ ವೊಂಧಿಲೋ ಸರ್ವದಾ ಕಾಮಪಾಶೀ।
ಗುರೋ ಕೃಪಾಳೂ ಧರಿ ಶೀಘ್ರ ಹಾತೀ ॥ ೧ ॥

ವಿಪತ್ತಿ ಅಸೋ ಸರ್ವದಾ ಕುಂತಿ ಮಾಗೇ।
ಹರೀಚೇ ಜರೀ ಸರ್ವದಾ ಧ್ಯಾನ ಲಾಗೇ।
ಸುಟೇನಾ ಕದಾ ಭೋಗಲ್ಯಾವೀಣ ಭೋಗ।
ಪರೀ ಸರ್ವದಾ ನಾಮ ಇಚ್ಛೀ ಅಭಂಗ ॥ ೨ ॥

ಮನೀ ಪ್ರೇರಣಾ ಥೋರ ಆತಾ ಕರಾವೀ।
ಸದಾ ವಸ್ತುನೇ ದೃಷ್ಟಿ ತುಮ್ಹೀ ಭರಾವೀ।
ಶರೀರೀ ಸದಾ ನೇಮ ಹಾ ವಾಢವಾವಾ।
ಸದಾ ಬುದ್ಧಿಲಾ ಜ್ಞಾನಯೋಗೀಚ ಠೇವಾ ॥ ೩ ॥

ಸದಾ ಸಂತಸಂಗೀ ರಮೋ ಚಿತ್ತ ಮಾಝೇ।
ಸದಾ ತತ್ಪದೀ ವಾಸ ಮಾಝಾ ಅಸೋದೇ।
ಕಧೀ ದಾವಿಸೀ ಆಮುಚೇ ಪಂಢರೀ ಹೀ।
ಭರೇ ಮಾನಸೀ ಸರ್ವದಾ ಇಂಚಗೇರೀ ॥ ೪ ॥

ಸಂಸಾರತಾಪೇ ಬಹು ತಾಪಲೋ ಪಹಾ।
ನಿವೃತ್ತಿಮಾರ್ಗೇ ಮಜ ಶೀಘ್ರ ಚಾಲವಾ।
ನಸೇ ದೂಸರಾ ರಕ್ಷಿತಾ ಕೋಣ ಮಾತೇ।
ಕೃಪಾ ಪೂರ್ಣ ದಾಸಾನುದಾಸಾ ಅಸೋ ದೇ ॥ ೫ ॥

ಭಾವಾರ್ಥ: ತಾಪತ್ರಯದಿಂದ ಬಹಳ ತ್ರಸ್ತನಾಗಿದ್ದೇನೆ. ನನ್ನ ಬುದ್ಧಿಯು ಶ್ರೀರಾಮನಲ್ಲಿ ಸ್ಥಿರವಾಗಿ ಬೇಗನೆ ನಿಲ್ಲಲೊಲ್ಲದು. ಮನವು ನನ್ನನ್ನು ಯಾವಾಗಲೂ ಕಾಮದೆಡೆಗೇ ಸೆಳೆದೊಯ್ಯುತ್ತದೆ. ಕೃಪಾನಿಧಿಯಾದ ಗುರುವೇ, ಬೇಗನೆ ನನ್ನ ಕೈಹಿಡಿದುಕೋ. ಹರಿಯಸ್ಮರಣೆಯು ಯಾವಾಗಲೂ ಜಾಗೃತವಾಗಿ ಉಳಿಯುತ್ತಿದ್ದರೆ ತನ್ನ ಹಿಂದೆ ಸಂಕಟಗಳು ಯಾವಾಗಲೂ ಇರಲಿ, ಭೋಗವು ಭೋಗಿಸದಲ್ಲದೆ ಬಿಡದು. ಆದರೂ ನಿನ್ನ ನಾಮವು ಅಖಂಡವಾಗಿರಲಿ ಎಂದು ಕುಂತಿಯು ಪ್ರಾರ್ಥಿಸಿದ್ದಾಳೆ. ಮನಸ್ಸಿಗೆ ಮಹತ್ತರವಾದ ಪ್ರೇರಣೆಯನ್ನು ನೀಡಿರಿ. ಕಣ್ಣಲ್ಲಿ ಯಾವಾಗಲೂ ವಸ್ತುವು ತುಂಬಿಕೊಂಡಿರುವಂತೆ ಮಾಡಿರಿ. ನಾಮಸ್ಮರಣೆಯು ನಿರಂತರವಾಗಿ ಬೆಳೆಯುವಂತೆ ಶರೀರಕ್ಕೆ ರೂಢಿಮಾಡಿಸಿರಿ. ನನ್ನ ಬುದ್ಧಿಯನ್ನು ಯಾವಾಗಲೂ ಜ್ಞಾನಯೋಗದಲ್ಲಿಡಿರಿ. ಚಿತ್ತವು ಯಾವಾಗಲೂ ಸಂತರ ಸಂಗತಿಯಲ್ಲಿ ಆನಂದಪಡೆಯಲಿ. ನಾನು ಯಾವಾಗಲೂ ನಿಮ್ಮ ಚರಣಗಳಲ್ಲಿ ವಾಸವಾಗುವಂತೆ ಮಾಡಿರಿ. ನನ್ನ ಮನಸ್ಸಿನಲ್ಲಿ ಯಾವಾಗಲೂ ತುಂಬಿಕೊಂಡಿದ್ದ ಪಂಢರಪುರದಂಥ ಇಂಚಗೇರಿಯನ್ನು ಯಾವಾಗ ತೋರಿಸುವಿರಿ? ಸಂಸಾರತಾಪದಿಂದ ಬೆಂದುಹೋಗಿದ್ದೇನೆ. ನನ್ನನ್ನು ನಿವೃತ್ತಿ ಮಾರ್ಗದಲ್ಲಿ ನಡೆಸಿರಿ. ನಿಮ್ಮ ಹೊರತು ನನ್ನನ್ನು ಬೇರಾರು ರಕ್ಷಿಸುವರು? ದಾಸಾನುದಾಸನಾದ ನನ್ನಮೇಲೆ ಪೂರ್ಣಕೃಪೆ ಇರಲಿ.

## ಪ್ರಾತಃಕಾಲದ ಭಜನೆ

ಗಣಾಧೀಶ ಜೋ ಈಶ ಸರ್ವಾ ಗುಣಾಂಚಾ।
ಮುಳಾರಂಭ ಆರಂಭ ತೋ ನಿರ್ಗುಣಾಚಾ।
ನಮೂ ಶಾರದಾ ಮೂಳ ಚತ್ವಾರಿ ವಾಚಾ।
ಗಮೂ ಪಂಥ ಆನಂತ ಯಾ ರಾಘವಾಚಾ ॥ ೧ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥ ೨ ॥

ಶ್ರೂಯತಾಂ ದೇವ ದೇವೇಶ ನಾರಾಯಣ ಜಗತ್ಪತೇ।
ತ್ವದೀಯನಾಮಧ್ಯಾನೇನ ಕಥಯಿಷ್ಯೇ ಶುಭಾಃ ಕಥಾಃ ॥ ೩ ॥

ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಮ್।
ದ್ವಂದ್ವಾತೀತಂ ಗಗನಸದೃಶಂ ತತ್ತ್ವಮಸ್ಯಾದಿಲಕ್ಷ್ಯಮ್।
ಏಕಂ ನಿತ್ಯಂ ವಿಮಲಮಚಲಂ ಸರ್ವಧೀಸಾಕ್ಷಿಭೂತಮ್।
ಭಾವಾತೀತಂ ತ್ರಿಗುಣರಹಿತಂ ಸದ್ಗುರುಂ ತಂ ನಮಾಮಿ ॥ ೪ ॥

ಭಾವಾರ್ಥ: ಸಕಲ ಗಣಗಳ ಸ್ವಾಮಿಯೂ, ನಿರ್ಗುಣ ಬ್ರಹ್ಮಜ್ಞಾನಕ್ಕೆ ಮೂಲ ಕಾರಣನೂ ಆದ ಗಣಾಧೀಶನಿಗೂ, ಪರಾ-ಪಶ್ಯಂತೀ-ಮಧ್ಯಮಾ-ವೈಖರಿಗಳ ರೂಪದಲ್ಲಿ ವ್ಯಕ್ತವಾಗುವ ಮೂಲವಾಣಿಗೆ ನಮಸ್ಕರಿಸಿ, ಈ ಪರಮಾತ್ಮನ ಅನಂತವಾದ ಪಥವನ್ನು ಕ್ರಮಿಸೋಣ.

## ಪ್ರಾತಃಕಾಲದ ಭಜನೆ

ನಮಿಸಿ ನಾರಾಯಣನ। ನರನ ಪುರುಷೋತ್ತಮನ।
ವ್ಯಾಸ ವಾಗ್ದೇವಿಯರ। ಬಳಿಕ ಪೇಳ್ವುದು ಜಯವ॥

ಹೇ ನಾರಾಯಣನೇ, ದೇವಾಧಿದೇವನೇ, ಜಗತ್ಪತಿಯೇ ನಿನ್ನ ನಾಮವನ್ನು ಸ್ಮರಿಸಿ, ಮಂಗಲಕರವಾದ ಕಥೆಗಳನ್ನು ಹೇಳುತ್ತೇನೆ. ಬ್ರಹ್ಮಾನಂದನೂ, ಶ್ರೇಷ್ಠವಾದ ಸುಖವನ್ನು ಕೊಡುವಂಥವನೂ, ಜ್ಞಾನಮೂರ್ತಿಯೂ, ದ್ವಂದ್ವಾತೀತನೂ, ಆಕಾಶಸದೃಶನೂ, ತತ್ತ್ವಮಸಿ ಇತ್ಯಾದಿ ಮಹಾವಾಕ್ಯಗಳ ಏಕಮೇವ ಧ್ಯೇಯನೂ, ಏಕೈಕನೂ, ನಿತ್ಯನೂ, ಅಚಲನೂ, ನಿರ್ಮಲನೂ, ಎಲ್ಲ ತತ್ತ್ವಗಳಿಗೆ ಸಾಕ್ಷಿಯಾಗಿದ್ದವನೂ, ಭಾವಗಳಿಗೆ ನಿಲುಕದವನೂ, ತ್ರಿಗುಣರಹಿತನೂ ಆದ ಸದ್ಗುರುವಿಗೆ ನಮಸ್ಕಾರ ಮಾಡುತ್ತೇನೆ.

೨

ಸದ್ಗುರುನಾಥ ಮಾಝೇ ಆಈ। ಮಲಾ ಠಾವ ದ್ಯಾವಾ ಪಾಯೀ॥ (೨ಸಲ)
ಮಲಾ ಠಾವ ದ್ಯಾವಾ ಪಾಯೀ॥ (೨ ಸಲ)
ಸದ್ಗುರುನಾಥ ಮಾಝೇ ಆಈ। ಮಲಾ ಠಾವ ದ್ಯಾವಾ ಪಾಯೀ॥
(೨ ಸಲ)

ಭಾವಾರ್ಥ: ತಾಯಿಯಂತಿದ್ದ ಸದ್ಗುರುವೇ, ನಿನ್ನ ಚರಣಗಳಲ್ಲಿ ನನಗೆ ಆಶ್ರಯಕೊಡು.

೩

ಪಹಿಲೇ ಪಾಹತಾ ಶ್ರೀಮುಖ।
ತಹಾನ ಹರಪಲೀ ಭೂಕ ॥ ೧ ॥

ಪಹಾ ಪಹಾ ಡೋಳೇಭರೀ।
ಮೂರ್ತಿ ಸಾವಳೀ ಗೋಜಿರೀ ॥ ೨ ॥

ರವಿ ಶಶೀ ಜ್ಯಾಚ್ಯಾ ಕಳಾ।
ತೋ ಹಾ ಮದನಾಚಾ ಪುತಳಾ ॥ ೩ ॥

ತುಕಾ ಮ್ಹಣೇ ವರ್ಣೂ ಕಾಯ।
ಘೇತೋ ಆಲಯಾ ಬಾಲಯ ॥ ೪ ॥

ಭಾವಾರ್ಥ: ಮೊದಲು ದೇವನ ಮುಖದರ್ಶನವಾದ ಕೂಡಲೇ ಹಸಿವು, ನೀರಡಿಕೆಗಳು ಮಾಯವಾಗಿಹೋದವು. ಸುಂದರವಾದ ಶ್ಯಾಮವರ್ಣದ ಮೂರ್ತಿಯನ್ನು ಕಣ್ತುಂಬ ನೋಡಿರಿ. ಸೂರ್ಯಚಂದ್ರರು ಅವನ ಅಂಶವೆನಿಸುವ ಸೌಂದರ್ಯದ ಪುತ್ತಳಿ ಅವನು. ಅವನು ನನ್ನನ್ನು ಆಲಂಗಿಸುತ್ತಾನೆ. ಅದರ ಸುಖವನ್ನೆಂತು ವರ್ಣಿಸಲಿ? ಎಂದು ತುಕಾರಾಮರೆನ್ನುತ್ತಾರೆ.

೪

ವಾಮಸವ್ಯ ದೋಹೀಕಡೇ।
ದಿಸೇ ದೇವಾಚೇ ರೂಪಡೇ ॥ ೧ ॥

## ಪ್ರಾತಃಕಾಲದ ಭಜನೆ

ಖಾಲೀ ಪಾಹೇ ಅಥವಾ ವರೀ।
ಜಿಕಡೇ ಪಹಾವೇ ತಿಕಡೇ ಹರೀ ॥ ೨ ॥

ಡೋಳೇ ಝಾಕೂನಿಯಾ ಪಾಹೇ।
ಪುಢೇ ಗೋಪಾಳ ಉಭಾ ಆಹೇ ॥ ೩ ॥

ಆಣುರೇಣು ಚಕ್ರಪಾಣೀ।
ಖೂಣ ಝಾಲೀ ದಾಸೀ ಜನೀ ॥ ೪ ॥

ಭಾವಾರ್ಥ: ಎಡದಲ್ಲಿಯೂ ಬಲದಲ್ಲಿಯೂ ದೇವರ ರೂಪವು ಕಾಣುತ್ತದೆ. ಕೆಳಗೆನೋಡಲಿ, ಮೇಲೆನೋಡಲಿ, ಎಲ್ಲಿನೋಡಿದರೂ ಹರಿಯೇ ಕಾಣುತ್ತಾನೆ. ಕಣ್ಣುಮುಚ್ಚಿ ನೋಡಿದರೂ, ಎದುರಿಗೆ ಗೋಪಾಲನು ನಿಂತೇ ಇರುತ್ತಾನೆ. ಹೀಗೆ ನಾಮದೇವರ ದಾಸಿಯಾದ ಜನಾಬಾಯಿಗೆ, ಅಣುರೇಣುಗಳಲ್ಲಿಯೂ ಚಕ್ರಪಾಣಿಯು ಇರುವದರ ಗುರುತುಸಿಕ್ಕಿತು.

೫

ಹಡಬಡಲೇ ಪಾತಕ।
ರಾಮನಾಮ ಘೇತಾ ಏಕ ॥ ೧ ॥

ನಾಮ ಘೇತಾ ತತ್ಕ್ಷಣೀ।
ಚಿತ್ರೇ ಠೇವಿಲೀ ಲೇಖಣೀ ॥ ೨ ॥

ಘೇವೂನಿ ಪೂಜೇಚಾ ಸಂಭಾರ।
ಬ್ರಹ್ಮಾ ಏತಸೇ ಸಾಮೋರ ॥ ೩ ॥

ನಾಮಾ ಮ್ಹಣೇ ಹೇ ಜರೀ ಲಟಕೇ।
ತರೀ ಛೇದಾವೇ ಮಸ್ತಕ ॥ ೪ ॥

ಭಾವಾರ್ಥ: ರಾಮನಾಮವೊಂದನ್ನು ತೆಗೆದುಕೊಳ್ಳುತ್ತಿದ್ದ ಹಾಗೆಯೇ ಪಾಪಗಳೆಲ್ಲ ದಿಕ್ಕೆಟ್ಟು ಹೋದವು. ನಾಮ ತೆಗೆದುಕೊಂಡ ತತ್‌ಕ್ಷಣವೇ ಚಿತ್ರಗುಪ್ತನು ಲೆಕ್ಕಣಿಕೆಯನ್ನು ಕೆಳಗೆ ಇಟ್ಟುಬಿಟ್ಟನು. ಬ್ರಹ್ಮನು ಸ್ವತಃ ಪೂಜಾಸಾಮಗ್ರಿಯನ್ನು ತೆಗೆದುಕೊಂಡು ಎದುರಿಗೆ ಬರುತ್ತಿದ್ದಾನೆ. ಈಮಾತು ಅಸತ್ಯವಾದರೆ ನನ್ನ ಶಿರವನ್ನು ಛೇದಿಸಿರಿ ಎಂದು ನಾಮದೇವರು ಹೇಳುತ್ತಾರೆ.

೬

ತಿಳಾಎವಢೇ ಬಾಂಧುನಿ ಘರ।
ಆತ ರಾಹೇ ವಿಶ್ವಂಭರ ॥ ೧ ॥
ತಿಳಾಇತುಕೇ ಹೇ ಬಿಂದುಲೇ।
ತೇಣೇ ತ್ರಿಭುವನ ಕೋಂದಾಟಲೇ ॥ ೨ ॥
ಹರಿಹರಾಂಚ್ಯಾ ಮೂರ್ತಿ।
ಬಿಂದುಲ್ಯಾತ ಏತೀ ಜಾತೀ ॥ ೩ ॥
ತುಕಾ ಮ್ಹಣೇ ಹೇ ಬಿಂದುಲೇ
ತೇಣೇ ತ್ರಿಭುವನ ಕೋಂದಾಟಲೇ ॥ ೪ ॥

ಭಾವಾರ್ಥ: ವಿಶ್ವವ್ಯಾಪಿ ಪರಮೇಶ್ವರನು ಎಳ್ಳುಕಾಳಿನಷ್ಟು ಮನೆಯನ್ನುಕಟ್ಟಿ ಅದರಲ್ಲಿ ವಾಸಿಸುತ್ತಾನೆ. ಎಳ್ಳುಕಾಳಿನಷ್ಟು ಚಿಕ್ಕದಾಗಿರುವ ಈ ಬಿಂದುವು

ಮೂರೂ ಲೋಕಗಳನ್ನೇ ತುಂಬಿಕೊಂಡಿದೆ. ಹರಿಹರರ ರೂಪಗಳು ಈ ಬಿಂದುವಿನಲ್ಲಿ ಕಾಣಿಸಿ ಅಡಗುತ್ತವೆ. ಈ ಬಿಂದುವು ಮೂರೂ ಲೋಕಗಳನ್ನು ತುಂಬಿಕೊಂಡಿದೆ ಎಂದು ತುಕಾರಾಮರು ಮತ್ತೊಮ್ಮೆ ಹೇಳುತ್ತಾರೆ.

೭

ಆನಂದು ರೇ ಆಜಿ ಆನಂದು ರೇ।
ಸಬಾಹ್ಯಅಭ್ಯಂತರೀ ಅವಘಾ ಪರಮಾನಂದು ರೇ ॥ ೧ ॥

ಏಕ ದೋನ ತೀನ ಚಾರ ಪಾಚ ಸಹಾ।
ಇತಕೇ ವಿಚಾರುನಿ ಅಂತರ ಶೋಧೋನಿಯಾ ಪಹಾ ॥ ೨ ॥

ಸಾತವಾ ರಾಮ ಆಠವಾ ವೇಳೋವೇಳಾ।
ಬಾಪರಖುಮಾದೇವಿವರು ವಿಠ್ಠಲ ಜವಳಾ ॥ ೩ ॥

ಭಾವಾರ್ಥ: ಇಂದು ಆನಂದವೇ ಆನಂದ; ಹೊರಗೆ ಒಳಗೆ ಎಲ್ಲಡೆಯಲ್ಲಿಯೂ ಪರಮಾನಂದವು ತುಂಬಿತುಳುಕುತ್ತದೆ. ಮನವು ನಿರ್ವಿಕಾರವಾಯಿತೆಂದರೆ ದೇವನು ದೂರ ಉಳಿಯನು. ಆದ್ದರಿಂದ ಅಂತರ್ನಿರೀಕ್ಷಣೆಯಿಂದ ಆರೂ ವಿಕಾರಗಳನ್ನು ದೂರಮಾಡಿರಿ. ಏಳನೆಯವನಾದ ದೇವನನ್ನು ಮೇಲಿಂದಮೇಲೆ ನೆನೆಯಿರಿ. ಆಗ ವಿಠ್ಠಲನು ಹತ್ತಿರವೇ ಇರುತ್ತಾನೆ ಎಂದು ಜ್ಞಾನೇಶ್ವರರು ಹೇಳುತ್ತಾರೆ.

೮

ಕೃಪಾಳು ಸಜ್ಜನ ತುಮ್ಹೀ ಸಂತಜನ।
ಹೇಚಿ ಕೃಪಾದಾನ ದ್ಯಾವೇ ಮಜ ॥ ೧ ॥

ಆಠವಣ ತುಮ್ಹೀ ದ್ಯಾವೀ ಪಾಂಡುರಂಗಾ।
ದೇವಾ ಮಾಝೀ ಸಾಂಗಾ ಕಾಕುಳತೀ ॥ ೨ ॥

ಅನಾಥ ಅಪರಾಧೀ ಪತಿತ ಆಗಳಾ।
ಪರಿ ಪಾಯಾವೇಗಳಾ ನಕಾ ಕರೂ ॥ ೩ ॥

ತುಕಾ ಮ್ಹಣೇ ತುಮ್ಹೀ ನಿರವಿಲ್ಯಾವರೀ।
ಮಗ ಮಜ ಹರಿ ಉಪೇಕ್ಷೀನಾ ॥ ೪ ॥

ಭಾವಾರ್ಥ: ಕೃಪಾಳುವಾದ ಸಂತಸಜ್ಜನರೇ, ಇದನ್ನೇ ನನಗೆ ಕೃಪಾದಾನವಾಗಿ ಕೊಡಿರಿ. (ಏನೆಂದರೆ) ಪಾಂಡುರಂಗನಿಗೆ ನನ್ನ ನೆನಪುಕೊಡಿರಿ. ದೇವನಿಗೆ ನನ್ನ ಕಳಕಳಿಯ ಪ್ರಾರ್ಥನೆಯನ್ನು ಅರುಹಿರಿ. ನಾನು ಅನ್ಯಾಯವನ್ನೆಸಗಿದ್ದೇನೆ. ಅನಾಥನಾಗಿ ನಿಮಗೆ ಶರಣು ಬಂದಿದ್ದೇನೆ. ನಾನು ಅಪರಾಧಿಯೂ ಅತ್ಯಂತ ಪತಿತನೂ ಆಗಿದ್ದರೂ ನನ್ನನ್ನು ನಿಮ್ಮ ಚರಣಗಳಿಂದ ದೂರಮಾಡಬೇಡಿರಿ. ನೀವು ಪಾಂಡುರಂಗನಿಗೆ ನನ್ನಬಗ್ಗೆ ಹೇಳಿದಿರಾದರೆ ದೇವನು ನನ್ನನ್ನು ಉಪೇಕ್ಷಿಸನು ಎಂದು ತುಕಾರಾಮರೆನ್ನುತ್ತಾರೆ.

೯

ನಾಮ ವಾಚೇ ಶ್ರವಣೇ ಕೀರ್ತಿ।
ಪಾವುಲೇ ಚಿತ್ತೀ ಸಮಾನ ॥ ೧ ॥
ಕಾಳ ಸಾರ್ಥಕ ಕೇಲ್ಯಾ ತ್ಯಾನೀ।
ಧರಿಲಾ ಮನೀ ವಿಠ್ಠಲ ॥ ೨ ॥
ಕೀರ್ತನಾಚಾ ಸಮಾರಂಭ।
ನಿರ್ದ್ವಂದ್ವ ಸರ್ವದಾ ॥ ೩ ॥
ನಿಳಾ ಮ್ಹಣೇ ಸ್ವರೂಪಸಿದ್ಧಿ।
ನಿತ್ಯ ಸಮಾಧಿ ಹರಿನಾಮ ॥ ೪ ॥

ಭಾವಾರ್ಥ: ಮುಖದಲ್ಲಿ ಸದಾ ನಾಮವಿದ್ದು, ಕಿವಿಯಿಂದ ದೇವರ (ಗುರುಗಳ) ಕೀರ್ತಿ ಕೇಳುತ್ತ, ಚಿತ್ತದಲ್ಲಿ ದೇವನ ಸಮಚರಣಗಳನ್ನು ಕಾಣುತ್ತಿದ್ದು, ಮನದಲ್ಲಿ ವಿಠ್ಠಲನನ್ನು ಹಿಡಿದಿರುವವನು, ಜನ್ಮಸಾರ್ಥಕ ಮಾಡಿಕೊಳ್ಳುತ್ತಾನೆ. ಹರಿಯ ನಾಮಸ್ಮರಣೆಯಿಂದ ಯಾವಾಗಲೂ ಕೀರ್ತನದಲ್ಲಿ ನಿರ್ದ್ವಂದ್ವ ಸ್ಥಿತಿಯಲ್ಲಿರುತ್ತಾನೆ. ಆತ್ಮಸ್ವರೂಪದ ಸಾಕ್ಷಾತ್ಕಾರಕ್ಕಾಗಿ ಯಾವಾಗಲೂ ಆ ಅನುಭವದಲ್ಲಿಯೇ ತಲ್ಲೀನನಾಗಿರುತ್ತಾನೆಂದು ನಿಳೋಬಾ ಹೇಳುತ್ತಾರೆ.

೧೦

ಆಮ್ಹೀ ವೈಕುಂಠವಾಸೀ। ಆಲೋ ಯಾಚಿ ಕಾರಣಾಸೀ।
ಬೋಲಿಲೇ ಜೇ ಋಷಿ। ಸಾಚ ಭಾವೇ ವರ್ತಾಯಾ ॥ ೧ ॥

ಝಾಡೂ ಸಂತಾಂಚೇ ಮಾರಗ। ಆಡರಾನೀ ಭರಲೇ ಜಗ।
ಉಚ್ಛಿಷ್ಟಾಚಾ ಭಾಗ। ಶೇಷ ಉರಲಾ ತೋ ಸೇವೂ ॥ ೨ ॥
ಅರ್ಥೇ ಲೋಪಲೀ ಪುರಾಣೇ। ನಾಶಕೇಲಾ ಶಬ್ದಜ್ಞಾನೇ।
ವಿಷಯಲೋಭೀ ಮನೇ। ಸಾಧನೇ ಬುಡವಿಲೀ ॥ ೩ ॥
ಪಿಟೂ ಭಕ್ತೀಚಾ ಡಾಂಗೋರಾ। ಕಳಿಕಾಳಾಸೀ ದರಾರಾ।
ತುಕಾ ಮ್ಹಣೇ ಕರಾ। ಜಯಜಯಕಾರ ಆನಂದೇ ॥ ೪ ॥

ಭಾವಾರ್ಥ: ನಾವು ವೈಕುಂಠವಾಸಿಗಳು, ಎಂದರೆ ದೇವನಲ್ಲಿ ಲೀನರಾದಂಥವರು. ಹಿಂದೆ ಆಗಿಹೋದ ಋಷಿಮುನಿಗಳು ಹೇಳಿದಂತೆ ಸತ್ಯಮಾರ್ಗದಲ್ಲಿ ನಡೆದು ಜನರಿಗೆ ನೈತಿಕ ಆದರ್ಶವನ್ನು ನೀಡುವದಕ್ಕಾಗಿಯೇ ನಾವು ಇಲ್ಲಿಗೆ ಬಂದಿದ್ದೇವೆ. ಸಂತಪ್ರಣೀತ ಸಾಕ್ಷಾತ್ಕಾರ ಮಾರ್ಗದಲ್ಲಿ ಜನರು ಹೋಗುತ್ತಿರುವುದಿಲ್ಲ. ಅಲ್ಲಿ ಕಲ್ಲುಮುಳ್ಳುಗಳು ಬಿದ್ದಿವೆ. ಅದನ್ನು ಉಡುಗಿ ಸ್ವಚ್ಛಮಾಡೋಣ. ಅಡ್ಡದಾರಿಯಲ್ಲಿ ಜನರು ತುಂಬಿಕೊಂಡಿದ್ದಾರೆ. ಆತ್ಮಸಾಕ್ಷಾತ್ಕಾರವನ್ನು ಪಡೆದ ಸಂತರ ಮುಖದಿಂದಬಂದ ನಾಮವನ್ನು ಸೇವಿಸೋಣ. ಅವರು ನಮಗಾಗಿ ಉಳಿಸಿದ ಭಾಗವನ್ನು ಎಂದರೆ ಉಪದೇಶವನ್ನು ಸ್ವೀಕರಿಸೋಣ. ಪುರಾಣಗಳ ನಿಜವಾದ ಅರ್ಥವು ಲುಪ್ತವಾಗಿ ಹೋಗಿದೆ. ಶಬ್ದಜ್ಞಾನವು ವಿನಾಶಕ್ಕೆ ಕಾರಣವಾಗಿದೆ. ಮನವು ವಿಷಯಲಾಲಸೆಯುಳ್ಳದ್ದಾಗಿದೆ. ಆದ್ದರಿಂದ ಶ್ರವಣ, ನಾಮಸ್ಮರಣೆ ಮೊದಲಾದ ಸಾಧನಗಳು ಮುಳುಗಿಹೋಗಿವೆ. ಭಕ್ತಿಯಡಂಗುರ ಸಾರೋಣ.

ಮಧ್ಯಾಹ್ನದ ಭಜನೆ (ಭಾಗ-೧)

ದೇವರನಾಮದ ಜಯಘೋಷ ಮಾಡೋಣ. ಅದು ಯಮನ (ಕಾಲನ) ಹೃದಯದಲ್ಲಿ ಭೀತಿಯನ್ನುಂಟುಮಾಡುವುದು; ಆನುದದಿಂದ ಜಯಜಯಕಾರ ಮಾಡುವಾ ಅಂತ ತುಕಾರಾಮರು ಹೇಳುತ್ತಾರೆ.

೧೧

ಗುರು ಪರಮಾತ್ಮಾ ಪರೇಶು।
ಹಾಚಿ ಜ್ಯಾಚಾ ದೃಢ ವಿಶ್ವಾಸೂ॥
ದೇವ ತಯಾಚಾ ಅಂಕಿಲಾ।
ಸ್ವಯೇ ತ್ಯಾಚೇ ಘರೀ ಸಂಚಲಾ॥
ಏಕಾಜನಾರ್ದನೀ ಗುರು ದೇವ।
ಏಥೇ ನಾಹೀ ಬಾ ಸಂಶಯ॥

ಭಾವಾರ್ಥ: ಗುರುವೇ ಪರಮಾತ್ಮ, ಪರದೈವವೆಂದು, ವಿಶ್ವಾಸವಿಟ್ಟವನ ಅಂಕಿತನಾಗಿರುತ್ತಾನೆ ದೇವನು. ಅಂಥ ಭಕ್ತನ ಮನೆಯಲ್ಲಿ ದೇವನು ವಾಸವಾಗಿರುತ್ತಾನೆಂಬುದರಲ್ಲಿ ಸಂಶಯವಿಲ್ಲವೆಂದು ಏಕನಾಥರು ಹೇಳುತ್ತಾರೆ.

## ಮಧ್ಯಾಹ್ನದ ಭಜನೆ (ಭಾಗ-೧)

ನಾಮ ಭಜೇ ಗುರುನಾಮ ಭಜೇ ಹರನಾಮ ಭಜೇ
ಶಿವನಾಮ ಭಜೇ ॥ ಪಲ್ಲ ॥

ಕಹೋ ಕಹೋ ಜೀ ಗುರುಭಜನಕಾ
ಕರ್ಣರಂಧ್ರ ಮೇರೇ ಸುನತಾ ಹೈ।
ನವ ದರವಾಜೇ ಬಂದ ಕಿಯೇ ತೋ
ದಶವಿಧ ನಾದ ಬಜತಾ ಹೈ ॥ ೧ ॥

ಅಜಬ ಬಜಾಯಾ ಮೌಲಿ ದೇಖೋ
ಸದಾಶಿವಕೋ ಸುನತಾ ಹೈ।
ಆದಿ ಪೂರಸೆ ಫೇರೇ ಫಿರಸೇ
ಸಹಸ್ರಾರಪರ ನಾದ ಬಜತಾ ಹೈ ॥ ೨ ॥

ಏಕ ಅಕ್ಷರಕಾ ಮಾರ್ಗ ಜಾನಿಲಾ
ದುಸರೇ ಉಸಮೇ ನ್ಯಾರಾ ಹೈ।
ದೋ ಅಕ್ಷರಕಾ ಮಾರ್ಗ ಮಿಲೇ ತೋ
ಫಿರನೇ ನ್ಯಾರಾ ಹೋತಾ ಹೈ ॥ ೩ ॥

ತೀನ ಅಕ್ಷರಕಾ ಮಾರ್ಗ ಜಾನಿಲಾ
ತೀನ ಮೂರ್ತಿಕಾ ಹೋತಾ ಹೈ।
ನಾದಬಿಂದುಕಲ ಏಕ ಬನಾ ತೋ
ದುನಿಯಾ ಡುಬಕರ ಪಿಚಡೇ ಹೈ ॥ ೪ ॥

ಚಿಂತಾ ಕರಕರ ದೇಖೋ ದಿಲಪರ
ತೀನ ಗುಣಮೇ ನ್ಯಾರಾ ಹೈ।

## ಮಧ್ಯಾಹ್ನದ ಭಜನೆ (ಭಾಗ-೧)

ಪಂಚಲಿಂಗ ಜಪ ಏಕ ಬನಾ ತೋ
ಆತ್ಮಕ ಬ್ರಹ್ಮ ಬಜತಾ ಹೈ ॥ ೫ ॥

ಶಿವಾನಗರಪರ ಶಂಕರ ಮುನಶೀ
ಸಿದ್ಧಾಸನ ಪರ ಬೈಠೇ ಹೈ।
ಮಾಯಾ ಶಂಕರಿ ತೀನ ಗುಣಮೇ
ಮದರಸ ಜಪತೋ ಪಿಚಡೇ ಹೈ ॥ ೬ ॥

ಚಿದಾನಂದಗುರು ಬ್ರಹ್ಮ ಕೃಪಾಸೇ
ಬೋಧಸಾರಮೇ ಬೋಲತ ಹೈ।
ಅಂತರಂಗಸೇ ಮಾರ್ಗ ಜಾನಿಲಾ
ಲಿಂಗಸಂಗ ಜಪ ಹೋತಾ ಹೈ ॥ ೭ ॥

ಭಾವಾರ್ಥ: ನಾಮಸ್ಮರಣೆ ಮಾಡೋಣ: ಗುರುಗಳು ಉಪದೇಶಿಸಿದ ನಾಮವನ್ನು ಸ್ಮರಿಸೋಣ. "ಹರಹರ" ನಾಮವನ್ನೂ "ಶಿವಶಿವ" ನಾಮವನ್ನೂ ಸ್ಮರಿಸೋಣ. ಗುರುಭಜನೆಯ ಗುಣಗಾನಮಾಡು. ಅದು ನನ್ನ ಕರ್ಣರಂಧ್ರದಲ್ಲಿ ಕೇಳಿಸುತ್ತದೆ. ನವದ್ವಾರಗಳನ್ನು ಮುಚ್ಚಿದಾಗ ದಶವಿಧನಾದಗಳು ಕೇಳಿಸಹತ್ತಿದವು. ಗುರುವು ಆಶ್ಚರ್ಯಕರವಾದ ವಾದ್ಯಗಳನ್ನು ಬಾರಿಸಿದನು. ಅದು ಒಳಗಿರುವ ಸದಾಶಿವನಿಗೆ ಕೇಳಿಸುತ್ತದೆ. ಮೂಲಾಧಾರದಿಂದ ಸಹಸ್ರಾರಕ್ಕೆ ತಲುಪಿದ ನಾದವು ಕೇಳಿಸುತ್ತದೆ. ಒಂದಕ್ಷರದ ಮಾರ್ಗವನ್ನು ತಿಳಿದುಕೋ. ಬೇರೆಯಾಗಿರುವದಿನ್ನೊಂದು ಇದೆ.

ಎರಡಕ್ಷರಗಳ ಮಾರ್ಗ ದೊರೆತರೆ ಅದು ಇನ್ನೂ ಬೇರೆಯದಾಗಿದೆ. ಮೂರಕ್ಷರಗಳ ಮಾರ್ಗವು ತ್ರಿಮೂರ್ತಿಗಳ ದರ್ಶನ ಮಾಡಿಸುತ್ತದೆ ಎಂದು ತಿಳಿದುಕೋ (ನಿಂಬರಗಿಮಹಾರಾಜರಿಗೆ ಬ್ರಹ್ಮ-ವಿಷ್ಣು-ಮಹೇಶ್ವರರ ಮೂರ್ತಿಗಳು ಒಂದರ ಮೇಲೊಂದು ಕಾಣಿಸುತ್ತಿದ್ದವೆಂದು ಹೇಳಲಾಗಿದೆ). ನಾದ-ಬಿಂದು-ಕಲಾ ಇವು ಮೂರೂ ಒಂದೆಡೆ ಸೇರಿದರೆ ಜಗವು ಮುಳುಗಿ ಹೋಗುವುದು. (ಅದರ ಅರಿವು ಉಳಿಯದು). ಮನದಲ್ಲಿ ವಿಚಾರಮಾಡಿ ನೋಡು. ತ್ರಿಗುಣಗಳಿಂದ ಬೇರೆಯೇಆದ ಶುದ್ಧಸತ್ವಗುಣ ಒಂದಿದೆ. ಐದೂ ಲಿಂಗಗಳು ಒಂದುಗೂಡಿದವೆಂದರೆ ಬ್ರಹ್ಮವು ಆತ್ಮನನ್ನು ತೋರಿಸುವುದು. ಈಶ್ವರನು ಕೈಲಾಸದಲ್ಲಿ ಸಿದ್ಧಾಸನದಲ್ಲಿ ಕುಳಿತು ಧ್ಯಾನಮಗ್ನನಾಗಿದ್ದಾನೆ. ತ್ರಿಗುಣಮಯೀ ಮಾಯೆಯಲ್ಲಿರುವವರಿಗೆ ಶಂಕರನು ನಾಮಜಪವನ್ನು ಹೇಳಿಕೊಡುತ್ತಾನೆ. ದೇವರಕೃಪೆಯಿಂದ ಗುರುಗಳಾದ ಚಿದಾನಂದರು ಈ ಬೋಧದಸಾರವನ್ನು ಹೇಳಿದ್ದಾರೆ. ನಿಮ್ಮ ಅಂತರಂಗದಲ್ಲಿಯೇ ಈ ಮಾರ್ಗವನ್ನು ತಿಳಿದುಕೊಳ್ಳಿರಿ. ಲಿಂಗದಸಂಗದಲ್ಲಿ ನಾಮಸ್ಮರಣೆ ನಡೆಯಹತ್ತುವುದು.

೨

ಸಹಜ ಮಾಡೋ ಮಾಡೋ ಗುರುಭಜನೀ।
ಸಾಧುಸಂತರ ಚರಣವ ಹಿಡಿನೀ ॥ ಪಲ್ಲ ॥

## ಮಧ್ಯಾಹ್ನದ ಭಜನೆ (ಭಾಗ-೧)

ತನು ಮನ ಧನವು ತನ್ನದಲ್ಲ।
ನೆನವೀನ ಬಾಯಿಗೆ ನೆಚ್ಚಿಕಿಲ್ಲ॥
ಘನ ಗುರುವಿನ ಪಾದವ ಪಿಡಿನೀ।
ಅನುಮಾನವ್ಯಾತಕೋ ಮಾಡೋ ಸ್ಮರಣೀ ॥ ೧ ॥

ಆಗ ಈಗ ಯಾವಾಗ ಸ್ಥಿರವಿಲ್ಲ।
ಸಾಗಿ ಮಾಗಿ ಪೋಗುದು ಗಳಿಗೆಲ್ಲ॥
ಭೋಗ ಭಾಗ್ಯದ ಭ್ರಮೆಯನು ಕಳೆ ನೀ।
ಯೋಗಿಯಾಗಿ ಮಾಡೋ ನೀ ಮನರಂಜನೀ ॥ ೨ ॥

ಜಾತಿಗೋತ್ರನೀತಿಗೆ ತಿಳಿಯಲಿಲ್ಲ।
ಮಾತುಮಾತಿನೊಳಗೆ ಹೋಯಿತೆಲ್ಲ॥
ಸತ್ಯಬೋಧ ಗುರುವಿನ ಪಾದವ ಪಿಡಿ ನೀ।
ಸತ್ಯ ಚಿದಾನಂದನ ಮಾಡೋ ಸ್ಮರಣೀ ॥ ೩ ॥

೩

ಪರಮಹಂಸ ಪ್ರಕಾಶಗೇ ಮಂಗಲ।
ಪರಂಜ್ಯೋತಿ ಪರಬ್ರಹ್ಮಗೇ ಮಂಗಲ ॥ ಪಲ್ಲ ॥
ನಿತ್ಯ ನಿರಂಜನ ನಿರ್ವಿಕಾರಗೇ ಮಂಗಲ।
ಸತ್ಯಸಾಧುರ ಸಹಕಾರಗೇ ಮಂಗಲ॥

ಮಿಥ್ಯಾಮಾಯಾ ಅಳಿದಾತಗೇ ಮಂಗಲ।
ಮುಕ್ತಿ ಕೊಡುವಂಥ ಕರ್ತಾಗೇ ಮಂಗಲ ॥ ೧ ॥
ಭೇದಾಭೇದ ಅಳಿದಾತಗೇ ಮಂಗಲ।
ಭೇದಕೇ ನಿಲುಕದ ಅಗಣಿತಗೇ ಮಂಗಲ॥
ಮೇದಿನಿಯೊಳಗೇ ಜಗಭರಿತಗೇ ಮಂಗಲ।
ಪಾದಿಜನರ ಸಂಹರ್ತಾಗೇ ಮಂಗಲ ॥ ೨ ॥
ಇಂದುಧರ ವಿಶ್ವನಾಥಗೇ ಮಂಗಲ।
ಬಂದು ಲೋಕಾಪುರದಲ್ಲಿ ನಿಂತಾತಗೇ ಮಂಗಲ॥
ತಂದೆ ಶ್ರಿಮಲ್ಲ ಅನಂತಗೇ ಮಂಗಲ।
ಕಂದ ಜ್ಞಾನದೇವರ ದಾತಾಗೇ ಮಂಗಲ ॥ ೩ ॥

ಳ

ಶ್ರೀಗುರುನಾಥ ಥಂದನನಾಥ।
ನಿರ್ಗುಣರೂಪ ಸದೋದಿತಶಾಂತ॥
ಶ್ರೀಗುರುಸಹಜಾನಂದಮಹೇಶ।
ನಿರ್ಮಳನಿಶ್ಚಳಶುದ್ಧಪರೇಶ॥
ಬೋಧಿತಬೋಧಪರಂಪರಬೋಧ।
ಸಚ್ಚಿತ್ಸುಖಅದ್ವೈತವಿಚಾರ॥
ಜ್ಞಾನೇಶ್ವರಗುರುಸರ್ವಭರಿತ।

## ಮಧ್ಯಾಹ್ನದ ಭಜನೆ (ಭಾಗ-೧)

ತಾರಯ ತಾರಯ ಮಹಾಗುರುನಾಥ॥
ಪ್ರೇಮಳನಿಶ್ಚಳನಿರಾಮಯರೂಪ।
ನಿರ್ಮಲ ತಾರಕಪೂರ್ಣ ಪ್ರತಾಪ॥

ಭಾವಾರ್ಥ: ಶ್ರೀ ಗುರುನಾಥನೇ, ನಾದಬ್ರಹ್ಮನೇ, ನಿರ್ಗುಣರೂಪ ಸದೋದಿತ ಶಾಂತರೂಪನೇ, ಶ್ರೀಗುರುಸಹಜಾನಂದಮಹೇಶನೇ, ನಿರ್ಮಲ, ನಿಶ್ಚಲ, ಶುದ್ಧ ಪರಮಾತ್ಮನೇ, ಪರಂಪರಬೋಧ ಉಪದೇಶವನ್ನು ಬೋಧಿಸಿದವನೇ, ಸಚ್ಚಿತ್ಸುಖಕೊಡುವ ಅದ್ವೈತವಿಚಾರವನ್ನೂ ಜ್ಞಾನೇಶ್ವರಗುರುವಿನ ಸರ್ವಉಪದೇಶವನ್ನೂ ಬೋಧಿಸಿದವನೇ, ಪ್ರೇಮಮಯನಿಶ್ಚಲನಿರಾಮಯ ರೂಪನೇ, ನನ್ನನ್ನು ಉದ್ಧರಿಸೆಂದು ಮತ್ತೆಮತ್ತೆ ಕೇಳಿಕೊಳ್ಳುತ್ತಾನೆ.

ಕಾಯೇನ ವಾಚಾ ಮನಸೇಂದ್ರಿಯೈರ್ವಾ।
ಬುದ್ಧ್ಯಾತ್ಮನಾ ವಾ ಪ್ರಕೃತಿಸ್ವಭಾವಾತ್॥
ಕರೋಮಿ ಯದ್ಯತ್ಸಕಲಂ ಪರಸ್ಮೈ।
ನಾರಾಯಣಾಯೇತಿ ಸಮರ್ಪಯಾಮಿ॥
ಅಚ್ಯುತಂ ಕೇಶವಂ ರಾಮನಾರಾಯಣಂ।
ಕೃಷ್ಣದಾಮೋದರಂ ವಾಸುದೇವಂ ಭಜೇ।
ಶ್ರೀಧರಂ ಮಾಧವಂ ಗೋಪಿಕಾವಲ್ಲಭಂ।
ಜಾನಕೀನಾಯಕಂ ರಾಮಚಂದ್ರಂ ಭಜೇ॥

ಭಾವಾರ್ಥ: ದೇಹದಿಂದಾಗಲಿ, ಮನಸ್ಸಿನಿಂದಾಗಲಿ, ಮಾತಿನಿಂದಾಗಲಿ, ಬುದ್ಧಿಯಿಂದಾಗಲಿ, ಇಂದ್ರಿಯಗಳಿಂದಾಗಲಿ, ಪ್ರಕೃತಿಗನುಗುಣವಾಗಿರುವ ಸಹಜ ಸ್ವಭಾವದಿಂದಾಗಲಿ, ಯಾವ ಕರ್ಮಗಳನ್ನು ಮಾಡುವೆನೋ ಅವೆಲ್ಲವುಗಳನ್ನು ಸರ್ವಶ್ರೇಷ್ಠನಾದ ನಾರಾಯಣನಿಗೆ ಅರ್ಪಿಸುತ್ತೇನೆ. ಅಚ್ಯುತ, ಕೇಶವ, ರಾಮನಾರಾಯಣ, ಕೃಷ್ಣದಾಮೋದರ ವಾಸುದೇವರನ್ನೂ, ಶ್ರೀಧರ ಮಾಧವ, ಗೋಪಿಕಾವಲ್ಲಭ, ಜಾನಕೀನಾಯಕ ರಾಮಚಂದ್ರನನ್ನೂ ಭಜಿಸುತ್ತೇನೆ.

೬

ಹರಿನಾರಾಯಣ ದುರಿತ ನಿವಾರಣ।
ಪರಮಾನಂದ ಸದಾಶಿವ ಶಂಕರ॥
ಭಕ್ತಜನಪ್ರಿಯ ಪಂಕಜಲೋಚನ।
ನಾರಾಯಣ ತವ ದಾಸೋಹಂ॥
ಹರಿನಾರಾಯಣ ಗುರುನಾರಾಯಣ।
ಘಡಿ ಘಡಿ ಜಪ್ಲೇ ಕರಿ ಪಾರಾಯಣ॥

(ಹೀಗೆ ಮೂರು ಸಲ)

ಭಾವಾರ್ಥ: ಹರಿನಾರಾಯಣನೇ ದುರಿತಗಳನ್ನು ನಾಶಮಾಡುವವನೇ, ಪರಮಾನಂದ ಮೂರ್ತಿಯೆನಿಸಿದ ಶಿವಶಂಕರನೇ, ಭಕ್ತಜನ ಪ್ರಿಯನೇ,

ಕಮಲಲೋಚನನೇ, ನಾರಾಯಣನೇ, ನಾನು ನಿನ್ನ ದಾಸನು; ಹೆಜ್ಜೆ ಹೆಜ್ಜೆಗೂ ಬಾಯಿಯಿಂದ "ಹರಿನಾರಾಯಣ, ಗುರುನಾರಾಯಣ" ಎಂದು ಪಾರಾಯಣ ಮಾಡುತ್ತೇನೆ.

# ಮಧ್ಯಾಹ್ನದ ಭಜನೆ (ಭಾಗ-೨)

## ಪ್ರದಕ್ಷಿಣೆ

ಧನ್ಯ ಹೋ ಪ್ರದಕ್ಷಿಣಾ ಸದ್ಗುರು ರಾಯಾಚೀ।
ಧನ್ಯ ಧನ್ಯ ಹೋ ಪ್ರದಕ್ಷಿಣಾ ಶ್ರೀಗುರುರಾಯಾಚೀ।
ಝಾಲೀ ತ್ವರಾ ಸುರವರಾ, ವಿಮಾನ ಉತರಾಯಾಚೀ ॥ ಧೃಂ ॥

ಪದೋಪದೀ ಘಡಲ್ಯಾ ಅಪಾರ ಪುಣ್ಯಾಚ್ಯಾ ರಾಶೀ।
ಸಕಳಹೀ ತೀರ್ಥೇ ಘಡಲಿ ಆಮ್ಹಾ ಆದಿಕರುನಿ ಕಾಶೀ ॥ ೧ ॥

ಕೋಟಿ ಬ್ರಹ್ಮಹತ್ಯಾ ಹರತೀ ಕರಿತಾ ದಂಡವತ।
ಲೋಟಾಂಗಣ ಘಾಲಿತಾ ಮೋಕ್ಷ ಲೋಳೇ ಪಾಯಾತ ॥ ೨ ॥

ಮೃದಂಗ ಟಾಳ ಘೋಳ ಭಕ್ತ ಭಾವಾರ್ಥೇ ಗಾತೀ।
ನಾಮಸಂಕೀರ್ತನೀ ನಿತ್ಯಾನಂದೇ ನಾಚತೀ ॥ ೩ ॥

ಗುರುಭಜನಾಚಾ ಮಹಿಮಾ ನ ಕಳೆ ನಿಗಮಾ ಆಗಮಾಸೀ।
ಅನುಭವ ಜೇ ಜಾಣತೀ ತೇ ಗುರುಪದಿಚೇ ಅಭಿಲಾಷೀ ॥ ೪ ॥

ಪ್ರದಕ್ಷಿಣಾ ಕರೂನಿ ದೇಹ ಭಾವೇ ವಾಹಿಲಾ।
ಶ್ರೀರಂಗಾತ್ಮಜ ವಿಠ್ಠಲ ಪುಢೇ ಉಭಾ ರಾಹಿಲಾ ॥ ೫ ॥

ಭಾವಾರ್ಥ: ಸದ್ಗುರುವಿಗೆ ಪ್ರದಕ್ಷಿಣೆಯನ್ನುಹಾಕಿ ಧನ್ಯರಾದೆವು. ಇಂಥ ಧನ್ಯತೆಯನ್ನು ಪಡೆಯಲಿಕ್ಕೆ ದೇವತೆಗಳೂ ವಿಮಾನದಿಂದ ಇಳಿದುಬರಲು ಆತುರರಾಗಿರುತ್ತಾರೆ. ಈ ಪ್ರದಕ್ಷಿಣೆಯಲ್ಲಿ ಹೆಜ್ಜೆಹೆಜ್ಜೆಗೂ ಅಪಾರ ಪುಣ್ಯದರಾಶಿಯು ಲಭಿಸಿತು. ಕಾಶಿಯಿಂದ ಮೊದಲು ಮಾಡಿ ಎಲ್ಲ ಕ್ಷೇತ್ರಗಳ ತೀರ್ಥಯಾತ್ರೆಯಾದಂತಾಯಿತು. ಸಾಷ್ಟಾಂಗನಮಸ್ಕಾರ ಮಾಡುವುದರಿಂದ ಕೋಟಬ್ರಹ್ಮಹತ್ಯೆಯ ಪಾಪವೂ ಕಳೆದುಹೋಗುತ್ತದೆ. ಉರುಳುಸೇವೆ ಮಾಡುವವರ ಕಾಲಿನಡಿಯಲ್ಲಿಯೇ ಮೋಕ್ಷ ಹೊರಳಾಡುತ್ತದೆ. ಭಕ್ತರು ತಾಳಮೃದಂಗಗಳ ಮೇಳದೊಂದಿಗೆ ಭಕ್ತಿಯಿಂದ ಹಾಡುತ್ತಾರೆ. ನಾಮಸಂಕೀರ್ತನೆಮಾಡಿ ನಿತ್ಯವೂ ಆನಂದದಿಂದ ಕುಣಿಯುತ್ತಾರೆ. ಗುರುಭಜನೆಯ ಮಹಿಮೆಯನ್ನು ಆಗಮನಿಗಮಗಳೂ ಅರಿಯವು. ಸಾಕ್ಷಾತ್ಕಾರದ ಅನುಭವಪಡೆದು ಅನುಭವವೇನೆಂಬುದನ್ನು ಅರಿತವರು ಗುರುಚರಣಸಾನಿಧ್ಯವನ್ನು ಬಯಸುತ್ತಾರೆ. ಭಕ್ತಿಭಾವದಿಂದ ಪ್ರದಕ್ಷಿಣೆಹಾಕಿ ತಮ್ಮ ದೇಹವನ್ನು ಸಮರ್ಪಿಸಿದಾಗ ಶ್ರೀರಂಗಾತ್ಮಜ ವಿಠ್ಠಲನು ಎದುರಿಗೆ ಬಂದುನಿಂತನು. (ಪ್ರದಕ್ಷಿಣೆಯಲ್ಲಿ ಪಂಢರಪುರದ ಯಾತ್ರೆಯಾಗುತ್ತದೆ. ದೇಹವೇ ಪಂಡರಪುರ; ಆತ್ಮನೇ ವಿಠ್ಠಲ).

## ಮಧ್ಯಾಹ್ನದ ಭಜನೆ (ಭಾಗ-೨)

೨

ಅಲಕ್ಷ್ಯ ಲಕ್ಷುನಿ ಪಾಹೇ ನಿಜವಸ್ತು। ಪರಾತ್ಪರ ಚಿನ್ಮಯ ಬ್ರಹ್ಮರೂಪ ತೇಜ ಪ್ರತ್ಯಕ್ಷ ಆಹೇ॥ ಗುರುಪದ ವಂದುನಿ ಆಧಿ ಪಾಹಿ ತೂ। ಹೃದಯಾಂತರಿ ಶೋಧುನಿ ಮನಾತೇ ಧೂರ್ತ ಕರೀ ಬೋಧುನೀ। ಕಾಮಕ್ರೋಧ ಮದಮತ್ಸರ ಅಂಗೀ। ದಂಭಾಹಂಕಾರ ಜಿರವುನೀ ದ್ವೈತಕಲ್ಪನಾ ಮಾರ ತ್ಯಾಗುನೀ। ಏಕಾಗ್ರೇಮನ ಸ್ವಸ್ಥ ಕರೋನೀ। ಬೈಸ ಪದ್ಮಾಸನೀ ಮುದ್ರಾ ಲಾವ ಆತ್ಮಭಾಷಣೀ॥ ದೃಷ್ಟಿ ಆತ ದೃಷ್ಟಿ ಸುರಂಗ। ಕರೂನಿಯಾ ಸಮದೃಷ್ಟೀ ಮಗ॥ ನಾನಾ ತರ್ಹೇಚೇ ರಂಗ ಸುರಂಗ। ರಕ್ತ ಶ್ವೇತವತ ಆಹೇ ಪುಢೇ ನೀಲವರ್ಣ ತೇಜ ಜಾಣಾವೇ ॥ ೧ ॥ ನೀಲವರ್ಣ ತೇ ಬಿಂಬಾಕಾಶೀ। ಚೈತನ್ಯಾಚೇ ಮೂಸ ತ್ಯಾಮಧ್ಯೇ ವಸ್ತು ಜಡಲೀ ಆಸೇ॥ ತ್ರಿಕುಟ ಭೇದುನೀ ಉಲಟ ಜಾತಾ। ಮೀನ ಮಾರ್ಗೇ ಧಸೇ ರೂಪ ಅರೂಪ ಹೋವೂನೀ ಪ್ರವೇಶ॥ ಉನ್ಮನಹೋವೂನಿಯಾ ಬ್ರಹ್ಮರಂಧ್ರೀ। ಸಮಾಧಿ ಲಾವುನಿ ಬಸೇ ತೇಥೇ ಕಾಳ ಕದಾ ನಾ ಧಸೇ॥ ಸಿದ್ಧ ಪುರುಷ ತೋ ಯೋಗ ಸಾಧುನೀ। ತಾಪಾ ಸ್ತವಿತೋ ಕರೂನ ಹರಣ। ಆಪುಲಾ ಆಪಣ ರಾಹೇ ನಿಮಗ್ನ। ತ್ಯಾಲಾಚಿ ಪ್ರಾಪ್ತಿ ಹೋಯ ಚರಾಚರ ಅವಘೇಚಿ ಬ್ರಹ್ಮ ಆಹೇ ॥ ೨ ॥ ಸದ್ಗುರುಕೃಪಾ ಜಖಮ ಜಿವ್ಹಾರೀ। ಜ್ಯಾಲಾ ಘಾವ ಲಾಗೇಲ ತೋಚಿ ಘಾಯಾಳಗತೀ ಘುಮತೋ॥ ಬೀಜಮಂತ್ರ ಹಾ ಜಪ ಗಾಯತ್ರೀ॥ ಅಷ್ಟೌಪ್ರಹರ ಯೋಜತೋ ಸಾಧನ ಘಡಿ ಪಳ ಘಡಿ ಸಾಧಿತೋ॥

ಅಹಂಭಾವೇ ಮೀಪಣ ತನಧನ। ಗುರುಚರಣೀ ಅರ್ಪಿತೋ ತೋ ಹಾ ಮೂಳ ಪಿತ್ಯಾ ಇಚ್ಛಿತೋ। ಅಖಂಡ ತನ್ಮಯ ತ್ಯಾತ ಲುಬ್ಧುನೀ। ನಿಜವಸ್ತು ಲಕ್ಷಿತೋ ಲೋಚನೀ। ನಿರಪೇಕ್ಷ ತೋ ನಿರ್ಮಳ ಪ್ರಾಣೀ। ಜಗಾತ ವೇಡಾ ರಾಹೇ ಅಂತರೀ ಜ್ಞಾನಬೋಧರಸ ಪಿಯೇ ॥ ೩ ॥ ಸದ್ಗುರುಕೃಪಾ ಉತ್ತಮ ಜ್ಯಾಸೀ। ಸಹಜ ಹಾತಾಸೀ ಆಲೀ ತ್ಯಾಲಾ ನಿಜವಸ್ತು ಲಾಧಲೀ॥ ಪಾಹತಾ ಪಾಹತಾ ಆತ್ಮಜ್ಯೋತ ಹೀ। ವೈರಾಗ್ಯೇ ಪಾಜಳಲೀ ಚಿನ್ಮಯ ವಸ್ತು ಝುಗಮಗಲೀ॥ ಶಾಹಾಲಿಂಗ ಸಂತ ಪ್ರಮಾಣ। ಧನ್ಯ ಗುರುಮಾವುಲೀ ಆನಂದೇ ಹರಿವರ ಕೃಪಾ ಕೇಲೀ। ಕವನಕಟಾಕ್ಷೇ ಕರಿ ಸಿದ್ಧಾಂತ। ಗಣಪತಿ ಭೀಮಸೇನ ಗಾತೋ ಸಭೇತ। ಗುರುಪುತ್ರ ತೋ ಜ್ಞಾನವಂತ। ಐಕುನಿ ತಲ್ಲಿನ ಹೋಯೇ ಲುಂಗರಾ ವ್ಯರ್ಥ ಚಾವಟಿ ರಾಹೇ ॥ ೪ ॥

**ಭಾವಾರ್ಥ:** ನಾಮಸಾಧನೆ ಮಾಡದೆ ಇದ್ದವರಿಗೆ ಯಾವುದು ಕಣ್ಣಿಗೆ ಕಾಣುವುದಿಲ್ಲವೋ, ಸಾಧನೆ ಮಾಡುವುದರಿಂದ ಯಾವುದು ಕಾಣುವುದೋ, ಅಂಥ ನಿಜವಸ್ತುವನ್ನು ಎಂದರೆ ಪರಬ್ರಹ್ಮನನ್ನು ನೋಡು. ಹೀಗೆ ನೋಡಿದಾಗ ಅನುಭವಕ್ಕೆ ಬರುವ, ಚಿನ್ಮಯರೂಪ ಬ್ರಹ್ಮವು ಪ್ರಕಾಶಮಯವು ಎಂದು ತಿಳಿಯುವದು. ಗುರುಚರಣಕ್ಕೆ ವಂದಿಸಿ, ಹೃದಯಾಂತರಾಳದಲ್ಲಿ ಶೋಧಿಸು. ಸದಾ ದಕ್ಷನಾಗಿರುವಂತೆ ಮನಸ್ಸಿಗೆ ಬೋಧಿಸು. ಕಾಮ-ಕ್ರೋಧ, ಮದ-ಮತ್ಸರ, ದಂಭ-ಅಹಂಕಾರಗಳನ್ನು ಬಿಡು. ದ್ವೈತಕಲ್ಪನೆಯನ್ನು ಮನಸ್ಸಿನಿಂದ ದೂರಮಾಡು. ಏಕಾಗ್ರಚಿತ್ತದಿಂದ ಮನಸ್ಸನ್ನು ಸ್ಥಿರಗೊಳಿಸು.

## ಮಧ್ಯಾಹ್ನದ ಭಜನೆ (ಭಾಗ-೨)

ಪದ್ಮಾಸನದಲ್ಲಿ ಕುಳಿತು ಆತ್ಮನೊಡನೆ ಮಾತನಾಡು. ಹೀಗೆ ಮನಸ್ಸು ಅಂತರ್ಮುಖವಾದಾಗ ಬಗೆಬಗೆಯ ಬಣ್ಣಗಳು ಕಾಣಬಹುದು. ಅವು ಕೆಂಪು, ಬಿಳಿ, ನೀಲವರ್ಣದ ತೇಜವು ಎಂದು ತಿಳಿ. ನೀಲವರ್ಣದ ಬಿಂಬಾಕಾಶದಲ್ಲಿ ಕಾಂಬುವ ನೀಲವರ್ಣದ ಚುಕ್ಕಿಯೇ ಚೈತನ್ಯಮಯ ಮೂಸವು (ಲೋಹ ಕರಗಿಸುವ ಬಟ್ಟಲು). ಅದರಲ್ಲಿಯೇ ವಸ್ತುವು ತುಂಬಿರುವುದು. ಬ್ರಹ್ಮರಂಧ್ರದಿಂದ ಪ್ರಾಣವು ಈಶ್ವರೋನ್ಮುಖವಾಗಿ ಮೇಲಕ್ಕೆ ತ್ರಿಕೂಟವನ್ನು ಭೇದಿಸಿ ಹೋಗುವಾಗ, ಮೀನವು ಪ್ರವಾಹದ ವಿರುದ್ಧ ಹೋಗುವಂತೆ ಕಷ್ಟವಾಗುತ್ತದೆ. ಆಗ ರೂಪವು ನಾಶವಾಗಿ ಅರೂಪವಾಗುತ್ತದೆ. ಉನ್ಮನಿಸ್ಥಿತಿಯಲ್ಲಿ ಬ್ರಹ್ಮರಂಧ್ರದಲ್ಲಿ ಸಮಾಧಿ ಹಚ್ಚಿಕುಳಿತರೆ, ಮಾನವನು ದೇವನಲ್ಲಿ ಏಕರೂಪನಾಗುವನು. ಮೃತ್ಯುವು ಅವನ ಹತ್ತಿರ ಬರಲು ಅಂಜುವುದು. ಹೀಗೆ ರಾಜಯೋಗವನ್ನು ಸಾಧಿಸಿ, ತ್ರಿವಿಧ ತಾಪಗಳಿಂದ ರಹಿತವಾದ ಶ್ರೇಷ್ಠಸ್ಥಿತಿಯನ್ನು ಮುಟ್ಟುವನು. ಚರಾಚರವೆಲ್ಲವೂ ಬ್ರಹ್ಮಮಯವಾಗಿದೆಯೆಂಬ ಅರಿವಾಗುವುದು. ಯಾರಿಗೆ ಪ್ರಪಂಚದ ಯಾತನೆಯ ಪೆಟ್ಟಿನಿಂದ ಸುತ್ತಿಸುತ್ತಿ ಹೊರಳಾಡಬೇಕಾಗುತ್ತದೆಯೋ, ಅಂಥವರಿಗೆ ಸದ್ಗುರುಕೃಪೆಯಿಂದ ನೋವಿನ ನಿವಾರಣೆಯಾಗುವದು. ಎಂಟೂ ಪ್ರಹರಗಳಲ್ಲಿ ಗಾಯತ್ರೀಮಂತ್ರವನ್ನು ಜಪಿಸುವನು. ಕ್ಷಣಕ್ಷಣವೂ ಬಿಡದೆ ಅಖಂಡ ನಾಮಸ್ಮರಣೆಯನ್ನು ಮಾಡುವನು. ಅಹಂಕಾರವನ್ನೂ, ತನುಮನಧನವನ್ನೂ, ತನ್ನನ್ನೂ, ಗುರುಗಳಿಗೆ ಸಮರ್ಪಿಸಿಕೊಳ್ಳುವನು.

ಮೂಲಮನೆಯಾದ ಪರಮೇಶ್ವರನ ಕಡೆ ಹೋಗಲು ಬಯಸುವನು. ನಿರಪೇಕ್ಷಿಯಾದ, ನಿರ್ಮಲನಾದ ಅವನು ಪ್ರಪಂಚದ ಕಣ್ಣಿಗೆ ಹುಚ್ಚನಂತೆ ಕಾಣುತ್ತಾನೆ. ಆದರೆ ಅಂತರ್ಯದಲ್ಲಿ ಜ್ಞಾನಬೋಧಾಮೃತವನ್ನು ಸವಿಯುತ್ತಾನೆ. ಯಾವನಿಗೆ ಸದ್ಗುರುವಿನಕೃಪೆಯು ಉತ್ತಮವಾಗಿ, ಸಹಜವಾಗಿ ಆಗಿರುವುದೋ ಅವನು ಸಾಕ್ಷಾತ್ಕಾರ ಪಡೆದಿರುತ್ತಾನೆ. ನೋಡನೋಡುತ್ತಲೇ ವೈರಾಗ್ಯದ ಬಲದಿಂದ ಅವನೆದುರಿಗೆ ಆತ್ಮಜ್ಯೋತಿಯು ಬೆಳಗಿತು. ಶಹಾಲಿಂಗರಂಥ ಸಂತರು ಪ್ರೇಮಾದರದಿಂದ ಗುರುಗಳ ಸ್ತವನಮಾಡಿ ಧನ್ಯರಾದರೆಂದು ಗಣಪತಿಭೀಮಸೇನರು ಹೇಳುತ್ತಾರೆ. ಆದರಿಂದ ಜ್ಞಾನಿಗಳು ಹರ್ಷಿತರಾಗುತ್ತಾರೆ. ಆದರೆ ವಿಷಯಾಸಕ್ತರು ಕುಚೇಷ್ಟೆಯನ್ನೇ ಮಾಡುತ್ತಾರೆ.

೩

ಕಾಯ ಸಾಂಗೂ ಯಾ ಸಮರ್ಥಾಂಚೀ ಥೋರೀ।
ಭಜಕಾಸೀ ಆಪಣಾಐಸಾ ಕರೀ ॥ ಧೃಂ ॥
ಸದ್ಗುರುರಾಜಾ ತನ್ಮಯ ಛತ್ರಪತಿ।
ಮಜ ಕರುನೀ ಸೇವೇ ಅಧಿಪತಿ।
ಸೋऽಹಂ ಶಬ್ದ ಸನದ ದೇವುನಿ ಹಾತೀ।
ಶಿರಿ ಹಾತ ಠೇವಿಲಾ ಮುದ್ರಾಂಕಿತ ॥ ೧ ॥
ಅಹಂಕಾರಾಚೀ ದುರ್ಗ ಆವರೀಲೇ।
ತಯಾವರೀ ಮಜಲಾ ಪಾಠವೀಲೇ।

## ಮಧ್ಯಾಹ್ನದ ಭಜನೆ (ಭಾಗ-೨)

ಪೂರ್ವದ್ವಾರೇ ತ್ರಿಕುಟ ದೇಖಿಯೇಲೇ।
ರಜೋದೃಷ್ಟೀ ಬ್ರಹ್ಮ್ಯಾಸೀ ಜಂಕಿಯೇಲೇ ॥ ೨ ॥

ತೇಥುನಿ ಊರ್ಧ್ವಪಂಥೇ ಪಶ್ಚಿಮಮಾರ್ಗ ಪಾಹೇ।
ಸತ್ವಗುಣೇ ಶ್ರೀಹಾಟೇ ವಿಷ್ಣು ಆಹೇ।
ತಯಾ ವಳಂಘೋನೀ ವರುತಾ ಜಾಯೇ।
ತಮೋಗೋಲ್ಹಾಟೇ ರುದ್ರ ದಿಸತಾಹೇ ॥ ೩ ॥

ಜ್ಞಾನಶಸ್ತ್ರ ಘೇವೂನಿಯಾ ಹಾತೀ।
ಕೇಲೀ ತಮೋ-ಅಜ್ಞಾನಾಚೀ ಶಾಂತೀ।
ಪುಣ್ಯಗಿರಿ ತೇಥುನಿ ದೇಖೇ ಪುಥತೀ।
ಶುದ್ಧ ಅಧಿಷ್ಠಾನೀ ವಿಶ್ವಮೂರ್ತೀ ॥ ೪ ॥

ಉಭಾ ರಾಹೋನಿ ತಯಾ ಗಿರಿವರೀ।
ದೇಖೆ ಭ್ರಮರಗುಂಫಾ ಗಡದ ಓವರೀ।
ಔಟಪೀಠಾವರುತೀ ಶೋಭೇ ಬರೀ।
ಪರಮಾನಂದ ಆಹೇ ತಯಾ ಘರೀ ॥ ೫ ॥

ಬೋಧಬಳಿಯಾ ಪ್ರವೇಶಲೋ ತೇಥ।
ಅಹಂಕಾರ ಝಾಲಾ ವಾತಾಹತ।
ವಿಜಯದುಂದುಭೀ ವಾಜತಿ ಅನುಹತ।
ಬ್ರಹ್ಮದೃಷ್ಟೀತ ಪಾವಲೋ ನಿಜವಿಶ್ರಾಂತ ॥ ೬ ॥

ಭಕ್ತನಿಶಾಣ ಚಢವಿಲೇ ವರೀ।
ಜೇ ಹಾ ಬ್ರಹ್ಮ ಭಾಸತ ಚರಾಚರೀ।
ರಾಮನಾಮೇ ಗರ್ಜತೀ ಜಯಜಯಕಾರೀ।
ದಾಸಪಣ ನ ಉರೇ ತೇಥೇ ಉರೀ ॥ ೭ ॥

**ಭಾವಾರ್ಥ:** ಈ ಸಮರ್ಥರ ಮಹಿಮೆಯನ್ನು ಎಷ್ಟೆಂದು ವರ್ಣಿಸಲಿ? ಭಕ್ತರನ್ನು ಸದ್ಗುರುವು ತನ್ನಂತೇ ಮಾಡಿದನು. ತಾನು ಅರಸನಾಗಿ ನನ್ನನ್ನು ಸೇನಾಪತಿಯನ್ನಾಗಿ ಮಾಡಿಕೊಂಡು, ಸೋऽಹಂ ಶಬ್ದದ ಸನದನ್ನು ಕೊಟ್ಟು, ತನ್ನ ಕೃಪಾಹಸ್ತವನ್ನು ನನ್ನ ತಲೆಯ ಮೇಲೆ ಇರಿಸುತ್ತಾನೆ. ಅಹಂಕಾರ ಎಂಬ ಕೋಟೆಯನ್ನು ಗೆದ್ದು, ಭ್ರೂಮಧ್ಯದಲ್ಲಿ ದೃಷ್ಟಿಯನ್ನಿಟ್ಟು ಸ್ಥಿರಗೊಳಿಸಿ ನಾಮಸ್ಮರಣೆ ಮಾಡುವುದರಿಂದ, ಈ ಕಾರ್ಯದ ಆರಂಭವಾಗುವುದು. ಮೊದಲು ರಜೋಗುಣ ಕಡಿಮೆಯಾಗುತ್ತ ಹೋಗಿ ಸುಷುಮ್ನಿಯಿಂದ ಬ್ರಹ್ಮರಂಧ್ರದ ಕಡೆಗೆ ಪ್ರಾಣಶಕ್ತಿ ಹೊರಟಾಗ ಸತ್ವಗುಣ ವೃದ್ಧಿಯಾಗುತ್ತದೆ. ಇದೇ ವಿಷ್ಣುವಿನ ಸಾನಿಧ್ಯ. ಹಾಗೇ ಮುಂದೆ ಹೋಗಿ ತಮೋಗುಣ ಗೆಲ್ಲಬೇಕಾಗುವುದು. ತಮೋಗುಣವೆಂದರೆ ಜಡದೇಹದ ಹಸಿವೆ, ನೀರಡಿಕೆ, ನಿದ್ರೆ ಮುಂತಾದವುಗಳು. ಇದನ್ನು ಗೆಲ್ಲುವುದು ಇನ್ನೂ ಕಠಿಣ. ಏಕೆಂದರೆ ಅವು ದೇಹಕ್ಕೆ ಅಂಟಿಕೊಂಡಿರುತ್ತವೆ. ದೇಹಬುದ್ಧಿ ಕಡಿಮೆಯಾಗುತ್ತ ಆಗುತ್ತ, ಸಂಪೂರ್ಣ ನಾಶವಾದಾಗ ಕೊನೆಯಲ್ಲಿ ಗೆಲ್ಲಬಹುದು. ಅಲ್ಲಿ ರುದ್ರನು ಗೋಚರಿಸುವನು. ಜ್ಞಾನವೆಂಬ ಶಸ್ತ್ರದಿಂದ ಅಜ್ಞಾನ ಮತ್ತು ತಮೋಗುಣ

ನಷ್ಟವಾದ ನಂತರ ಸ್ವರೂಪಸಾಕ್ಷಾತ್ಕಾರವು ಪೂರ್ಣವಾಗುವುದು. ಇವೆರಡೂ ಮಾರ್ಗಗಳು ಪರಸ್ಪರ ಪೂರಕವಾಗಿರುವವು. 'ಔಟಪೀಟ' 'ಭ್ರಮರಗುಂಫಾ' ಇವು ಸಿದ್ಧಯೋಗದಲ್ಲಿಯ ಶಬ್ದಗಳು. ಪರಮಾನಂದದ ಅವಸ್ಥೆಯು ಸಾಧಕನಿಗೆ ಲಭಿಸಿದಾಗ, ತಿಳಿದೋ, ತಿಳಿಯದೆಯೋ ಅವನು ಮೆದುಳಿನೊಳಗಿನ "ಔಟಪೀಟ" "ಭ್ರಮರಗುಂಫಾ" ಕೇಂದ್ರದಲ್ಲಿ ಪ್ರವೇಶಿಸುತ್ತಾನೆ. ಸಾಕ್ಷಾತ್ಕಾರದಿಂದ ದೊರೆತ ಪರಮಾನಂದದಿಂದ ದೇಹಬುದ್ಧಿ ಸಂಪೂರ್ಣ ನಷ್ಟವಾಗಿ ಹೋಗುತ್ತದೆ. ಆಗ ದುಂದುಭಿ ಮೊಳಗಿದ ನಾದವು ಕೇಳಬರುತ್ತದೆ. ಇಲ್ಲಿ ಬ್ರಹ್ಮನಲ್ಲಿ ನಿಜವಾದ ವಿಶ್ರಾಂತಿಯು ಸಿಗುವುದು. ಇದೇ ಬ್ರಹ್ಮದರ್ಶನದ ಪೂರ್ಣವಿರಾಮ. ಇದಕ್ಕೆ ಪರಾ-ಅಭೇದ ಭಕ್ತಿ ಎನ್ನುವರು. ಈ ವಿಜಯಪತಾಕೆ ಏರಿದಾಗ ಆಗುವ ಆನಂದದ ಭರದಲ್ಲಿ ರಾಮನಾಮದ ಗರ್ಜನೆಯು ನಡೆಯುವುದು. ಆಗ ದಾಸತ್ವವು ಹೋಗಿ ದೇವತ್ವವು ಪ್ರಾಪ್ತವಾಯಿತು.

೪

ಸಖಯಾ ರಾಮಾ ವಿಶ್ರಾಂತಿ ತುಝೀ ನಾಮೀ।  
ಮ್ಹಣವುನಿ ಮಜಲಾ ನೇ ತ್ವರೇ ನಿಜಸುಖಧಾಮೀ ॥ ಧೃ ॥  
ಅವಚಟ ಸುಕೃತೇ ನರದೇಹಾ ಝಾಲೀ ಭೇಟೀ।  
ಪಶು-ಸುತ-ಜಾಯಾ-ಧನ-ಧಾಮೀ ಪ್ರೀತಿ ಮೋಠೀ।  
ಮಾಝೀ ಮಾಝೀ ಮ್ಹಣುನಿ ಮ್ಯಾ ಧರಿಲೀ ಪೋಟೀ।  
ಯಾಂಚ್ಯಾ ಸಂಗೇ ಭೋಗಿಲ್ಯಾ ದುಃಖ ಕೋಟೀ ॥ ೧ ॥

ಸೋಡುನಿ ಸ್ವಹಿತಾ ಧಾವಲೋ ದಿಶಾ ದಾಹೀ।
ಶವವತ ಝಾಲೋ ಮಾಗುತಾ ಕೌತುಕ ಪಾಹೀ।
ಪರೀ ಖಳಜನ ಹೇ ನೇದಿತೀ ಕವಡೀ ತೇ ಹೀ।
ಪರಿ ಹೀ ಆಶಾ ಪಾಪಿಣೀ ಲಾಜತ ನಾಹೀ ॥ ೨ ॥

ಜವವರಿ ದೃಢತಾ ತವವರೀ ಯಾ ತನುಚೀ ಪ್ರೀತೀ।
ಜರ್ಜರ ಝಾಲಿಯಾ ಅವಘೇಚಿ ನಿಂದಕ ಹೋತೀ।
ಯಾಚೀ ದುಃಖೇ ತುಜಲಾ ಮೀ ಸಾಂಗೂ ಕಿತೀ।
ಮ್ಹಣವುನಿ ಯೇತೋ ಶ್ರೀಧರ ಕಾಕುಳತೀ ॥ ೩ ॥

ಭಾವಾರ್ಥ: ಸಖನಾದ ರಾಮಾ, ನಿನ್ನ ನಾಮಸ್ಮರಣೆಯಲ್ಲಿಯೇ ನನಗೆ ನಿಜವಾದ ವಿಶ್ರಾಂತಿ. ಆದ್ದರಿಂದ ಶೀಘ್ರವಾಗಿ ನನ್ನನ್ನು ನಿಜಸುಖಧಾಮಕ್ಕೆ ಕರೆದೊಯ್ಯಬೇಕು. ಸುಕೃತದಿಂದ ಅಕಸ್ಮಾತ್ತಾಗಿ ನನಗೆ ನರದೇಹವು ಲಭಿಸಿತು. ಆದರೆ ನನ್ನ ಮಗ-ಮನೆ-ಹೆಂಡತಿ-ನನ್ನ ಪಶು, ನನ್ನ ಧನ, ಎಂದು ಅತಿಯಾದ ಮಮತೆಯಿಂದ ಸಂಸಾರ ಮಾಡಿ ದುಃಖವನ್ನು ಅನುಭವಿಸಿದೆನು. ಸ್ವಹಿತವನ್ನು ಕಡೆಗಣಿಸಿ ಹತ್ತು ದಿಕ್ಕಿನಲ್ಲಿ ಶವದಂತೆ ಓಡಾಡಿದೆನು. ದುಃಖ, ಆಪತ್ತು ಬಂದಾಗ ಆಪ್ತೇಷ್ಟರು ಒಂದು ಕವಡಿಯನ್ನು ಕೂಡ ಕೊಡುವುದಿಲ್ಲ. ಇದನ್ನು ತಿಳಿದೂತಿಳಿದೂ ಇನ್ನೂ ಆಸೆಯನ್ನು ಬಿಟ್ಟಿಲ್ಲ. ಮೈಯಲ್ಲಿ ಶಕ್ತಿ ಇರುವವರೆಗೆ ದೇಹದ ಪ್ರೀತಿ ಹೋಗುವುದಿಲ್ಲ. ದೇಹವು ದುರ್ಬಲವಾಗಿ ಜನರು

## ಮಧ್ಯಾಹ್ನದ ಭಜನೆ (ಭಾಗ-೨)

ಹೀಯಾಳಿಸಿದಾಗ ದುಃಖದ ಅನುಭವವಾಗುವುದು. ಅದನ್ನು ಎಷ್ಟೆಂದು ಹೇಳಲಿ? ಎಂದು ಶ್ರೀಧರರು ಕಳಕಳಿಯಿಂದ ಕೇಳುತ್ತಾರೆ.

೫

ಕಾಯ ಸಾಂಗೂ ಮೀ ಯಾ ಸಂತಾಂಚೇ ಉಪಕಾರ।
ಮಜ ನಿರಂತರ ಜಾಗವಿತೀ ॥ ೧ ॥

ಸಹಜ ಬೋಲಣೇ ಹಿತ ಉಪದೇಶ।
ಕರೂನಿ ಸಾಯಾಸ ಶಿಕವೀತೀ ॥ ೨ ॥

ಕಾಯ ದ್ಯಾವೇ ತ್ಯಾಸೀ ವ್ಹಾವೇ ಉತರಾಯೀ।
ಠೇವಿತಾ ಹಾ ಪಾಯೀ ಜೀವ ಥೋಡಾ ॥ ೩ ॥

ತುಕಾ ಮ್ಹಣೇ ವತ್ಸ ಧೇನುವೇಚ್ಯಾ ಚಿತ್ತೀ।
ತೈಸೇ ಮಜ ಯೇಥೇ ಸಾಂಭಾಳೀತೀ ॥ ೪ ॥

ಭಾವಾರ್ಥ: ಯಾವಾಗಲೂ ನನ್ನನ್ನು ಎಚ್ಚರಿಸುತ್ತಿರುವ ಈ ಸಂತರ ಉಪಕಾರವನ್ನು ಎಷ್ಟು ಹೇಳಲಿ? ಅವರು ತಮ್ಮ ಬ್ರಹ್ಮೈಕ್ಯಪದವಿಯ ಜೀವನದಲ್ಲಿ ನುಡಿಯುವ ಸಹಜ ನುಡಿಯೂ ಉಪದೇಶಪರವಾಗಿರುತ್ತದೆ. ಅವರ ಋಣವನ್ನು ಹೇಗೆ ತೀರಿಸುವುದು? ನಮ್ಮನ್ನು ಅವರ ಚರಣದಲ್ಲಿ ಅರ್ಪಿಸಿಕೊಂಡರೂ ಸಹ ಕಡಿಮೆಯೇ ಎಂದೆನಿಸುವುದು. ತುಕಾರಾಮರು

ಹೇಳುವುದೇನೆಂದರೆ, ಆಕಳು ತನ್ನ ಕರುವನ್ನು ವಾತ್ಸಲ್ಯದಿಂದ ರಕ್ಷಿಸುವಂತೆ ನಮ್ಮನ್ನು ಸಂತರು ಪ್ರೀತಿಯಿಂದ ಸಲಹುತ್ತಾರೆ.

೬

ಝಾಲೀ ಸಂಧ್ಯಾ ಸಂದೇಹ ಮಾಝಾ ಗೇಲಾ।
ಆತ್ಮಾರಾಮ ಹೃದಯೀ ಸಹಜೀ ಆಲಾ ॥ ಧೃ ॥

ಗುರುಕೃಪಾ ನಿರ್ಮಳ ಭಾಗೀರಥೀ।
ಶಾಂತಿ ಕ್ಷಮಾ ಯಮುನಾ ಸರಸ್ವತೀ।
ಐಶೀ ಪದೇ ಏಕತ್ರ ಜೇಥೇ ಹೋತೀ।
ಸ್ವಾನುಭವ ಸ್ನಾನ ಹೇ ಮುಕ್ತಸ್ಥಿತೀ ॥ ೧ ॥

ಸದ್ಬುದ್ಧೀಚೇ ಘಾಲೋನಿ ದರ್ಭಾಸನ।
ವರೀ ಸದ್ಗುರುಚೀ ದಯಾ ಪರಿಪೂರ್ಣ।
ಶಮ ದಮ ಅಂಗೀ ವಿಭೂತಿಲೇಪನ।
ವಾಚೇ ಉಚ್ಚಾರೀ ಕೇಶವನಾರಾಯಣ ॥ ೨ ॥

ಬೋಧಪುತ್ರ ನಿರ್ಮಾಣ ಝಾಲಾ ಜೇವ್ಹಾ।
ಮಮತಾ ಮ್ಹಾತಾರೀ ಮರೋನಿ ಗೇಲೀ ತೇವ್ಹಾ।
ಭಕ್ತಿ ಬಹೀಣ ಆಲೀ ಅಸೇ ಗಾವಾ।
ಆತಾ ಸಂಧ್ಯಾ ಕರೂ ಮೀ ಕೈಶೀ ಕೇವ್ಹಾ ॥ ೩ ॥

## ಮಧ್ಯಾಹ್ನದ ಭಜನೆ (ಭಾಗ-೨)

ಸಹಜ ಕರ್ಮೇ ಝಾಲೀ ಬ್ರಹ್ಮಾರ್ಪಣ।
ಐಸೇ ಐಕೋನೀ ನಿವತೀ ಸಾಧುಜನ।
ಜನ ನೋಹೇ ಅವಘಾಚಿ ಜನಾರ್ದನ।
ಏಕಾಜನಾರ್ದನೀ ಲಾಧಲೀ ನಿಜಖೂಣ ॥ ೪ ॥

ಇಲ್ಲಿ ನಾಮಸ್ಮರಣೆಯ ಸಾಧನೆಯನ್ನೇ "ಸಂಧ್ಯಾ" ಎಂದು ಸಂಬೋಧಿಸಿದ್ದಾರೆ.

ಭಾವಾರ್ಥ: ಈಗ ಸಂಜೆಯಾಯಿತು. ಆದರಿಂದ ನನ್ನ ಸಂದೇಹಗಳು ಮಾಯವಾದವು. ಹೃದಯದಲ್ಲಿ ಆತ್ಮಾರಾಮನು ನೆಲೆಸಿದ ಅನುಭವವೂ ಆಯಿತು. ನಿರ್ಮಲವಾದ ಭಾಗೀರಥಿಯು ಎಂದರೆ ಗುರುಕೃಪೆ. ಯಮುನಾ, ಸರಸ್ವತಿ ಎಂದರೆ ಶಾಂತಿ-ಕ್ಷಮೆ. ಇವೆಲ್ಲ ಒಂದೆಡೆ ಸೇರಿದಾಗ ಆಗುವ ಸ್ವಾನುಭವದ ಸ್ನಾನ ಎಂದರೆ ಮುಕ್ತಸ್ಥಿತಿಯು. ಸದ್ಬುದ್ಧಿಯ ದರ್ಭಾಸನ ಹಾಕಿ, ಸದ್ಗುರುವಿನ ಕೃಪೆ ಪಡೆದು, ಮೈಗೆ ಶಮ-ದಮದ ವಿಭೂತಿ ಲೇಪನ ಮಾಡಿಕೊಂಡು, ಮುಖದಿಂದ ಕೇಶವ ನಾರಾಯಣ ಉಚ್ಚರಿಸಿದರೆ ಸಾಕ್ಷಾತ್ಕಾರದ ಅನುಭವವಾಗುವುದು. ಜ್ಞಾನವೆಂಬ ಸತ್ಪುತ್ರನ ಜನನವಾಗಿ, ಮಾಯೆ ಎಂಬ ಮುದುಕಿಯ ಮರಣವಾದಾಗ, ಭಕ್ತಿ ಎಂಬ ಸೋದರಿ ಊರಿಗೆ ಬಂದ ಬಳಿಕ, ನಾಮಸಾಧನೆಯ ಅವಶ್ಯಕತೆ ಎಲ್ಲಿದೆ? ಎಂದರೆ ನಿತ್ಯಕರ್ಮ ಮಾಡುವಂತಿಲ್ಲ, ಸಾಧಕನು ಕರ್ಮ-ಸನ್ಯಾಸ ತೆಗೆದುಕೊಳ್ಳುತ್ತಾನೆ, ಎಂದರೆ ನಿಷ್ಕ್ರಿಯನಾಗುತ್ತಾನೆ. ಆದರೆ ಕಾರ್ಯಗಳು ಕರ್ತೃತ್ವ, ಅಹಂಕಾರ ಮತ್ತು ವಾಸನಾರಹಿತವಾಗಿದ್ದು, ಬ್ರಹ್ಮನಿಗೇ ಸಮರ್ಪಣೆ ಮಾಡಿದಂಥ

ವಾಗಿರುತ್ತವೆ. ಸಾಧಕನ ಇಂಥ ಶ್ರೇಷ್ಠ ಸ್ಥಿತಿಯನ್ನು ನೋಡಿ ಗುರುವಿಗೆ ಮಹದಾನಂದವಾಗುತ್ತದೆ. ಬ್ರಹ್ಮವೇ ಸತ್ಯ ಎಂಬ ದೃಷ್ಟಾಂತವನ್ನು ಅವನಿಗೆ ಸಾಧಕನ ಮುಖಾಂತರ ಮತ್ತೊಮ್ಮೆ ನೋಡಿ ಮನಗಾಣಲು ಸಿಗುತ್ತದೆ. ಜಗತ್ತು ಮಾಯವಾಗಿ, ಜನಾರ್ದನನೇ ಎಲ್ಲ ಕಡೆ ಇರುವನೆಂಬ ಮಾತು ಏಕನಾಥರಿಗೆ ಅನುಭವವಾಯಿತು.

೭

ನಿರಂಜನೀ ವನೀ ದೇಖಿಲೀ ಮೀ ಗಾಯ।
ತೀನ ತಿಚೇ ಪಾಯ ಚಾರ ಮುಖ ॥ ೧ ॥

ಸಹಸ್ರ ತಿಚೇ ನಯನ ನವ ತಿಚೇ ಕಾನ।
ಸತ್ರಾವೀಚೇ ಸ್ಥಾನ ಏಕ ಶಿಂಗ ॥ ೨ ॥

ಐಶೀ ಕಾಮಧೇನು ವ್ಯಾಸಾನೇ ಪಾಳಿಲೀ।
ಶುಕಾನೇ ವಳಿಲೀ ಜನಕಾಘರೀ ॥ ೩ ॥

ತುಕಾ ಮ್ಹಣೇ ಐಸೇ ಭಾಗ್ಯ ನರಾ ಭೇಟೇ।
ಅಭಾಗೀ ಕರಂಟೇ ವಾಯಾ ಗೇಲೇ ॥ ೪ ॥

ಭಾವಾರ್ಥ: ನಿರಂಜನ ವನದಲ್ಲಿ ನಾನು ನೋಡಿದ ಆಕಳು ಎಂದರೆ, ಮಾನವನಲ್ಲಿದ್ದ ಆಧ್ಯಾತ್ಮಿಕಶಕ್ತಿ. ಈ ಆಕಳಿಗೆ ಸತ್ವ-ರಜ-ತಮ ಎಂಬ ಮೂರು ಗುಣಗಳು, ಆದರ ಕಾಲುಗಳಿದ್ದಂತೆ. ಸ್ಥೂಲ, ಸೂಕ್ಷ್ಮ, ಕಾರಣ,

## ಮಧ್ಯಾಹ್ನದ ಭಜನೆ (ಭಾಗ-೨)

ಮಹಾಕಾರಣ ಎಂಬ ಶರೀರದ ಅಂಗಗಳು ನಾಲ್ಕು ಮುಖಗಳಿದ್ದಂತೆ. ಜ್ಞಾನಸಾಧನವಾದ ಸಹಸ್ರದಳ ಕಮಲವು ಸಹಸ್ರ ನಯನಗಳಿದ್ದಂತೆ. ನವದ್ವಾರಗಳು ಒಂಬತ್ತು ಕಿವಿಗಳಿದ್ದಂತೆ. ಚಂದ್ರನ ಹದಿನೇಳನೆಯ ಕಲೆಯಿಂದ ಅಮೃತವು ಸುರಿಯುವುದರಿಂದ, ಆ ಸ್ಥಾನವು ಸ್ತನವಿದ್ದಂತೆ. ಊರ್ಧ್ವ ಭಾಗದಲ್ಲಿದ್ದ ಬ್ರಹ್ಮರಂಧ್ರವು ಆಕಳಿನ ಕೋಡು ಇದ್ದಂತೆ. ಇಂಥ ಕಾಮಧೇನು ಎಂದರೆ ಆಧ್ಯಾತ್ಮಶಕ್ತಿಯುಳ್ಳ ಆಕಳು ವ್ಯಾಸನ ಮನೆಯಲ್ಲಿ ಹುಟ್ಟಿಬೆಳೆದರೂ ಮಹರ್ಷಿ ಜನಕರಾಜನ ಮನೆಯಲ್ಲಿ ಶುಕಮುನಿಯು ಈ ಕಾಮಧೇನುವನ್ನು ಕಾಯ್ದನು. ಅಂದರೆ ಶುಕನ ಅಹಂಕಾರವು ನಷ್ಟವಾಯಿತು. ಹೀಗೆ ಸದ್ಗುರುವಿಗೆ ಶರಣುಹೋಗಿ ಬ್ರಹ್ಮಸ್ವರೂಪವನ್ನು ಪಡೆಯುವ ಅವಕಾಶವನ್ನು ಮಾನವನು ಉಪಯೋಗಿಸಿಕೊಳ್ಳಬೇಕು. ಇಲ್ಲವಾದರೆ ಆವನು ಅಭಾಗಿಯೇ ಸರಿ ಎಂದು ತುಕಾರಾಮರು ಅನ್ನುತ್ತಾರೆ.

ಅ

ದೇಹ ತೋ ಪಂಢರೀ ಪ್ರೇಮ ಪುಂಡಲೀಕ।
ಸ್ವಭಾವ ಸನ್ಮುಖ ಚಂದ್ರಭಾಗಾ ॥ ೧ ॥
ವಿವೇಕಾಚೀ ವೀಟ ಆತ್ಮಾ ಪಂಢರೀರಾವ।
ಜೇಥೇ ತೇಥೇ ದೇವ ಠಸಾವಲಾ ॥ ೨ ॥
ಕ್ಷಮಾ ದಯಾ ದೋನ್ಹೀ ರುಕ್ಮಿಣೀ ತೇ ರಾಯೀ।
ದೋಹೀಕಡೆ ಪಾಹೀ ಉಭೀ ಅಸೇ ॥ ೩ ॥

ಬುದ್ಧಿ ವ ವೈರಾಗ್ಯ ಗರುಡ ಹನುಮಂತ।
ಕರ ಜೋಡೋನಿ ತೇಥೇ ಪುಢೇ ಉಭಾ ॥ ೪ ॥

ತುಕಾ ಮ್ಹಣೇ ಆಮ್ಹೀ ದೇಖಿಲೀ ಪಂಢರೀ।
ಚುಕವಿಲೀ ಫೇರೀ ಚೌರ್‍ಯಾಂಶೀಚೀ ॥ ೫ ॥

ಭಾವಾರ್ಥ: ಮನುಷ್ಯನಲ್ಲಿ ಭಕ್ತಿ-ಭಾವ ಇದ್ದರೆ ದೇಹವೇ ಪಂಢರಪುರವಾಗಬಹುದು. ಭಗವಂತನಲ್ಲಿ ಇದ್ದ ಪ್ರೀತಿ ಅಥವಾ ಪ್ರೇಮವೇ ಪುಂಡಲೀಕ. ಪ್ರೇಮವು ಉತ್ಕಟವಾಗಿ ಹರಿದರೆ ಆಗುವ ಸ್ವಭಾವವೇ ಚಂದ್ರಭಾಗಾ ನದಿಯು. ಎಂದರೆ ಭಗವದ್ಭಕ್ತಿಯೇ ಸ್ವಭಾವವಾದಾಗ, ವಿಠ್ಠಲನು ದೇಹವನ್ನು ಬಿಟ್ಟು ಹೋಗುವುದಿಲ್ಲ. ಮನುಷ್ಯನಲ್ಲಿ ನಿತ್ಯಾನಿತ್ಯ ವಿವೇಕ ಉದಯಿಸಿ, ದೇಹಬುದ್ಧಿ, ವಾಸನೆಗಳು ನಷ್ಟವಾದರೆ, ದೇವನು ವಿವೇಕವೆಂಬ ಇಟ್ಟಿಗೆಯ ಮೇಲಿಂದ ಚಲಿಸುವದಿಲ್ಲ. ಹೃದಯದಲ್ಲಿಯೇ ಆತ್ಮರೂಪೀ ವಿಠ್ಠಲನು ನಿಲ್ಲುವನು. ಆಗ ಕ್ಷಮಾ-ದಯಾ ರೂಪದಲ್ಲಿದ್ದ ರಖುಮಾಯಿ-ರುಕ್ಮಿಣಿಯರು ಎರಡೂ ಬದಿಗೆ ನಿಲ್ಲುತ್ತಾರೆ. ವಿವೇಕ-ವೈರಾಗ್ಯದಂತಿದ್ದ ಗರುಡ-ಹನುಮಂತರು ಎದುರಿಗೆ ಕೈ ಜೋಡಿಸಿ ನಿಲ್ಲುತ್ತಾರೆ. ಆತ್ಮದರ್ಶನವಾದಾಗ ಎಂಬತ್ನಾಲ್ಕು ಲಕ್ಷ ಯೋನಿಗಳಲ್ಲಿ ಜನ್ಮ ತೆಗೆದುಕೊಳ್ಳುವುದು ತಪ್ಪಿ ಹೋಗುತ್ತದೆ. ಇದೇ ಪಂಢರಪುರದ ಯಾತ್ರೆಯೆಂದು ತುಕಾರಾಮರು ಹೇಳುತ್ತಾರೆ.

# ರಾತ್ರಿ ಭಜನೆ

ಸೋಮವಾರ : ಸಾಂಬ ಸದಾಶಿವ ಸಾಂಬ ಸದಾಶಿವ
ಸಾಂಬ ಸದಾಶಿವ ಸಾಂಬ (ಬೇಗ ೨ ಸಲ)
ಸಾಂಬ ಸದಾಶಿವ ಸಾಂಬ (ಮೇಲ್ದನಿಯಲ್ಲಿ ೨ ಸಲ)
ಸಾಂಬ ಸದಾಶಿವ, ಸಾಂಬ ಸದಾಶಿವ, ಸಾಂಬ
ಸದಾಶಿವ ಸಾಂಬ (ಮೊದಲಿನಂತೆ ೨ ಸಲ)

ಮಂಗಳವಾರ : ಸಾಂಬ ಸದಾಶಿವ ಸಾಂಬ ಸದಾಶಿವ
ಸಾಂಬ ಸದಾಶಿವ, ಸಾಂಬ ಹರ ಹರ
(ಸಾವಕಾಶ ೨ ಸಲ)
ಸಾಂಬ ಸದಾಶಿವ, ಸಾಂಬ ಸದಾಶಿವ, ಸಾಂಬ
ಸದಾಶಿವ, ಸಾಂಬ ಹರ ಹರ (೨ ಸಲ ಬೇಗ,
ಪುನಃ ೨ ಸಲ ಮೆಲ್ಲಗೆ)

ಬುಧವಾರ : ಹರಿ ಹರಿ ವಿಠ್ಠಲ, ರಖುಮಾಯೀ ವಿಠೋಬಾ
(ಕೆಳಗಿನ ಸ್ವರದಲ್ಲಿ ೩ ಸಲ, ಉಚ್ಚಸ್ವರದಲ್ಲಿ ೩ ಸಲ,
ಮೊದಲಿನಂತೆ ೩ ಸಲ)

ಗುರುವಾರ : ಜಯ ಜಯ ಗುರುಮಹಾರಾಜ ಗುರು (೪ ಸಲ)
ಜಯಗುರು, ಜಯಗುರು, ಜಯಗುರು, ಜಯಗುರು (೨ ಸಲ)
ಜಯಜಯ ಗುರುಮಹಾರಾಜ ಗುರು
ಜಯಜಯ ಪರಬ್ರಹ್ಮ ಸದ್ಗುರು (೧ ಸಲ)

ಶುಕ್ರವಾರ : ಪಾವನಾ ರಾಮಾ, ಪತಿತಪಾವನಾ ರಾಮಾ (ಸಾವಕಾಶ ೨ ಸಲ)
ಪಾವನಾ ರಾಮಾ (ಉಚ್ಚಸ್ವರದಿಂದ ಮತ್ತೆ ಮೊದಲಿನಂತೆ)
ಪಾವನಾ ರಾಮಾ ಪತಿತಪಾವನಾ ರಾಮಾ (೨ ಸಲ)

ಹರಿ ನಾರಾಯಣ, ಗುರು ನಾರಾಯಣ। ಘಡಿ ಘಡಿ ಜಿವ್ಹೇ ಕರಿ ಪಾರಾಯಣ।
ತವ ದಾಸೋಽಹಂ ನಾರಾಯಣ। ಹರಿ ನಾರಾಯಣ, ಗುರು ನಾರಾಯಣ।
ಲಕ್ಷ್ಮೀಶ್ರೀರಂಗಧರ ಸೀತಾರಘುವೀರ ರಾಧೇಗೋವಿಂದಾ।
ಹರಿ ಹರಿ ರಾಧೇಗೋವಿಂದಾ। ರಖುಮಾಯೀ ಪಾಂಡುರಂಗಾ। (೩ ಸಲ)

## ರಾತ್ರಿ ಭಜನೆ

ಶನಿವಾರ : ಮಾರುತೀ ಸಖಯಾ ಬಲಭೀಮಾ।।
ಭಜನಾಲಾಗೀ ದೇ ಪ್ರೇಮಾ।। (೨ ಸಲ)
ಭಜನಾಲಾಗೀ ದೇ ಪ್ರೇಮಾ।। (೨ ಸಲ)
ಮಾರುತಿ ಸಖಯಾ ಬಲಭೀಮಾ।।
ಭಜನಾಲಾಗೀ ದೇ ಪ್ರೇಮಾ।। (೨ ಸಲ)

ರವಿವಾರ : ಸಾಂಬ ಸದಾಶಿವ ಸಾಂಬ ಸದಾಶಿವ
ಸಾಂಬ ಸದಾಶಿವ ಸಾಂಬ ಹರ ಹರ (ಮೆಲ್ಲಗೆ ೨ ಸಲ),
(ಬೇಗ ೨ ಸಲ, ಮತ್ತೆ ಮೆಲ್ಲಗೆ ೨ ಸಲ)

## ಹನ್ನೆರಡು ಅಭಂಗಗಳು

೧

ಜನ್ಮಾಚೇ ತೇ ಮೂಳ ಪಾಹಿಲೇ ಶೋಧೂನ।
ದುಃಖಾಸೀ ಕಾರಣ ಜನ್ಮ ಘ್ಯಾವಾ ॥ ೧ ॥

ಪಾಪಪುಣ್ಯ ಕರುನೀ ಜನ್ಮಾ ಯೇತೋ ಪ್ರಾಣೀ।
ನರದೇಹಾ ಯೇವೂನಿ ಹಾನಿ ಕೇಲೀ ॥ ೨ ॥

ರಜತಮಸತ್ತ್ವ ಆಹೇ ಜ್ಯಾಚೇ ಅಂಗೀ।
ಯಾಚ ಗುಣೇ ಜಗೀ ವಾಯಾ ಗೇಲಾ ॥ ೩ ॥

ತಮ ಮ್ಹಣಜೇ ಕಾಯ ನರಕಚಿ ಕೇವಳ।
ರಜ ತೋ ಸಬಳ ಮಾಯಾಜಾಳ ॥ ೪ ॥

ತುಕಾ ಮ್ಹಣೇ ಯೇಥೇ ಸತ್ತ್ವಾಚೇ ಸಾಮರ್ಥ್ಯ।
ಕರಾವಾ ಪರಮಾರ್ಥ ಅಹರ್ನಿಶೀ ॥ ೫ ॥

ಭಾವಾರ್ಥ : ಜನ್ಮದ ಮೂಲ ಕಾರಣವನ್ನು ಹುಡುಕಿ ನೋಡಿದರೆ ದುಃಖ ಅನುಭವಿಸಲಿಕ್ಕೇ ಮನುಷ್ಯ ಹುಟ್ಟಿ ಬರುವದು. ತಾನು ಸಂಪಾದಿಸಿದ

# ರಾತ್ರಿ ಭಜನೆ

ಪಾಪಪುಣ್ಯಗಳ ಫಲರೂಪವಾಗಿ ಮಾನವ ದೇಹ ಪಡೆಯುತ್ತಾನೆ. ಆದರೆ ಅದರ ಹಾನಿಯನ್ನು ಮಾಡಿಕೊಳ್ಳುತ್ತಿದ್ದಾನೆ. ರಜ, ತಮ, ಸತ್ವ ಗುಣಗಳೇ ಈ ಹಾನಿಗೆ ಕಾರಣಗಳು. ತಮೋ ಗುಣವೆಂದರೆ ನರಕವೇ ಸೈ; ರಜೋ ಗುಣ ಮಾಯಾ ಜಾಲಕ್ಕೆ ಕಾರಣ. ಆದ್ದರಿಂದ ತುಕಾರಾಮರು "ಸತ್ವಗುಣದ ಸಾಮರ್ಥ್ಯದಿಂದ ಹಗಲೂರಾತ್ರಿ ಪರಮಾರ್ಥ ಸಾಧಿಸಬೇಕು" ಎಂದು ಹೇಳುತ್ತಾರೆ.

೨

ಅಹರ್ನಿಶೀ ಸದಾ ಪರಮಾರ್ಥ ಕರಾವಾ।
ಪಾಯ ನ ಠೇವಾವಾ ಆಡಮಾರ್ಗೀ ॥ ೧ ॥

ಆಡಮಾರ್ಗೀ ಕೋಣೀ ಜನ ಜೇ ಜಾತೀಲ।
ತ್ಯಾತುನೀ ಕಾಢೀಲ ತೋಚಿ ಜ್ಞಾನೀ ॥ ೨ ॥

ತೋಚಿ ಜ್ಞಾನೀ ಖರಾ ತಾರೀ ದುಜಿಯಾಸೀ।
ವೇಳೋವೇಳಾ ತ್ಯಾಸೀ ಶರಣ ಜಾವೇ ॥ ೩ ॥

ಆಪಣ ತರೇಲ ನವ್ಹೇ ತೇ ನವಲ।
ಕುಳೇ ಉದ್ಧರೀಲ ಸರ್ವಾಂಚೀ ತೋ ॥ ೪ ॥

ಶರಣ ಗೇಲಿಯಾನೇ ಕಾಯ ಹೋತೇ ಫಳ।
ತುಕಾ ಮ್ಹಣೇ ಕೂಳ ಉದ್ಧರೀಲೇ ॥ ೫ ॥

ಭಾವಾರ್ಥ: ಹಗಲು, ರಾತ್ರಿ ಎನ್ನದೆ ಯಾವಾಗಲೂ ಪರಮಾರ್ಥ ಸಾಧಿಸಬೇಕು. ಅದನ್ನು ಬಿಟ್ಟು ಅಡ್ಡದಾರಿಯಲ್ಲಿ ಹೋಗಬಾರದು. ಅಡ್ಡದಾರಿಯಲ್ಲಿ ಯಾರಾದರೂ ಹೋದರೆ ಅವರನ್ನು ಸರಿಯಾದ ಮಾರ್ಗಕ್ಕೆ ತರುವವನೇ ಜ್ಞಾನಿಯು. ಇತರರನ್ನು ಉದ್ಧಾರ ಮಾಡುವವನೇ ಜ್ಞಾನಿಯು. ಅವನಿಗೆ ಮೇಲಿಂದ ಮೇಲೆ ಶರಣು ಹೋಗಬೇಕು. ಜ್ಞಾನಿಯು ತಾನು ಮುಕ್ತಿಯನ್ನು ಪಡೆಯುವದು ಆಶ್ಚರ್ಯವೇನಲ್ಲ. ಇತರರ ಕುಲವನ್ನೇ ಉದ್ಧರಿಸುವನು ಎಂದು ತುಕಾರಾಮರು ಹೇಳುತ್ತಾರೆ.

೩

ಉದ್ಧರಿಲೇ ಕೂಳ ಆಪಣ ತರಲಾ
ತೋಚಿ ಏಕ ಝಾಲಾ ತ್ರೈಲೋಕ್ಯಾತ ॥ ೧ ॥

ತ್ರೈಲೋಕ್ಯಾತ ಝಾಲೇ ದ್ವೈತಚಿ ನಿಮಾಲೇ।
ಐಸೇ ಸಾಧಿಯೇಲೇ ಸಾಧನ ಬರವೇ ॥ ೨ ॥

ಬರವೇ ಸಾಧನ ಸುಖಶಾಂತಿ ಮನಾ।
ಕ್ರೋಧ ನಾಹೀ ಜಾಣಾ ತಿಳಭರೀ ॥ ೩ ॥

ತಿಳಭರೀ ನಾಹೀ ಚಿತ್ತಾಸೀ ತೋ ಮಳ।
ತುಕಾ ಮ್ಹಣೇ ಜಳ ಗಂಗೇಚೇ ತೇ ॥ ೪ ॥

ಭಾವಾರ್ಥ: ಕುಲವನ್ನು ಉದ್ಧಾರಮಾಡಿ ತಾನೂ ಉದ್ಧಾರನಾಗಿ (ಆತ್ಮ ಸಾಕ್ಷಾತ್ಕಾರವನ್ನು ಪಡೆದು) ತ್ರೈಲೋಕ್ಯದಲ್ಲಿ ಶ್ರೇಷ್ಠನಾದನು, ಎಂದರೆ ಪರಮಾತ್ಮನಲ್ಲಿ ಲೀನನಾದಾಗ ದ್ವೈತಭಾವವು ನಶಿಸಿ ಹೋಯಿತು. ಇಂಥ ಸಾಧನೆಯನ್ನು ಮಾಡಿದವನ ಮನಸ್ಸಿನಲ್ಲಿ ಸಿಟ್ಟು ತಿಲಮಾತ್ರವೂ ಇರುವುದಿಲ್ಲ; ಸುಖ ಶಾಂತಿಗಳು ನೆಲೆಸುವವು. ನಿರ್ಮಲವಾದ ಗಂಗೆಯ ನೀರಿನಂತೆ ಚಿತ್ತವು ನಿರ್ಮಲವಾಗುವದು ಎಂದು ತುಕಾರಾಮರು ಹೇಳುತ್ತಾರೆ.

೪

ಜೈಸೀ ಗಂಗಾ ವಾಹೇ ತೈಸೇ ತ್ಯಾಚೇ ಮನ।
ಭಗವಂತ ಜಾಣ ತ್ಯಾಚೇಜವಳೀ ॥ ೧ ॥

ತ್ಯಾಚೇಜವಳಿ ದೇವ ಭಕ್ತಿಭಾವೇ ಉಭಾ।
ಸ್ವಾನಂದಾಚಾ ಗಾಭಾ ತಯಾ ದಿಸೇ ॥ ೨ ॥

ತಯಾ ದಿಸೇ ರೂಪ ಅಂಗುಷ್ಠಪ್ರಮಾಣ।
ಅನುಭವೀ ಖೂಣ ಜಾಣತೀ ಹೇ ॥ ೩ ॥

ಜಾಣತೀ ಹೇ ಖೂಣ ಸ್ವಾತ್ಮಾನುಭವೀ।
ತುಕಾ ಮ್ಹಣೇ ಪದವೀ ಜ್ಯಾಚೀ ತ್ಯಾಲಾ ॥ ೪ ॥

ಭಾವಾರ್ಥ: ಯಾರ ಮನಸ್ಸು ನಿರ್ಮಲವಾದ ಗಂಗೆಯ ನೀರಿನಂತಿರುವದೋ ಅವರ ಹತ್ತಿರ ಭಗವಂತನು ಇರುತ್ತಾನೆ. ಅವನ ಅನನ್ಯ ಭಕ್ತಿಭಾವದಿಂದ,

ಆನಂದ ಸ್ವರೂಪನಾದ ದೇವನ ದರ್ಶನ ಅಂಗುಷ್ಠ ಪ್ರಮಾಣದಂತೆ ಆಗುತ್ತದೆ. ಈ ಕುರುಹು (ಗುರುತು) ಸಾಕ್ಷಾತ್ಕಾರ ಪಡೆದ ಸಾಧಕನಿಗೆ ಮಾತ್ರ ತಿಳಿಯುತ್ತದೆ ಎಂದು ತುಕಾರಾಮರು ಹೇಳುತ್ತಾರೆ. "ಅಂಗುಷ್ಠ ಪ್ರಮಾಣ"ವೆಂದರೆ ನಾಸಿಕಾಗ್ರದೃಷ್ಟಿಯಲ್ಲಿ ಅಂಗುಷ್ಠದಷ್ಟು ಮಾತ್ರ ಕಾಣುವದು.

೫

ಜ್ಯಾಚೇ ತ್ಯಾಲಾ ಪದವೀ ಇತರಾ ನ ಸಾಜೇ।
ಸಂತಾಲಾ ಉಮಜೇ ಆತ್ಮಸುಖ ॥ ೧ ॥

ಆತ್ಮಸುಖ ಘ್ಯಾರೇ ಉಘಡಾ ಜ್ಞಾನದೃಷ್ಟೀ।
ಯಾವಿಣ ಚಾವಟೀ ಕರೂ ನಕಾ ॥ ೨ ॥

ಕರೂ ನಕಾ ಕಾಹೀ ಸಂತಸಂಗ ಧರಾ।
ಪೂರ್ವಿಚಾ ತೋ ದೋರಾ ಉಗವೇಲ ॥ ೩ ॥

ಉಗವೇಲ ಪ್ರಾರಬ್ಧ ಸಂತಸಂಗೇಕರುನೀ।
ಪ್ರತ್ಯಕ್ಷ ಪುರಾಣೀ ವರ್ಣಯೇಲೇ ॥ ೪ ॥

ವರ್ಣಯೇಲೇ ಏಕಾ ಗುಣನಾಮಘೋಷೇ।
ಜಾತೀಲ ರೇ ದೋಷ ತುಕಾ ಮ್ಹಣೇ ॥ ೫ ॥

## ರಾತ್ರಿ ಭಜನ

ಭಾವಾರ್ಥ: ಯಾರು ಎಷ್ಟೆಷ್ಟು ನಾಮಸ್ಮರಣೆ ಮಾಡುವರೋ ಅಷ್ಟಷ್ಟು ಅವರಿಗೆ ಸಾಕ್ಷಾತ್ಕಾರದ ಫಲ ದೊರೆಯುವದು. ಅವರದು ಅವರಿಗೆ. ಯಾರೂ, ಬೇರೆಯವರಿಗೆ ಸಾಕ್ಷಾತ್ಕಾರದ ಅನುಭವವನ್ನು ಕೊಡಲಾರರು. ಶ್ರೇಷ್ಠ ಸಾಕ್ಷಾತ್ಕಾರ ಪಡೆದ ಸಂತರಿಗೆ ಶ್ರೇಷ್ಠತಮ ಆತ್ಮಾನಂದದ ಅನುಭವವಾಗುತ್ತದೆ. ಆದ್ದರಿಂದ ಜ್ಞಾನ ದೃಷ್ಟಿಯನ್ನು ಪಡೆಯಿರಿ. ನಾಮಸ್ಮರಣೆಯಿಂದ ಆತ್ಮಸುಖವನ್ನು ಪಡೆಯಿರಿ. ವ್ಯರ್ಥ ವೇಳೆಯನ್ನು ಕಳೆಯಬೇಡಿರಿ. ಹೀಗೆ ಸತ್ಸಂಗದಿಂದ ಪೂರ್ವದ ಸುಕೃತದ ಸೂತ್ರವು ಈ ಜನ್ಮದಲ್ಲಿ ಕೈಗೆ ದೊರೆತು, ಯೋಗ್ಯ ರೀತಿಯಿಂದ ಪರಮಾರ್ಥ ಸಾಧನೆಯು ಆಗುವದು. ನಾಮಸ್ಮರಣೆಯಿಂದ ದೋಷಗಳ ಪರಿಹಾರವಾಗುವದು; ಎಲ್ಲ ಪುರಾಣಗಳೂ ಇದನ್ನೇ ಹೇಳುತ್ತವೆ ಎಂದು ತುಕಾರಾಮರು ಹೇಳುತ್ತಾರೆ.

೬

ದೋಷ ರೇ ಜಾತೀಲ ಅನಂತ ಜನ್ಮೀಂಚೇ।
ಪಾಯ ತ್ಯಾ ದೇವಾಚೇ ನ ಸೋಡಾವೇ ॥ ೧ ॥

ನ ಸೋಡಾವೇ ಪಾಯ ನಿಶ್ಚಯ ತೋ ಕರಾ।
ಆಳವಾ ಶಾರಂಗಧರಾ ಭಾವಬಳೇ ॥ ೨ ॥

ಧರೂನಿ ಕೇಶವ ಆಣಾ ಭಾವಬಳೇ।
ಪಾಪಿಯಾ ನ ಕಳೇ ಕಾಹೀ ಕೇಲ್ಯಾ ॥ ೩ ॥

ನ ಕಳೇ ತೋ ದೇವ ಸಂತಸಂಗಾವಾಚುನಿ।
ವಾಸನಾ ಜಾಳೋನಿ ಶುದ್ಧ ಕರಾ ॥ ೪ ॥
ಶುದ್ಧ ಕರಾ ಮನ ದೇಹಾತೀತ ವ್ಹಾವೇ।
ವಸ್ತೂಸೀ ಪೋಳಖಾವೇ ತುಕಾ ಮ್ಹಣೇ ॥ ೫ ॥

ಭಾವಾರ್ಥ: ದೇವರ ಪಾದಗಳನ್ನು ಬಿಡುವದಿಲ್ಲವೆಂಬ ದೃಢ ನಿರ್ಧಾರ ಮಾಡಿದರೆ ಅನಂತ ಜನ್ಮದ ಪಾಪಗಳೆಲ್ಲ ನಾಶವಾಗುವವು. ಭಕ್ತಿಭಾವದಿಂದ ಕೃಷ್ಣನನ್ನು ಪ್ರಸನ್ನಗೊಳಿಸಿ ಕರೆದು ತನ್ನಿರಿ. ಪಾಪಿಗಳಿಗೆ ಇದು ಏನು ಮಾಡಿದರೂ ತಿಳಿಯಲಾರದು. ಸತ್ಸಂಗವಿಲ್ಲದೆ ದೇವರ ದರ್ಶನವಾಗಲಾರದು. ವಾಸನೆಗಳನ್ನು ಸುಟ್ಟುಬೂದಿಮಾಡಿ, ದೇಹ ಬುದ್ಧಿಯನ್ನು ಇಲ್ಲದಂತೆ ಮಾಡಿದರೆ, ಚಿತ್ತಶುದ್ಧಿಯಾಗಿ ಸತ್ಯವಸ್ತುವಿನ ಗುರುತು ಸಿಗುವಂತೆ ಮಾಡಿಕೊಳ್ಳುವಿರಿ ಎಂದು ತುಕಾರಾಮರು ಹೇಳುತ್ತಾರೆ.

೭

ಓಳಖಾ ರೇ ವಸ್ತು ಸಾಂಡಾ ರೇ ಕಲ್ಪನಾ।
ನಕಾ ಆಡರಾನಾ ಜಾವೂ ಝಣೇ ॥ ೧ ॥
ಝಣೇ ಜಾಲ ಕೋಠೇ ಬುಡವಾಲ ಹೀತ।
ವಿಚಾರೀ ಮನಾತ ಆಪುಲಿಯಾ ॥ ೨ ॥
ಆಪುಲಿಯಾ ಜೀವೇ ಶಿವಾಸಿ ಪಹಾವೇ।
ಆತ್ಮಸುಖ ಘ್ಯಾವೇ ವೇಳೋವೇಳಾ ॥ ೩ ॥

## ರಾತ್ರಿ ಭಜನೆ

ಘ್ಯಾವೇ ಆತ್ಮಸುಖ ಸ್ವರೂಪೀ ಮಿಳಾವೇ।
ಭೂತೀ ಲೀನ ವ್ಹಾವೇ ತುಕಾ ಮ್ಹಣೇ ।। ೪ ।।

ಭಾವಾರ್ಥ: ಶಾಶ್ವತ ಸತ್ಯವಸ್ತುವನ್ನು ಪಡೆಯಬೇಕಾದರೆ, ವಿಷಯ ಕಲ್ಪನೆಗಳ ಅಡ್ಡದಾರಿಯನ್ನು ಬಿಡಬೇಕು. ಮಾಯೆಯ ಬೆನ್ನು ಹತ್ತಿದರೆ ನಿನ್ನ ಹಿತವು ಮುಳುಗಿ ಹೋದೀತು. ಆದ್ದರಿಂದ ಅಂತರ್ಯದಲ್ಲಿ ವಿವೇಕ ಬುದ್ಧಿಯಿಂದ ವಿಚಾರಮಾಡಿ ಆತ್ಮಸುಖವನ್ನು ಪಡೆಯಬೇಕು. ಆತ್ಮಸುಖವನ್ನು ಅನುಭವಿಸುತ್ತ ಸಕಲ ಜೀವಿಗಳೊಂದಿಗೆ (ವಿಶ್ವದೊಂದಿಗೆ) ಒಂದಾಗಬೇಕು ಎಂದು ತುಕಾರಾಮರು ಹೇಳುತ್ತಾರೆ.

೮

ಭೂತೀ ಲೀನ ವ್ಹಾವೇ ಸಾಂಗಾವೇ ನಲಗೇಚಿ।
ಆತಾ ಅಹಂಕಾರಾಚೀ ಶಾಂತಿ ಕರಾ ।। ೧ ।।

ಶಾಂತಿ ಕರಾ ತುಮ್ಹೀ ಮಮತಾ ನಸಾವೀ।
ಅಂತರೀ ವಸಾವೀ ಭೂತದಯಾ ।। ೨ ।।

ಭೂತದಯಾ ಠೇವಾ ಮಗ ಕಾಯ ಉಣೇ।
ಪ್ರಥಮ ಸಾಧನ ಹೇಚಿ ಅಸೇ ।। ೩ ।।

ಅಸೋ ಹೇ ಸಾಧನ ಜ್ಯಾಚೇ ಚಿತ್ತೀ ವಸೇ।
ಮಾಯಾಜಾಳ ನಾಸೇ ತುಕಾ ಮ್ಹಣೇ ।। ೪ ।।

ಭಾವಾರ್ಥ: ಭೂತದಯೆ ಎಂದರೆ ಎಲ್ಲ ಪ್ರಾಣಮಾತ್ರಗಳಲ್ಲಿ ಪ್ರೀತಿ ಅಂತಃಕರಣವಿರಬೇಕು, ಎಂದು ಬೇರೆ ಹೇಳಬೇಕಾಗಿಲ್ಲ. ಏಕೆಂದರೆ ಭೂತದಯೆಯೇ ಪ್ರಥಮ ಸಾಧನವು. ಅಹಂಕಾರವು ಹೋದರೆಮಾತ್ರ ಇದು ಸಾಧ್ಯವು. ಅಹಂಕಾರವು ಹೋಗಬೇಕು. ಮಾಯೆಯು ತೊಲಗಬೇಕು; ಎಂದರೆ ನಾಮಸ್ಮರಣೆಯ ಜೊತೆಗೆ ಭೂತದಯಾ ಮನೋಭಾವವು ಬೆಳೆದು ಸರ್ವಾತ್ಮಭಾವವು ಮೂಡುವದು. ಆಗ ನಾನು, ನನ್ನದು, ನಶಿಸಿ ಮಾಯಾಜಾಲವು ನಷ್ಟವಾಗುವದು ಎಂದು ತುಕಾರಾಮರು ಹೇಳುತ್ತಾರೆ.

೯

ಮಾಯಾಜಾಳ ನಾಸೇ ಯಾ ನಾಮೇಕರುನೀ।
ಪ್ರೀತಿ ಚಕ್ರಪಾಣೀ ಅಸೋ ದ್ಯಾವೀ ॥ ೧ ॥

ಅಸೋ ದ್ಯಾವೀ ಪ್ರೀತಿ, ಸಾಧೂಂಚೇ ಪಾಯಾಸೀ।
ಕದಾ ಕೀರ್ತನಾಸೀ ಸೋಡೂ ನಯೇ ॥ ೨ ॥

ಸೋಡೂ ನಯೇ ಪುರಾಣ ಶ್ರವಣ ಕೀರ್ತನ।
ಮನನ ನಿದಿಧ್ಯಾಸ ಸಾಕ್ಷಾತ್ಕಾರ ॥ ೩ ॥

ಸಾಕ್ಷಾತ್ಕಾರ ಝಾಲಿಯಾ ಸಹಜ ಸಮಾಧಿ।
ತುಕಾ ಮ್ಹಣೇ ಉಪಾಧಿ ಗೇಲೀ ತ್ಯಾಚೀ ॥ ೪ ॥

## ರಾತ್ರಿ ಭಜನೆ

ಭಾವಾರ್ಥ: ನಾಮಸ್ಮರಣೆಯಿಂದ ಮಾಯಾಜಾಲವು ನಷ್ಟವಾಗುವದು. ಭೂತದಯೆಯು ನಾಮಸಾಧನೆಯ ಒಂದು ಅಂಗವಿರುವದೇ ವಿನಃ ಸ್ವತಂತ್ರ ಸಾಧನವಲ್ಲ. ನಾಮಸ್ಮರಣೆಯೇ ಮುಖ್ಯ ಸಾಧನ. ಇದು ಏಕಾಗ್ರತೆಯಿಂದ ನಡೆಯಬೇಕಾದರೆ ಭಗವಂತನಲ್ಲಿ ಪ್ರೀತಿ ಬೇಕು. ಇದಕ್ಕಾಗಿ ಸತ್ಸಂಗದಲ್ಲಿ ಶ್ರದ್ಧೆ ಇಟ್ಟು ಕೀರ್ತನ ಕೇಳಬೇಕು. ಶ್ರವಣ, ಕೀರ್ತನ, ಮನನ, ನಿದಿಧ್ಯಾಸ, ಸಾಕ್ಷಾತ್ಕಾರ, ಇವುಗಳಿಂದ ಭಗವದ್ಭಕ್ತಿಯು ವರ್ಧಿಸುವದು. ಹೀಗೆ ನಿರಂತರವಾಗಿ ನಡೆಯುವ ನಾಮಸಾಧನೆಯಿಂದ ಸಾಕ್ಷಾತ್ಕಾರವಾಗಿ ಸ್ವರೂಪ ದರ್ಶನವಾಗುತ್ತಿದೆ; ಅಂದರೆ ಅದೇ ಸಹಜ ಸಮಾಧಿ. ಆಮೇಲೆ ಉಪಾಧಿ ನಷ್ಟವಾಗುತ್ತಿದೆ ಎಂದು ತುಕಾರಾಮರು ಹೇಳುತ್ತಾರೆ.

೧೦

ಗೇಲೀ ತ್ಯಾಚೀ ಜಾಣಾ ಬ್ರಹ್ಮತೋಚಿ ಝಾಲಾ।
ಅಂತರೀ ನಿವಾಲಾ ಪೂರ್ಣಪಣೇ ॥ ೧ ॥

ಪೂರ್ಣಪಣೇ ಧಾಲಾ ರಾಹತೋ ಕೈಸಾ ರೀತಿ।
ತ್ಯಾಚೀ ಆತಾ ಸ್ಥಿತೀ ಸಾಂಗತೋ ಮೀ ॥ ೨ ॥

ಸಾಂಗತೋ ಮೀ ತುಮ್ಹಾ ಐಕಾ ಮನೋಗತ।
ರಾಹತೋ ಮೂರ್ಖವತ ಜಗಾಮಾಜೀ ॥ ೩ ॥

ಜಗಾತ ಪಿಶಾಚ್ಚ ಅಂತರೀ ಶಹಾಣಾ।
ಸದಾ ಬ್ರಹ್ಮೀ ಜಾಣಾ ನಿಮಗ್ನ ತೋ ॥ ೪ ॥

ನಿಮಗ್ನ ತೋ ಸದಾ ಜೈಸಾ ಮಕರಂದ।
ಅಂತರ್ಬಾಹ್ಯ ಭೇದ ವೇಗಳಾಲೇ ॥ ೫ ॥

ವೇಗಳಾಲೇ ಭೇದ ಕಿತೀ ತ್ಯಾ ಅಸತೀ।
ಹೃದ್ಗತ ತ್ಯಾಚೀ ಗತೀ ನ ಕಳೇ ಕವಣಾ ॥ ೬ ॥

ನ ಕಳೆ ಕವಣಾಲಾ ತ್ಯಾಚೀ ಹೇಚಿ ವರ್ಮ।
ಯೋಗೀ ಜಾಣೇ ವರ್ಮ ಖೂಣ ತ್ಯಾಚೀ ॥ ೭ ॥

ಖೂಣ ತ್ಯಾಚೀ ಜಾಣೇ ಜೇ ತೈಸೇ ಅಸತೀ।
ತುಕಾ ಮ್ಹಣೇ ಭ್ರಾಂತೀ ದುಜಿಯಾಲಾ ॥ ೮ ॥

ಭಾವಾರ್ಥ: ಅವನು ಬ್ರಹ್ಮನಾದಮೇಲೆ ಅಂತರ್ಯದಲ್ಲಿ ನಿಜವಾದ ಆನಂದವನ್ನೂ ಸಂಪೂರ್ಣ ಶಾಂತಿಯನ್ನೂ ಅನುಭವಿಸುತ್ತಾನೆ. ಆದರೆ ಅವನು ಹೇಗೆ ವ್ಯವಹರಿಸುತ್ತಾನೆಂಬುದನ್ನು ಹೇಳುತ್ತೇನೆ ಕೇಳಿರಿ. ಹೊರಗಿನ ಜಗತ್ತಿಗೆ ಅವನು ಮೂರ್ಖನಂತೆ, ಪಿಶಾಚಿಯಂತೆ ಕಂಡರೂ, ಜೇನುನೊಣವು ಮಕರಂದದಲ್ಲಿ ಸ್ಥಿರವಾಗಿರುವಂತೆ, ಅವನು ಆತ್ಮಾನಂದದಲ್ಲಿ ಮಗ್ನನಾಗಿರುತ್ತಾನೆ. ಹೀಗೆ ಅವನ ಅಂತರ್ಬಾಹ್ಯ ಜೀವನದಲ್ಲಿ ಬಹಳ ಅಂತರವಿರುತ್ತದೆ. ಈ ರಹಸ್ಯವು ಯಾರಿಗೂ ತಿಳಿಯುವದಿಲ್ಲ. ಕೇವಲ ಯೋಗಿಗಳಿಗೆ ಮಾತ್ರ ಇದರ ರಹಸ್ಯವು ತಿಳಿಯುವದು. ಏಕೆಂದರೆ ಅವರೂ ಅವನಂತೆಯೇ ಇರುತ್ತಾರೆ. ಬೇರೆಯವರಿಗೆ ಭ್ರಾಂತನಂತೆ (ಹುಚ್ಚನಂತೆ)

ಕಾಣುತ್ತಾನೆ ಎಂದು ತುಕಾರಾಮರು ಹೇಳುತ್ತಾರೆ. (ಸಾಕ್ಷಾತ್ಕಾರ ಮಾಡಿಕೊಂಡ ಸಂತರಿಗೆ ಮಾತ್ರ ಅವನ ಲಕ್ಷಣ ತಿಳಿಯುತ್ತದೆ.)

೧೧

ದುಜಿಯಾಲಾ ಭ್ರಾಂತೀ ಭಾವಿಕಾಲಾ ಶಾಂತೀ।
ಸಾಧೂಂಚೀ ತೀ ವೃತ್ತಿ ಲೀನ ಝಾಲೀ ॥ ೧ ॥

ಲೀನ ಝಾಲೀ ವೃತ್ತಿ ಬ್ರಹ್ಮಾತೇ ಮಿಳಾಲೇ।
ಜಳಾತ ಆಟಲೇ ಲವಣ ಜೈಸೇ ॥ ೨ ॥

ಲವಣ ಜೈಸೇ ಪುನ್ಹಾ ಜಳಾಚೇ ಬಾಹೇರೀ
ಯೇತ ನಾಹೀ ಖರೇ ತ್ಯಾತೂನಿಯಾ ॥ ೩ ॥

ತ್ಯಾಸಾರಿಖೇ ತುಮ್ಹೀ ಜಾಣಾ ಸಾಧುವೃತ್ತಿ।
ಪುನ್ಹಾ ನ ಮಿಳತೀ ಮಾಯಾಜಾಳೀ ॥ ೪ ॥

ಮಾಯಾಜಾಳ ತ್ಯಾನಾ ಪುನ್ಹಾ ರೇ ಬಾಧೇನಾ।
ಸತ್ಯ ಸತ್ಯ ಜಾಣಾ ತುಕಾ ಮ್ಹಣೇ ॥ ೫ ॥

ಭಾವಾರ್ಥ : ಹೊರಗಿನಿಂದ ನೋಡುವವರಿಗೆ ಭ್ರಾಂತಿ ಎಂದು ಕಂಡರೂ, ಜ್ಞಾನಿಗೆ ಮಾತ್ರ ಪರಮಶಾಂತಿ ಲಭಿಸಿರುತ್ತದೆ. ಉಪ್ಪು ಹೇಗೆ ಸಮುದ್ರದ ನೀರಿನಲ್ಲಿ ಕರಗಿ ಹೋಗಿರುತ್ತದೆಯೋ, ಹಾಗೆ ಅವನು ಬ್ರಹ್ಮನಲ್ಲಿ ಲೀನನಾಗಿ

ಹೋಗಿರುತ್ತಾನೆ. ಕರಗಿದ ಉಪ್ಪು ಹೇಗೆ ನೀರನ್ನು ಬಿಟ್ಟು ಹೊರಗೆ ಬರಲಾರದೋ, ಹಾಗೆ ಅವನು ಪುನಃ ಮಾಯಾ ಪ್ರಪಂಚಕ್ಕೆ ತಿರುಗಿ ಬರುವದಿಲ್ಲ. ಮಾಯಾಜಾಲವು ಅವನನ್ನು ಪುನಃ ಬಾಧಿಸುವದಿಲ್ಲ. ಇದು ತ್ರಿಕಾಲಾಬಾಧಿತ ಸತ್ಯವೆಂದು ತುಕಾರಾಮಮಹಾರಾಜರು ಹೇಳುತ್ತಾರೆ.

೧೨

ಸ್ವರ್ಗಲೋಕೀಹೂನಿ ಆಲೇ ಹೆ ಅಭಂಗ।
ಧಾಡಿಯಲೇ ಸಾಂಗ ತುಮ್ಹಾಲಾಗೀ ॥ ೧ ॥

ನಿತ್ಯನೇಮೇ ಯಾಸಿ ಪಠತಾ ಪ್ರತಾಪೇ।
ಜಳತಿಲ ಪಾಪೇ ಜನ್ಮಾಂತರೀಚೀ ॥ ೨ ॥

ತಯಾ ಮಾಗೇಪುಢೇ ರಕ್ಷೀ ನಾರಾಯಣ।
ಮಾಂಡಿಲ್ಯಾ ನಿರ್ವಾಣ ಉಡೀ ಘಾಲೀ ॥ ೩ ॥

ಬುದ್ಧೀಚಾ ಪಾಲಟ ನಾಸೇಲ ಕುಮತೀ।
ಹೋಯಿೀಲ ಸದ್ಭಕ್ತಿ ಯೇಣೇ ಪಂಥೇ ॥ ೪ ॥

ಸದ್ಭಕ್ತಿ ಝಾಲಿಯಾ ಸಹಜ ಸಾಕ್ಷಾತ್ಕಾರ।
ಹೋಯಿೀಲ ಉದ್ಧಾರ ಪೂರ್ವಜಾಂಚಾ ॥ ೫ ॥

ಸಾಧತೀಲ ಯೇಣೇ ಇಹಪರಲೋಕ।
ಸತ್ಯ ಸತ್ಯ ಭಾಕ ಮಾಝೀ ತುಮ್ಹಾ ॥ ೬ ॥

## ರಾತ್ರಿ ಭಜನೆ

ಪರೋಪಕಾರಾ ಸಾಠೀ ಸಾಂಗಿತಲೇ ದೇವಾ।
ಪ್ರಾಸಾದಿಕ ಮೇವಾ ಗ್ರಹಣ ಕರಾ ॥ ೭ ॥

ಯೇಣೇ ಭವವ್ಯಥಾ ಜಾಯೀಲ ತುಮಚೀ।
ಸಖ್ಯಾ ವಿಠ್ಠಲಾಚೀ ಆಣ ಮಜ ॥ ೮ ॥

ಟಾಳ ಆಣಿ ಕಂಥಾ ಧಾಡಿಲೀ ನಿಶಾಣೀ।
ಘ್ಯಾರೇ ಓಳಖೋನೀ ಸಜ್ಜನ ಹೋ ॥ ೯ ॥

ಮಾಝೀ ದಂಡವತ ತುಮ್ಹಾ ಸರ್ವ ಲೋಕಾ।
ದೇಹಾಸಹಿತ ತುಕಾ ವೈಕುಂಠಾಸೀ ॥ ೧೦ ॥

ಭಾವಾರ್ಥ: ಸ್ವರ್ಗಲೋಕದಿಂದ ಈ ಅಭಂಗವನ್ನು ನಿಮ್ಮ ಹಿತದ ಸಲುವಾಗಿ ಕಳುಹಿಸಿದ್ದೇನೆ. ಯಾರು ನೇಮದಿಂದ ಈ ಅಭಂಗಗಳನ್ನು ನಿತ್ಯಪಠನ ಮಾಡುತ್ತಾರೋ ಅವರ ಜನ್ಮಾಂತರ ಪಾಪಗಳೆಲ್ಲವೂ ನಾಶವಾಗುತ್ತವೆ. ಅವರನ್ನು ನಾರಾಯಣನು ಹಿಂದೆ ಮುಂದೆ ಇದ್ದು ರಕ್ಷಿಸುತ್ತಾನೆ. ನಿರ್ಯಾಣದ ಕಾಲದಲ್ಲಿಯೂ ಬರುತ್ತಾನೆ. ನಿತ್ಯ ಪಠನದಿಂದ ಅವರಲ್ಲಿಯ ದುಷ್ಟಬುದ್ಧಿಯು ಹೋಗಿ, ಸದ್ಭಕ್ತಿ ಉಂಟಾಗುತ್ತದೆ. ಅದರಿಂದ ಅವರಿಗೆ ಸಹಜ ಸಾಕ್ಷಾತ್ಕಾರವು ದೊರೆಯುವದು. ಅವರ ಕುಲ-ಪರಿವಾರವು ಉದ್ಧಾರವಾಗುವದು. ಇದರಿಂದ ಇಹಲೋಕ ಪರಲೋಕಗಳೆರಡೂ ಸಾಧಿಸುವವು. ಈ ಮಾತು ಅತ್ಯಂತ ಸತ್ಯ. ಪರೋಪಕಾರಕ್ಕಾಗಿ ಇದನ್ನು ಹೇಳುತ್ತೇನೆ. ಈ ಪ್ರಾಸಾದಿಕ

ಮಿಠಾಯಿಯನ್ನು ಸ್ವೀಕರಿಸಿರಿ. ನಿಮ್ಮ ಸಂಸಾರಿಕ ವ್ಯಥೆ ದೂರಾಗುವದೆಂದು ಪ್ರತಿಜ್ಞೆ ಮಾಡಿಹೇಳುತ್ತೇನೆ. ನಿಮಗೆಲ್ಲ ಸಾಷ್ಟಾಂಗ ನಮಸ್ಕಾರ. ತಾಳ, ಕೌದಿಯನ್ನು ಕಳಿಸಿರುತ್ತೇನೆ. ಅದರ ಗುರುತನ್ನು ಇಟ್ಟುಕೊಳ್ಳಿರಿ. ಹೀಗೆ, ತುಕಾರಾಮರು ದೇವನೊಡನೆ ವೈಕುಂಠಕ್ಕೆ ಸದೇಹ ಹೋದರು.

೧೩.

ಸತ್ಯ ಸತ್ಯ ಜಾಣಾ ತ್ರಿವಾಚಾ ನೇಮ ಹಾ।
ಅನುಭವ ಪಹಾ ಪದೋಪದೀ ॥ ೧ ॥

ಪದೋಪದೀ ಪಹಾ ಶ್ರೀಮುಖ ಚಾಂಗಲೇ।
ಪ್ರತ್ಯಕ್ಷ ಪಾವೂಲೇ ವಿಠೋಬಾಚೀ ॥ ೨ ॥

ವಿಠೋಬಾಚೀ ಭೇಟೀ ಹರೇಲ ಬಾ ಚಿಂತಾ।
ತುಮ್ಹಾಲಾಗೀ ಆತಾ ಸಾಂಗಿತಲೇ ॥ ೩ ॥

ಸಾಂಗಿತಲೇ ಖರೇ ವಿಶ್ವಾಚಿಯಾ ಹಿತಾ।
ಅಭಂಗ ವಾಚಿತೀ ಜೇ ಕಾ ನರ ॥ ೪ ॥

ತೇ ನರ ಪಠಣೇ ಜೀವನ್ಮುಕ್ತ ಝಾಲೇ।
ಪುನ್ಹಾ ನಾಹೀ ಆಲೇ ಸಂಸಾರಾಸೀ ॥ ೫ ॥

ಸಂಸಾರ ಉಡಾಲಾ ಸಂದೇಹ ಫಿಟಲಾ।
ಪೂರ್ಣ ತೋಚಿ ಝಾಲಾ ತುಕಾ ಮ್ಹಣೇ ॥ ೬ ॥

## ರಾತ್ರಿ ಭಜನೆ

ಭಾವಾರ್ಥ: ಈ ಮಾತು ಪರಮಸತ್ಯವೆಂದು ತಿಳಿಯಿರಿ, ಹೆಜ್ಜೆಹೆಜ್ಜೆಗೂ ಇದರ ಅನುಭವವನ್ನು ಪಡೆಯಿರಿ. ಮೊದಲು ಕಾಣುವ ಶ್ರೀಮುಖವನ್ನು ಚೆನ್ನಾಗಿ ನೋಡಿರಿ. ನಂತರ ವಿಠ್ಠಲನ ಚರಣಕಮಲಗಳ ದರ್ಶನ ಪಡೆಯಿರಿ. ವಿಠ್ಠಲನ ದರ್ಶನದಿಂದ ನಿಮ್ಮ ಚಿಂತೆಯೆಲ್ಲ ಮಾಯವಾಗುವದು. ಜಗತ್ತಿನ ಕಲ್ಯಾಣಕ್ಕಾಗಿಯೂ ನಿಮಗಾಗಿಯೂ, ಈ ಹಿತದ ಮಾತುಗಳನ್ನು ಹೇಳುತ್ತಿದ್ದೇನೆ. ಯಾವ ಮನುಷ್ಯರು ಈ ಅಭಂಗ ಪಠನ ಮಾಡುತ್ತಾರೋ ಅವರಿಗೆ ಜೀವನ್ಮುಕ್ತಿಯಾಗುತ್ತದೆ. ಪುನಃ ಅವರು ಸಂಸಾರಕ್ಕೆ ಬರುವದಿಲ್ಲ. ಸಂದೇಹವು ಮಾಯವಾಗಿ, ಸಂಸಾರದಿಂದಲೂ ಮುಕ್ತರಾಗಿ ಅವರು ಬ್ರಹ್ಮನೇ ಆಗುತ್ತಾರೆ, ಎಂದು ತುಕಾರಾಮರು ಹೇಳುತ್ತಾರೆ.

### ೧೪

ಚಾರ ಕೋಟಿ ಏಕ ಲಕ್ಷಾಚಾ ಶೇವಟ।
ಚೌತೀಸ ಸಹಸ್ರ ಸ್ಪಷ್ಟ ಸಾಂಗಿತಲೇ ॥ ೧ ॥

ಸಾಂಗಿತಲೇ ಹೇ ತುಕಾ ಕಥೋನಿಯಾ ಗೇಲಾ।
ಬಾರಾ ಅಭಂಗಾಲಾ ಸೋಡೂ ನಕಾ ॥ ೨ ॥

ಸೋಡೂ ನಕಾ ತುಮ್ಹಾ ಸಾಂಗಿತಲೇ ವರ್ಮ।
ಭವಪಾಶೀ ಕರ್ಮೇ ಚುಕತೀಲ ॥ ೩ ॥

ಚುಕತೀ ಯಾತಾಯಾತೀ ವಿಠೋಬಾಚೀ ಆಣ।
ಕರಾ ಹೇ ಪಠಣ ಜೀವೇಭಾವೇ ॥ ೪ ॥

ಜೀವೇಭಾವೇ ಕರಿತಾ ಹೋಯಿೀಲ ದರ್ಶನ।
ಪ್ರತ್ಯಕ್ಷ ಸಗುಣ ತುಕಾ ಮ್ಹಣೇ ॥ ೫ ॥

ಭಾವಾರ್ಥ: ನಾಲ್ಕು ಕೋಟಿಗಳನ್ನು ಎಂದರೆ ಮನಸ್ಸಿನ ನಾಲ್ಕು ಅವಸ್ಥೆ (ಜಾಗೃತ, ಸ್ವಪ್ನ, ಸುಷುಪ್ತಿ, ತುರ್ಯಾ)ಗಳಲ್ಲಿಯೂ, ನಾಮಸ್ಮರಣೆಯ ಒಂದೇ ಗುರಿ(ಲಕ್ಷ)ಯನ್ನು ಮುಟ್ಟಿದಾಗ, ಎಂದರೆ ನಾಮಸ್ಮರಣೆಯಿಂದ ಮನುಷ್ಯ, ಸ್ವರೂಪದಲ್ಲಿ ಲೀನನಾದಾಗ "ಸಹಸ್ರದಲ ಕಮಲ"ದಿಂದ ಅಮೃತ ಸೇವನೆಯ ಅನುಭವವು ಅವನಿಗೆ ಆಗುತ್ತದೆ. ಹನ್ನೆರಡು ಅಭಂಗಗಳನ್ನು ಬಿಡಬೇಡಿರಿ. ಅದರ ರಹಸ್ಯವನ್ನು ಕೇಳಿರಿ. ಅದು ಭವಪಾಶವನ್ನು ಕಿತ್ತಿ ಒಗೆಯುತ್ತದೆ. ವಿಠ್ಠಲನ ಸ್ಮರಣೆ ಭವಯಾತನೆಯನ್ನು ದೂರಮಾಡುತ್ತದೆ. ಭಕ್ತಿಭಾವದಿಂದ ಪಠನ ಮಾಡಿದರೆ ವಿಠ್ಠಲನು ತಾನೇ ಸ್ವತಃ ಪ್ರತ್ಯಕ್ಷ ದರ್ಶನ ಕೊಡುತ್ತಾನೆ ಎಂದು ತುಕಾರಾಮರು ಹೇಳುತ್ತಾರೆ.

೧೫

ವೇದಾಚೇ ಅಭಂಗ ಕೇಲೇ ಶ್ರುತಿಪರ।
ದ್ವಾದಶ ಸಹಸ್ರ ಸಂಹಿತೇಚೇ ॥ ೧ ॥

ನಿಘಂಟ ನಿರುಕ್ತ ಆಣಿ ಬ್ರಹ್ಮಸೂತ್ರ।
ಅವತಾರ ಸಹಸ್ರ ಉಪಗ್ರಂಥ ॥ ೨ ॥

## ರಾತ್ರಿ ಭಜನೆ

ಅಭಂಗ ಹೇ ಕೋಟೀ ಭಕ್ತಿಪರ ಝಾಲೇ।
ಜ್ಞಾನಪರ ಕೇಲೇ ತಿತುಕೇಚೀ ॥ ೩ ॥

ಪಂಚಾಹತ್ತರ ಲಕ್ಷ ವೈರಾಗ್ಯ ವರ್ಣಲೇ।
ನಾಮ ತೇ ಗಾಯಿಲೇ ತಿತುಕೇಚೀ ॥ ೪ ॥

ಸಾತ ಲಕ್ಷ ಕೇಲಾ ಬೋಧ ಯಾ ಜಗಾಸೀ।
ವರ್ಣಲೇ ರೂಪಾಸೀ ತಿತುಕೇಚೀ ॥ ೫ ॥

ತೀಸ ಲಕ್ಷ ಕೇಲೀ ದೇವಾಸಿ ಕರುಣಾ।
ಕರ್ಮಕಾಂಡ ಜಾಣಾ ಏಕ ಲಕ್ಷ ॥ ೬ ॥

ದ್ವಾದಶಸಹಸ್ರ ಸ್ವಾತ್ಮಾನುಭವೀ।
ಏವಂ ಜಾಣಾ ಸರ್ವ ಸಂಖ್ಯಾ ಐಶೀ ॥ ೭ ॥

ಐಸೇ ಹೇ ಅಭಂಗ ಝಾಲೇಸೇ ಭೂತಳೀ।
ಪಾಚ ಅಂತರಾಳೀ ಪತ್ರಿಕೇಚೀ ॥ ೮ ॥

ಚೌತೀಸ ಸಹಸ್ರ ಲಕ್ಷ ಏಕ ಕೋಟಿ ಪಾಚ।
ಸಾಂಗೋನಿಯಾ ಸಾಚ ಗೇಲಾ ತುಕಾ ॥ ೯ ॥

ಭಾವಾರ್ಥ: ತುಕಾರಾಮರು ಮಾಡಿದ ಅಭಂಗಗಳ ಲೆಕ್ಕ ಹೀಗಿದೆ. ವೇದ, ಶ್ರುತಿ ಮತ್ತು ಸಂಹಿತೆ ಪರವಾಗಿ ಹನ್ನೆರಡು ಸಾವಿರ ಅಭಂಗಗಳು. ನಿಘಂಟು,

ಬ್ರಹ್ಮಸೂತ್ರ, ನಿರುಕ್ತ, ಉಪಗ್ರಂಥಗಳನ್ನು ಕುರಿತು ಹತ್ತು ಸಾವಿರ ಅಭಂಗಗಳು. ಭಕ್ತಿಪರ ಅಭಂಗಗಳು ಒಂದು ಕೋಟಿ. ಜ್ಞಾನಪರ ಅಭಂಗಗಳೂ ಅಷ್ಟೇ. ವೈರಾಗ್ಯಪೂರ್ಣವಾದವು ಎಪ್ಪತ್ತೈದು ಲಕ್ಷ. ನಾಮದ ಮೇಲಿನ ಅಭಂಗಗಳೂ ಅಷ್ಟೇ. ಜಗತ್ತಿಗೆ ಬೋಧ ಮಾಡಿದವೂ ಸಗುಣರೂಪವನ್ನು ವರ್ಣಿಸಿದವೂ ಅರವತ್ತು ಲಕ್ಷ. ಮೂವತ್ತು ಲಕ್ಷ ದೇವರ ಕರುಣೆಯನ್ನು ಕುರಿತು. ಒಂದು ಲಕ್ಷ ಕರ್ಮಕಾಂಡಕ್ಕೆ ಸೇರಿದವು. ಹನ್ನೆರಡು ಸಾವಿರ ಸ್ವಾತ್ಮಾನುಭವಕ್ಕೆ ಸಂಬಂಧಿಸಿದವು. ಹೀಗೆ ಎಲ್ಲ ಸೇರಿ ಒಟ್ಟು ಐದು ಕೋಟಿ, ಒಂದು ಲಕ್ಷ, ಮೂವತ್ನಾಲ್ಕು ಸಹಸ್ರ ಎಂದು ತುಕಾರಾಮರು ಹೇಳಿ ನಿಜಧಾಮಕ್ಕೆ ಹೋದರು.

೧೬

ಸಗುಣ ಹೇ ಬ್ರಹ್ಮ ವಿಠ್ಠಲಚಿ ಬೋಲೇ।
ಐಕ ಪಾ ವಹಿಲೇ ತುಕಾರಾಮಾ ॥ ೧ ॥

ತುಕಾರಾಮಾ ತುವಾ ಕೇಲೇ ಜೇ ಅಭಂಗ।
ಕರಿತೀ ಜೇ ಶಾ ಜಗೀ ನಿತ್ಯ ಪಾಠ ॥ ೨ ॥

ಜಗೀ ಪಾಠ ಕರಿತಾ ಆವಡೀ ಸದ್ಭಾವೇ।
ವಿಪತ್ತಿ ನ ಹೋಯ ತ್ಯಾ ಪ್ರಾಣ್ಯಾಸೀ ॥ ೩ ॥

ಪ್ರಾಣ್ಯಾಚೇ ಕಲ್ಯಾಣ ಹೋಯೀಲ ಬಾ ಪಾಹೇ।
ಭಾವೇ ವಾಚಿತಾ ಜೇ ನಿತ್ಯನೇಮೇ ॥ ೪ ॥

ನೇಮೇ ಸಂಕಷ್ಟಾಸೀ ಕರೀ ಆಕರಾ ಪಾಠ।
ವಿಘ್ನ ತ್ಯಾಚೇ ಸ್ವಪ್ನ ದೂರ ಹೋಯ ॥ ೫ ॥

ದೂರ ಹೋಯ ವಿಘ್ನ ವಿಠ್ಠಲ ಮ್ಹಣೇ ತುಕಯಾ।
ಶೇವಟೀ ನಿಜ ಠಾಯಾ ನೇಯೀನ ಮೀ ॥ ೬ ॥

ಭಾವಾರ್ಥ: ಸಗುಣ ಬ್ರಹ್ಮನೆಂದರೆ ವಿಠ್ಠಲನೇ. ತುಕಾರಾಮನೇ, ನೀನು ಮಾಡಿದ ಅಭಂಗಗಳನ್ನು ಯಾರು ನಿತ್ಯ ಪಠನ ಮಾಡುತ್ತಾರೆಯೋ, ಅವರಲ್ಲಿ ಸದ್ಭಾವವು ಉದಯಿಸುವುದು. ಅದರಿಂದ ಸಂಕಟಗಳು ದೂರಾಗುವವು. ಸರ್ವರ ಕಲ್ಯಾಣವಾಗುವುದು. ಸಂಕಷ್ಟ ದಿನಗಳಲ್ಲಿ ಹನ್ನೊಂದು ಸಲ ಅಭಂಗ ಪಠನ ಮಾಡಿದರೆ ಖಂಡಿತವಾಗಿ ವಿಘ್ನಗಳು ದೂರಾಗುವವು. ಕೊನೆಗ ಅವರನ್ನು ನನ್ನ ಸ್ಥಾನಕ್ಕೆ ಕರೆದೊಯ್ಯುವೆನು ಎಂದು ವಿಠ್ಠಲನು ತುಕಾರಾಮರಿ ಹೇಳುತ್ತಾನೆ.

## ೧೬

ಗುರುಚರಣೀ ಠೇವಿತಿ ಭಾವ।
ಆಪೇಆಪ ಭೇಟೇ ದೇವ ॥ ೧ ॥

ಮ್ಹಣೂನೀ ಗುರೂಸೀ ಭಜಾವೇ।
ರೂಪ ಧ್ಯಾನಾಸೀ ಆಣಾವೇ ॥ ೨ ॥

ದೇವ ಗುರೂಪಾಶೀ ಆಹೇ।
ವಾರಂವಾರ ಸಾಂಗೂ ಕಾಯೇ ॥ ೩ ॥

ತುಕಾ ಮ್ಹಣೇ ಗುರುಭಜನೀ।
ದೇವ ಭೇಟೇ ಜನೀ ವನೀ ॥ ೪ ॥

**ಭಾವಾರ್ಥ**ಃ ಗುರುಚರಣದಲ್ಲಿ ಭಕ್ತಿ-ಶ್ರದ್ಧೆ ಇಟ್ಟರೆ ದೇವನು ತಾನಾಗಿಯೇ ಬಂದು ಭೆಟ್ಟಿಯಾಗುತ್ತಾನೆ. ಆದ್ದರಿಂದ ಗುರುವಿನ ರೂಪವನ್ನು ಧ್ಯಾನಿಸಿ ಭಜನೆ ಮಾಡಬೇಕು. ದೇವನು ಗುರುವಿನಲ್ಲಿ ಇರುತ್ತಾನೆಂದು ಎಷ್ಟು ಸಲ ಹೇಳಲಿ? ಗುರುಭಜನೆ ಮಾಡುವುದರಿಂದ ದೇವನು (ಪ್ರಪಂಚದಲ್ಲಿಯೂ, ಅರಣ್ಯದಲ್ಲಿಯೂ) ಎಲ್ಲೆಡೆಯಲ್ಲಿಯೂ ಕಾಣುತ್ತಾನೆಂದು ತುಕಾರಾಮರು ಹೇಳುತ್ತಾರೆ.

## ೧೮

ಜಯಜಯ ಗುರುಮಹಾರಾಜ ಗುರು (೫ ಸಲ)
ಜಯಜಯ ಪರಬ್ರಹ್ಮ ಸದ್ಗುರು (೧ ಸಲ)
ಜಯಗುರು ಜಯಗುರು ಜಯಗುರು ಜಯಗುರು
ಜಯಗುರು ಜಯಗುರು ಜಯಗುರು ಜಯಗುರು

## ರಾತ್ರಿ ಭಜನೆ

### ೧೯

ಸಬ ಸಂತನ ಕೀ ಜಯ।
ಬಾಲಗೋಪಾಲ ಕೀ ಜಯ।
ತುಕಾರಾಮಮಹಾರಾಜಕೀ ಜಯ!
ಜ್ಞಾನೋಬಾಮಹಾರಾಜಕೀ ಜಯ।
ರುಕ್ಮಾಂಗದಮಹಾರಾಜಕೀ ಜಯ!
ಕೃಷ್ಣದ್ವೈಪಾಯನಮಹಾರಾಜಕೀ ಜಯ।
ರಾಮದಾಸಮಹಾರಾಜಕೀ ಜಯ!
ಶ್ರೀ ಗುರುಲಿಂಗಜಂಗಮಮಹಾರಾಜಕೀ ಜಯ!
ಶ್ರೀ ರಘುನಾಥಪ್ರಿಯಮಹಾರಾಜಕೀ ಜಯ।
ಶ್ರೀ ಭಾವೂಸಾಹೇಬಮಹಾರಾಜಕೀ ಜಯ।
ಶ್ರೀ ಅಂಬೂರಾವಮಹಾರಾಜಕೀ ಜಯ!
ಶ್ರೀ ಗುರುದೇವ ರಾಮಭಾವೂಮಹಾರಾಜಕೀ ಜಯ।
ಶ್ರೀ ಗುರುದೇವ ದತ್ತ ದತ್ತ ದತ್ತ।

### ೨೦

ರಾಮಾಶ್ರಮ ಸದ್ಗುರುರಾಜ।
ಗುರುಲಿಂಗಜಂಗಮಮಹಾರಾಜ॥ (೨ ಸಲ)

# ನಿತ್ಯನೇಮಾವಲಿ

ಗುರುಲಿಂಗಜಂಗಮಮಹಾರಾಜ (೨ ಸಲ)
ರಾಮಾಶ್ರಮ ಸದ್ಗುರುರಾಜ।
ಗುರುಲಿಂಗಜಂಗಮಮಹಾರಾಜ।। (೨ ಸಲ)
ಇಂಚಗೇರಿವಾಸೀ ಸದ್ಗುರುರಾಜ।
ಉಮದೀ ಭಾವೂಸಾಹೇಬಮಹಾರಾಜ (೨ ಸಲ)
ಉಮದೀ ಭಾವೂಸಾಹೇಬಮಹಾರಾಜ (೨ ಸಲ)
ಇಂಚಗೇರಿವಾಸೀ ಸದ್ಗುರುರಾಜ।
ಉಮದೀ ಭಾವೂಸಾಹೇಬಮಹಾರಾಜ।। (೨ ಸಲ)
ಇಂಚಗೇರಿವಾಸೀ ಸದ್ಗುರುರಾಜ।
ಜಿಗಜೀವಣೀ ಅಂಬುರಾವಮಹಾರಾಜ।। (೨ ಸಲ)
ಜಿಗಜೀವಣೀ ಅಂಬುರಾವಮಹಾರಾಜ (೨ ಸಲ)
ಇಂಚಗೇರಿವಾಸೀ ಸದ್ಗುರುರಾಜ।
ಜಿಗಜೀವಣೀ ಅಂಬೂರಾವಮಹಾರಾಜ।। (೨ ಸಲ)
ನಿಂಬಾಳವಾಸೀ ಸದ್ಗುರುರಾಜ
ಗುರುದೇವ ರಾಮಭಾವೂಮಹಾರಾಜ (೨ ಸಲ)
ಗುರುದೇವ ರಾಮಭಾವೂಮಹಾರಾಜ (೨ ಸಲ)
ನಿಂಬಾಳವಾಸೀ ಸದ್ಗುರುರಾಜ
ಗುರುದೇವ ರಾಮಭಾವೂಮಹಾರಾಜ (೨ ಸಲ)
(೧೮ ರಿಂದ ೨೦ರವರೆಗೆ ಜಯಘೋಷವಿರುತ್ತದೆ)

## ರಾತ್ರಿ ಭಜನೆ

### ೨೧

ಆಕಲ್ಪ ಆಯುಷ್ಯ ವ್ಹಾವೇ ತಯಾ ಕುಳಾ।
ಮಾಝಿಯಾ ಸಕಳಾ ಹರಿಚ್ಯಾ ದಾಸಾ ॥ ೧ ॥

ಕಲ್ಪನೇಚೀ ಬಾಧಾ ನ ಹೋ ಕೋಣೇ ಕಾಳೀ।
ಹೀ ಸಂತ ಮಂಡಳೀ ಸುಖೀ ಅಸೋ ॥ ೨ ॥

ಅಹಂಕಾರಾಚಾ ವಾರಾ ನ ಲಾಗೋ ರಾಜಸಾ।
ಮಾಝ್ಯಾ ವಿಷ್ಣುದಾಸಾ ಭಾವಿಕಾಸೀ ॥ ೩ ॥

ಶರೀರ ಪ್ರಾಣಾಸೀ ಕರೀನ ಕುರವಂಡೀ।
ಕ್ಷಣ ಏಕ ನ ಸೋಡೀ ಸಂಗ ತ್ಯಾಚಾ ॥ ೪ ॥

ನಾಮಾ ಮ್ಹಣೇ ತಯಾ ಅಸಾವೇ ಕಲ್ಯಾಣ।
ಜ್ಯಾ ಮುಖೀ ನಿಧಾನ ಪಾಂಡುರಂಗ ॥ ೫ ॥

ವಿಠ್ಠಲ ರಖುಮಾಯೀ ವಿಠೋಬಾ ರಖುಮಾಯೀ।
ವಿಠ್ಠಲ ವಿಠ್ಠಲ ವಿಠ್ಠಲ।

ಭಾವಾರ್ಥ: ನನ್ನ ಎಲ್ಲ ಹರಿದಾಸರಿಗೂ, ಅವರ ಕುಲಕ್ಕೂ ಸಹ ದೇವರು ದೀರ್ಘ ಆಯುಷ್ಯವನ್ನು ದಯಪಾಲಿಸಲಿ. ಯಾವಕಾಲಕ್ಕೂ ವಿಷಯಕಲ್ಪನೆಯ ಬಾಧೆ ಅವರಿಗಾಗದಿರಲಿ. ಸಂತಮಂಡಳಿ ಸುಖವಾಗಿರಲಿ. ಭಾವಿಕರಾದಂಥ

ವಿಷ್ಣುದಾಸರಿಗೆ ಅಹಂಕಾರದ ಸೋಂಕು ಆಗದಿರಲಿ. ಇಂಥವರ ಪಾದಕ್ಕೆ ನನ್ನ ಶರೀರ ಮತ್ತು ಪ್ರಾಣಗಳನ್ನು ನಿವಾಳಿಸಿ ಚೆಲ್ಲುತ್ತೇನೆ (ಎಂದರೆ ಪರೋಪಕಾರಕ್ಕಾಗಿ ಮೀಸಲಿಡುತ್ತೇನೆ). ಇಂಥವರ ಸಂಗವನ್ನು ಕ್ಷಣಮಾತ್ರವೂ ಬಿಡುವುದಿಲ್ಲ. ಯಾರು ಪಾಂಡುರಂಗನ ನಾಮಸ್ಮರಣೆ ಮಾಡುವರೋ ಅಂಥ ಸಾಧಕರಿಗೆ ಕಲ್ಯಾಣವಾಗಲಿ ಎಂದು ನಾಮದೇವರು ಹೇಳುತ್ತಾರೆ.

೨೨

ಮೀ ತವ ಅನ್ಯಾಯೀ ಅಪರಾಧೀ।
ಕರ್ಮಹೀನ ಮತಿಮಂದಬುದ್ಧಿ ॥ ೧ ॥

ತುಜ ಮ್ಯಾ ಆಠವಿಲೇ ನಾಹೀ ಕಧೀ।
ವಾಚೇ ಕೃಪಾನಿಧಿ ಮಾಯಬಾಪಾ ॥ ೨ ॥

ನಾಹೀ ಐಕಿಲೇ ಗಾಯಿಲೇ ಗೀತ।
ಧರಿಲೀ ಲಾಜ ಸಾಂಡಿಲೇ ಹಿತ ॥ ೩ ॥

ನಾವಡೇ ಪುರಾಣ ಬೈಸಲೇ ಸಂತ।
ಕೇಲೀ ಬಹುತ ಪರನಿಂದಾ ॥ ೪ ॥

ಕೇಲಾ ನಾಹೀ ಕರವಿಲಾ ನಾಹೀ ಪರೋಪಕಾರ।
ನಾಹೀ ದಯಾ ಆಲೀ ಪೀಡಿತಾ ಪರ ॥ ೫ ॥

ಕರೂ ನಯೇ ತೋ ಕೇಲಾ ವ್ಯಾಪಾರ।
ಉತರೀ ಪಾರ **ತುಕಾ** ಮ್ಹಣೇ ॥ ೬ ॥

ಜ್ಞಾನೋಬಾ ತುಕಾರಾಮ ಜ್ಞಾನೋಬಾ ತುಕಾರಾಮ।
ತುಕಾರಾಮ ತುಕಾರಾಮ ತುಕಾರಾಮ।

ಭಾವಾರ್ಥ: ನಾನು ಕರ್ಮಹೀನನು, ಮಂದಮತಿಯು, ಅಪರಾಧಿಯು; ಅನ್ಯಾಯ ಮಾಡಿದ್ದೇನೆ. ನಿನ್ನನ್ನು ಎಂದೂ ನೆನೆಯಲಿಲ್ಲ. ಕೃಪಾನಿಧಿ ತಂದೆಯೇ, ಎಂದೂ ಕೀರ್ತನೆ ಕೇಳಲಿಲ್ಲ, ಸ್ವತಃ ಕೀರ್ತನೆ ಮಾಡಲಿಲ್ಲ; ಲಜ್ಜೆಯಿಂದ ವರ್ತಿಸಿದೆ, ಹಿತವನ್ನು ಸಾಧಿಸಲಿಲ್ಲ; ಪುರಾಣ ಕೇಳಲಿಲ್ಲ, ಸಂತರ ಸಂಗ ಮಾಡಲಿಲ್ಲ, ಪರನಿಂದೆಯನ್ನು ಮಾಡಿದೆ; ಪರೋಪಕಾರ ಮಾಡಲಿಲ್ಲ, ಯಾರಿಂದಲೂ ಮಾಡಿಸಲಿಲ್ಲ, ಪೀಡಿತ ಜನರ ಬಗ್ಗೆ ಕನಿಕರ ಪಡಲಿಲ್ಲ; ಮಾಡಬಾರದ ಎಲ್ಲ ವ್ಯಾಪಾರ ಮಾಡಿಬಿಟ್ಟೆ, ಉದ್ಧಾರ ಮಾಡು ಎಂದು ತುಕಾರಾಮರು ಹೇಳುತ್ತಾರೆ.

ಜ್ಞಾನದೇವ ತುಕಾರಾಮ, ಜ್ಞಾನದೇವ ತುಕಾರಾಮ, ಜ್ಞಾನದೇವ ತುಕಾರಾಮ.

### ೨೩

ಅಹೋ ಬೋಲಿಲೇ ಲೇಕರೂ।
ವೇಡೇವಾಕುಡೇ ಉತ್ತರೂ ॥ ೧ ॥

ಕ್ಷಮಾ ಕರಾ ಅಪರಾಧ।
ಮಹಾರಾಜ ತುಮ್ಹೀ ಸಿದ್ಧ ॥ ಧೃ ॥
ಅಹೋ ನಾಹೀ ವಿಚಾರಿಲಾ।
ಅಧಿಕಾರ ಮ್ಯಾ ಆಪುಲಾ ॥ ೨ ॥
ತುಕಾ ಮ್ಹಣೇ ಜ್ಞಾನೇಶ್ವರಾ।
ರಾಖಾ ಪಾಯಾಪೇ ಕಿಂಕರಾ ॥ ೩ ॥

ಭಾವಾರ್ಥ: ಏನೇನೋ ಮಾತನಾಡಿ ಬಿಟ್ಟೆ. ಮಹಾರಾಜರೇ, ಕ್ಷಮಿಸಿರಿ. ನೀವು ಸಿದ್ಧಪುರುಷರು. ನಿಮ್ಮ ಅಧಿಕಾರವನ್ನು ತಿಳಿಯದೆ ಮಾತನಾಡಿ ಬಿಟ್ಟೆ. ನಿಮ್ಮ ಪಾದಸೇವಕನನ್ನು ಚರಣ ಸನ್ನಿಧಿಯಲ್ಲಿ ಇಟ್ಟುಕೊಂಡು ಕಾಪಾಡಿರಿ, ಎಂದು ತುಕಾರಾಮರು ಜ್ಞಾನೇಶ್ವರಮಹಾರಾಜರಿಗೆ ಕೇಳಿಕೊಳ್ಳುತ್ತಾರೆ.

೨೪

ಪಾಹೇ ಪ್ರಸಾದಾಚೀ ವಾಟ।
ದ್ಯಾವೇ ಧುವೋನಿಯಾ ತಾಟ ॥ ೧ ॥
ಶೇಷ ಘೇವೂನಿ ಜಾಯೀನ।
ತುಮಚೇ ಝಾಲಿಯಾ ಭೋಜನ ॥ ೨ ॥
ಅಹೋ ಝಾಲೋ ಏಕಸವಾ।
ತುಮ್ಹಾ ಆಡ ನ ಯೇ ದೇವಾ ॥ ೩ ॥

ತುಕಾ ಮ್ಹಣೇ ಚಿತ್ತ।
ಕರೂನಿ ರಾಹಿಲೋ ನಿವಾಂತ ॥ ೪ ॥

ಭಾವಾರ್ಥ: ಪ್ರಸಾದದ ದಾರೀ ಕಾಯುತ್ತೇನೆ. ಸ್ವಚ್ಛವಾದ ತಟ್ಟೆಯಲ್ಲಿ ನಿಮ್ಮ ಭೋಜನವಾದ ನಂತರ, ಉಳಿದ ಶೇಷಭಾಗವನ್ನು ತೆಗೆದುಕೊಂಡು ಹೋಗುತ್ತೇನೆ. (ಇಲ್ಲಿ ಊಟವೆಂದರೆ ಆಹಾರ ಭೋಜನವಲ್ಲ. ಶೇಷಭಾಗವೆಂದರೆ ಉಂಡು ಬಿಟ್ಟದ್ದಲ್ಲ. ಆತ್ಮಾನಂದದ ಒಂದು ಅಂಶ). ನಿಮ್ಮ ನಿತ್ಯನೇಮ ಸಾಧನೆಗೆ ಅಡ್ಡ ಬರುವುದಿಲ್ಲ. (ಸಾಕ್ಷಾತ್ಕಾರದ ಆನಂದದಿಂದ ಸಂತರ ಹೊಟ್ಟೆ ತುಂಬಿದ ನಂತರವೇ ಅದನ್ನು ಅವರು ಇತರರಿಗೆ ಹಂಚುತ್ತಾರೆ.) ಹೀಗೆ ತುಕಾರಾಮಮಹಾರಾಜರು ಶಾಂತಮನಸ್ಸಿನಿಂದ ಹೇಳುತ್ತಾರೆ.

## ವಿಡಾ (ವೀಳ್ಯ)

### ೧

ವಿಡಾ ಘ್ಯಾಹೋ ನಾರಾಯಣಾ। ಕೃಷ್ಣಾ ಜಗಜ್ಜೀವನಾ।
ವಿನವಿತೇ ರಖುಮಾಯೀ। ದಾಸೀ ಹೋಯೀನ ಮೀ ಕಾನ್ಹಾ ॥ ಧೃ ॥

ಶಾಂತಿ ಹೇ ನಾಗವೇಲೀ। ಪಾನೇ ಘೇವೂನಿಯಾ ಕರೀ।
ಮೀಪಣ ಜಾಳೂನಿಯಾ। ಚುನಾ ಲಾವಿಯೇಲಾ ವರೀ ॥ ೧ ॥

ವಾಸನಾ ಫೋಡೂನಿಯಾ। ಚೂರ್ಣ ಕೇಲೀ ಸುಪಾರೀ।
ಭಾವಾರ್ಥ ಕಾಪುರಾನೇ। ಘೋಳಿಯೇಲೀ ನಿರ್ಧಾರೀ ॥ ೨ ॥

ವಿವೇಕ ಹಾ ಕಾತರಂಗ। ರಂಗೀ ರಂಗಲಾ ಸುರಂಗ।
ವೈರಾಗ್ಯ ಜಾಯಫಳ। ಮಿಳವಿಲೇ ಸಕಳ ॥ ೩ ॥

ದಯಾ ಹೀ ಜಾಯಪತ್ರೀ। ಕ್ಷಮಾ ಲವಂಗಾ ಆಣಿಲ್ಯಾ।
ಸುಬುದ್ಧೀ ವೇಲದೋಡೇ। ಶಿವರಾಮೀ ಅರ್ಪಿಯೇಲೇ ॥ ೪ ॥

ಭಾವಾರ್ಥ: ಜಗಜ್ಜೀವನನಾದ ಕೃಷ್ಣಾ, ನಾರಾಯಣಾ, ವೀಳ್ಯವನ್ನು ತೆಗೆದುಕೋ ಎಂದು ರಖುಮಾಯಿ ಸೇವೆಗೆ ಸಿದ್ಧಳಾಗಿ ಬೇಡಿಕೊಳ್ಳುತ್ತಾಳೆ. ಶಾಂತಿ ಎಂಬ ವೀಳ್ಯದೆಲೆಯನ್ನು ಕೈಯಲ್ಲಿ ಹಿಡಿದು, ಅಹಂಕಾರವನ್ನುಸುಟ್ಟು ಮಾಡಿದ ಸುಣ್ಣವನ್ನು ಎಲೆಗೆ ಹಚ್ಚಿ, ಮನೋವಿಕಾರಗಳನ್ನು ಕುಟ್ಟಿ ಅಡಿಕೆ ಪುಡಿ ಮಾಡಿ, ಸದ್ಭಾವವೆಂಬ ಕರ್ಪೂರ ಹಾಕಿ, ಬಣ್ಣ ಬರುವಂತೆ ವಿವೇಕದ ಕಾಚನ್ನು ಹಾಕಿ, ವೈರಾಗ್ಯವೆಂಬ ಜಾಜೀಕಾಯಿ ಕೂಡಿಸಿ, ದಯೆಯೆಂಬ ಪತ್ರಿಯನ್ನು ಇಟ್ಟು, ಕ್ಷಮೆ ಎಂಬ ಲವಂಗ ಹಾಕಿ, ಸುಬುದ್ಧಿಯೆಂಬ ಯಾಲಕ್ಕಿ ಬೆರಸಿ, ವೀಳ್ಯ ತಯಾರಿಸಿದ್ದೇನೆ. ಶಿವರಾಮನಿಗೆ ಇಂತಹ ವೀಳ್ಯವು ಅರ್ಪಿಸಲ್ಪಟ್ಟಿತು.

೨

ವಿಡಾ ಘೇಯೀ ನರಹರಿರಾಯಾ। ಧರುನಿ ಮಾನವಾಚೀ ಕಾಯಾ।
ಯತಿವೇಷ ಘೇವುನಿಯಾ। ವಸಸೀ ದೀನಾಸೀ ತಾರಾಯಾ ॥ ಧೃ ॥

## ವೀಳ್ಯ

ಜ್ಞಾನ ಹೇ ಪೂಗೀಫಳ। ಭಕ್ತಿ ನಾಗವಲ್ಲೀ ದಳ।
ವೈರಾಗ್ಯ ಚೂರ್ಣ ವಿಮಳ। ಲವಂಗಾ ಸತ್ಕ್ರಿಯಾ ಸಕಳ ॥ ೧ ॥
ಪ್ರೇಮರಂಗೀ ಜೈಸಾ ಕಾತ। ವೇಲಾ ಅಷ್ಟಭಾವ ಸಹಿತ।
ಜಾಯಫಳ ಕ್ರೋಧರಹಿತ। ಪತ್ರೀ ಸರ್ವಭೂತ-ಹಿತ ॥ ೨ ॥
ಖೋಬರೇ ಹೇಚಿ ಕ್ಷಮಾ। ಕಾಢುನಿ ದ್ವೈತಾಚಾ ಬದಾಮಾ।
ಮನೋಜಾಚಾ ವರ್ಖ ಹೇಮಾ। ಕಾಪುರ ಹಾ ಶಾಂತಿ ನಾಮಾ
॥ ೩ ॥
ಕಸ್ತುರೀ ನಿರಹಂಕಾರ। ಕೋಠೇ ನ ಮಿಳತೀ ಹೇ ಉಪಚಾರ।
ಭೀಮಪುತ್ರ ಯಾಸ್ತವ ಘಾರ। ಸತ್ವರ ದೇಯೀ ವಾರಂವಾರ
॥ ೪ ॥

ಭಾವಾರ್ಥ: ನರಹರಿ ರಾಯಾ, ನೀನು ಮಾನವ ದೇಹ ಪಡೆದು, ಯತಿವೇಷ ಧಾರಣ ಮಾಡಿ ದೀನರ ಉದ್ಧಾರಕ್ಕಾಗಿ ಬಂದಿರುವಿ. ವೀಳ್ಯವನ್ನು ಸ್ವೀಕರಿಸು. ಜ್ಞಾನವೇ ಅಡಿಕೆ, ಭಕ್ತಿಯೇ ವೀಳ್ಯದೆಲೆ, ವೈರಾಗ್ಯವೇ ಸುಣ್ಣ, ಪೂರ್ಣ ಸತ್ಕ್ರಿಯಗಳೇ ಲವಂಗ, ನಿರ್ಮಲ ಪ್ರೇಮವೆಂದರೆ ಬಣ್ಣ ಕೊಡುವ ಕಾಚು, ಅಷ್ಟಭಾವವೇ ಯಾಲಕ್ಕಿ, ಕ್ರೋಧರಹಿತ ಮನಸ್ಸೇ ಜಾಜೀಕಾಯಿ, ಸರ್ವಭೂತ ಮಾತ್ರರಲ್ಲಿ ದಯೆಯೇ ಪತ್ರಿ, ಕ್ಷಮೆಯೇ ಖೊಬ್ಬರಿ, ಬದಾಮ ಎಂಬ ದ್ವೈತಭಾವವನ್ನು ತೆಗೆದುಹಾಕಿ, ಮನೋನಿಗ್ರಹವೆಂಬ ಬಂಗಾರದ ತೆಳುವಾದ ಹೊದಿಕೆಯಿಂದ ಶಾಂತಿಯೆಂಬ ಪಚ್ಚಕಪ್ಪುರ ಹಾಕಿ,

ನಿರಹಂಕಾರವೆಂಬ ಕಸ್ತೂರಿ ಬೆರೆಸಿ, ಅಪರೂಪವಾಗಿ ಹೀಗೆ ತಯಾರಿಸಿದ ತಾಂಬೂಲವನ್ನು ಸ್ವೀಕಾರ ಮಾಡು ಎಂದು ಭೀಮಪುತ್ರನು ಹೇಳುತ್ತಾನೆ.

೩

ಮಾಡೋ ಪರಮೇಶ್ವರ ಗುರುಧ್ಯಾನಾ। ಬಿಡದಿರುವದು ಭಜನಾ।
ನೋಡೋ ನೀ ನಿನ್ನೊಳು ನಿಜಖೂನಾ। ಪೂರ್ಣೈಕ್ಯದ ಜ್ಞಾನಾ ॥ ೧ ॥

ಅಪರೂಪದ ನರತನುವಿದು ನೋಡೋ। ಸಡಗರದಾ ಪಾಡೋ।
ಅಪಹಾಸ್ಯವ ಮಾಡದೆ ನೀ ಕೂಡೋ। ಘನಚಿನ್ಮಯಗೂಡೋ ॥ ೨ ॥

ಅಗ್ನೀಚಕ್ರದ ಬಳಿಯಲ್ಲಿ। ಎರಡು ಕಮಲದಲ್ಲಿ।
ಪ್ರಾಜ್ಞಾ ಝಗಿಝಗಿಸುವ ಬೆಳಕಲ್ಲಿ। ತಿಳಿ ನಿನ್ನೊಳಗಿಲ್ಲಿ ॥ ೩ ॥

ಮೇಲಿನ ಸ್ಥಾನದ ಸಹಸ್ರಾರಾ। ಗುರುತತ್ತ್ವದಪೂರಾ।
ಪೇಳಲಳವಲ್ಲದ ಸುಖಸಾರಾ। ಶಂಕರಪದವಿವರಾ। ಭೀಮಾ ॥ ೪ ॥

(ಆರತಿಯ ಮುಂಚೆ ಮಾಡುವ ಪ್ರಾರ್ಥನೆ)

ಹೇಚಿ ದಾನ ದೇಗಾ ದೇವಾ। ತುಝಾ ವಿಸರ ನ ವ್ಹಾವಾ॥
ಗೂಣ ಗಾಯೀನ ಆವಡೀ। ಹೇಚಿ ಮಾಝೀ ಸರ್ವ ಗೋಡೀ॥
ನ ಲಗೇ ಮುಕ್ತಿ ಧನಸಂಪದಾ। ಸಂತಸಂಗ ದೇಯೀ ಸದಾ॥
ತುಕಾ ಮ್ಹಣೇ ಗರ್ಭವಾಸೀ। ಸುಖೇ ಘಾಲಾವೇ ಆಮ್ಹಾಸೀ॥

ಭಾವಾರ್ಥ: ನಿನ್ನ ವಿಸ್ಮರಣೆಯಾಗದಂತೆ ಕೃಪೆ ಮಾಡು ದೇವಾ. ನಿನ್ನ ಗುಣಗಾನ ಮಾಡುವವದರಲ್ಲಿಯೇ ನನಗೆ ಎಲ್ಲದರಕ್ಕಿಂತ ಹೆಚ್ಚಿನ ಪ್ರೀತಿ. ಧನ-ಸಂಪತ್ತು, ಮುಕ್ತಿ ಬೇಕಾಗಿಲ್ಲ. ಯಾವಾಗಲೂ ಸಂತರಸಂಗ ಲಭಿಸಲಿ. ಇಷ್ಟೆಲ್ಲ ದಾನ ಕೊಡುವುದಾದರೆ ನಮಗೆ ಸುಖವಾಗಿ ಜನ್ಮಕ್ಕೆ ಹಾಕು, ಎಂದು ತುಕಾರಾಮರು ಪ್ರಾರ್ಥಿಸುತ್ತಾರೆ.

# ಆರತಿಗಳು

## (೧)

ಜಯ ಜಯಾ ದಾಸಬೋಧಾ ಗ್ರಂಥರಾಜಾ ಪ್ರಸಿದ್ಧಾ। ಆರತೀ ವೋವಾಳೀನ ವಿಮಳಜ್ಞಾನ ಬಾಳಬೋಧಾ ।। ಧೃ ।। ವೇದಾಂತಸಮ್ಮತೀಚಾ ಕಾವ್ಯಸಿಂಧು ಭರಲಾ। ಶ್ರುತಿಶಾಸ್ತ್ರ ಗ್ರಂಥಗೀತಾ ಸಾಕ್ಷಸಂಗಮ ಕೇಲಾ। ಮಹಾನುಭಾವ ಸಂತಜನೀ ಅನುಭವ ಚಾಖಿಲಾ। ಅಜ್ಞಾನ ಜಡಜೀವಾ ಮಾರ್ಗ ಸುಗಮ ಝಾಲಾ ।। ೧ ।। ನವವಿಧಾ ಭಕ್ತಿಪಂಥೇ ರಾಮರೂಪ ಅನುಭವೀ। ಚಾತುರ್ಯನಿಧಿ ಮೋತಾ ಮಾಯಾಚಕ್ರ ಉಗವೀ। ಹರಿಹರ ಹೃದಯೀಂಚೇ ಗುಹ್ಯ ಪ್ರಕಟ ದಾವೀ। ಬದ್ಧಚಿ ಸಿದ್ಧ ಝಾಲೇ ಅಸಂಖ್ಯಾತ ಮಾನವೀ ।। ೨ ।। ವೀಸಹೀ ದಶಕೀಂಚಾ ಅನುಭವ ಜೋ ಪಾಹೇ। ನಿತ್ಯನೇಮೇ ವಿವರಿತಾ ಸ್ವಯೇ ಬ್ರಹ್ಮಚಿ ಹೋಯೇ। ಅಪಾರ ಪುಣ್ಯ ಗಾಠೀ ತರೀ ಶ್ರವಣ ಲಾಹೇ। ಕಲ್ಯಾಣ ಲೇಖಕಾಚೇ ಭಾವಗರ್ಭ ಹೃದಯೀ ।। ೩ ।।

ಭಾವಾರ್ಥ: ಶ್ರೇಷ್ಠವಾದ ಜ್ಞಾನವನ್ನು ನೀಡುವ, ಬಾಲಬೋಧದಂತೆ ಸರಳವಿರುವ, ಗ್ರಂಥಗಳ ರಾಜನೆನಿಸುವ, ದಾಸಬೋಧಕ್ಕೆ ಜಯಜಯವೆಂದು ಆರತಿ ಬೆಳಗುವೆ. ವೇದಾಂತಸಿದ್ಧಾಂತಗಳು ಮಾನ್ಯಮಾಡಿದ ವಿಚಾರಗಳ ಕಾವ್ಯ-ಸಿಂಧು ನೀನಾಗಿರುವೆ. ಶ್ರುತಿ-ಶಾಸ್ತ್ರ, ಗೀತಾ ಗ್ರಂಥಗಳ ಸಂಗಮವಾಗಿರುವೆ. (ಎಂದರೆ ಇದರಲ್ಲಿ ಅವೆಲ್ಲ ಸಮಾವೇಶವಾಗಿವೆ). ಮಹಾನುಭಾವರಾದ ಸಂತರು ನಿನ್ನ ಈ ಗ್ರಂಥದ ಸ್ವಾದ ಮಾಡಿ ಪಡೆದ ಅನುಭವದಿಂದ, ಅಜ್ಞಾನಿಗಳಾದ ಜಡ-ಜೀವರಿಗೆ ಸುಲಭಮಾರ್ಗವನ್ನು ತೋರಿಸುವಂತೆ ಆಯಿತು. ನವವಿಧ ಭಕ್ತಿಪಂಥದಿಂದ ರಾಮನ ದರ್ಶನ ಪಡೆಯುವಂತೆ ಮಾಡಿರುವೆ. ಅದು ಚಾತುರ್ಯದ ಖಣಿಯೇ ಇದ್ದು ಮಾಯಾಚಕ್ರವನ್ನು ನಿಲ್ಲಿಸಿದಿ. ಹರಿಹರರ ಗುಹ್ಯತತ್ತ್ವವನ್ನು ತೋರಿಸಿ ಕೊಟ್ಟಿರುವೆ. ಇದರಿಂದ ಅಸಂಖ್ಯಾತ ಬದ್ಧರು ಸಿದ್ಧರಾಗಿದ್ದಾರೆ. ದಾಸಬೋಧದ ಇಪ್ಪತ್ತು ದಶಕಗಳನ್ನು ಓದಿ ಅನುಭವವನ್ನು ಯಾರು ತೆಗೆದುಕೊಳ್ಳುತ್ತಾರೋ, ಪ್ರತಿದಿನ ತಪ್ಪದೇ ವಿವರಿಸುತ್ತಾರೋ, ಅವರು ಸ್ವತಃ ಬ್ರಹ್ಮಸ್ವರೂಪರಾಗಿ ಹೋಗುತ್ತಾರೆ. ಇಂಥಹ ಗ್ರಂಥದ ಶ್ರವಣದ ಲಾಭವಾಗಬೇಕಾದರೆ, ಹಿಂದಿನ ಜನ್ಮದ ಅಪಾರ ಪುಣ್ಯಸಂಗ್ರಹವಿರಬೇಕಾಗುತ್ತದೆ. ರಾಮದಾಸರ ಶಿಷ್ಯ ಹಾಗೂ ಈ ಗ್ರಂಥದ ಲೇಖನವನ್ನು ಬರೆದ ಕಲ್ಯಾಣಸ್ವಾಮಿಯ ಅಂತಃಕರಣ ದಲ್ಲಿಯ ಭಾವವಿದು. ಗ್ರಂಥರಾಜವಾದ ದಾಸಬೋಧಕ್ಕೆ ಜಯಜಯಕಾರವು.

(೨)

ಸುಖಸಹಿತಾ ದುಃಖರಹಿತಾ ನಿರ್ಮಳ ಏಕಾಂತಾ। ಕಲಿಮಲದಹನಾ ಗಹನಾ ಸ್ವಾಮೀ ಸಮರ್ಥಾ॥ ನ ಕಳೆ ಬ್ರಹ್ಮಾದಿಕಾ ಅಂತ ಅನಂತಾ। ತೋ ತೂ ಆಮ್ಹಾ ಸುಲಭ ಜಯ ಕೃಪಾವಂತಾ ॥ ೧ ॥ ಜಯದೇವ ಜಯದೇವ ಜಯ ಕರುಣಾಕರಾ। ಆರತೀ ವ್ಹೋವಾಳೂ ಸದ್ಗುರುಮಾಹೇರಾ ॥ ಧೃ ॥ ಮಾಯೇವಿಣ ಮಾಹೇರ ವಿಶ್ರಾಂತಿ ಠಾವ। ಶಬ್ದೇ ಅರ್ಥಲಾಭ ಬೋಲಣೇ ವಾವ॥ ಸದ್ಗುರುಪ್ರಸಾದೇ ಸುಲಭ ಉಪಾವ। ರಾಮೀ ರಾಮದಾಸಾ ಫಳಲಾ ಸದ್ಭಾವ ॥ ೨ ॥

ಭಾವಾರ್ಥ: ಸ್ವಾಮೀ ಸಮರ್ಥಾ ನೀನು ನಿಜವಾದ ಸುಖವನ್ನನು ಭವಿಸುವವನೂ ದುಃಖವಿಲ್ಲದ ಆನಂದಸ್ವರೂಪನೂ, ನಿರ್ಮಲನೂ, ಏಕಾಂತನೂ, ದ್ವೈತಸಂಘರ್ಷದಿಂದ, ರಾಗದ್ವೇಷದಿಂದ ಉಂಟಾಗುವ ಮಲಿನತೆಯನ್ನು ಸುಟ್ಟು ಹಾಕಿರುವವನೂ ಆಗಿರುವೆ. ಬ್ರಹ್ಮಾದಿಗಳಿಗೂ ತಿಳಿಯದಂಥ ಗುಹ್ಯವನ್ನು ಸುಲಭವಾಗಿ ನಮಗೆ ತಿಳಿಸಿ ಕೊಟ್ಟಿರುವೆ. ಕರುಣಾಕರಾ, ನಿನಗೆ ಆರತಿ ಬೆಳಗುವೆನು. ಮಾಯೆ ಇಲ್ಲದಂಥ ತಾಯಿಯಮನೆ ನೀನಾಗಿರುವೆ. ಅದೇ ವಿಶ್ರಾಂತಿ ಧಾಮವು. ನಾಮಸ್ಮರಣೆಯಿಂದ ಆತ್ಮಪ್ರಾಪ್ತಿಯ ಲಾಭವಾಗುತ್ತದೆ. ಶಬ್ದಗಳು ಅರ್ಥ ನೀಡುವವು. ಆಮೇಲೆ ಮಾತು ವ್ಯರ್ಥವಾಗುತ್ತದೆ. ಎಂದರೆ ಅನುಭವವು

ಶಬ್ದಾತೀತ. ಸದ್ಗುರು ಹೇಳಿದ ಸಾಧನೆಯನ್ನು ಶ್ರದ್ಧೆಯಿಂದ ಮಾಡಿದರೆ ಸಾಕ್ಷಾತ್ಕಾರವು ಖಂಡಿತ. ಇದು ರಾಮೀರಾಮದಾಸರ ಅನುಭವ.

(೩)

ಪಂಚಪ್ರಾಣವೆಂಬ ಆರತಿ ಮಾಡಿರಿ। ಪಂಚತತ್ತ್ವವೆಂಬ ಬತ್ತಿ ಹಚ್ಚಿರಿ ಚಂಚಲವೃತ್ತಿಯೆಂಬ ಘೃತವನ್ಹಾಕಿರಿ। ಪಂಚಕರ್ಮೇಂದ್ರಿಯಗಳ ದಹನ ಮಾಡಿರಿ ॥ ೧ ॥ ಜಯದೇವ ಜಯದೇವ ಜಯಪರಮಹಂಸಾ, ಗುರುಪರಮಹಂಸಾ। ದಯಮಾಡಿದಯ್ಯಾ ನೀ ಎನಗೆ ಸರ್ವೇಶಾ॥ ಜಯದೇವ ಜಯದೇವ ॥ ಪ ॥ ಆದರ ಪರಸಿ ಆರು ಚಕ್ರಾ ಮೀರಿಸಿದಿ। ವೇದಕೆ ನಿಲುಕದ ನಿಜಗುಣರತ್ನಾ ತೋರಿಸಿದಿ। ಆದಿನಾಥನಲ್ಲಿ ಲಕ್ಷ್ಯವಿಡಿಸಿದಿ। ನಾದದ ಮೂಲ ಓಂಕಾರದೊಳುಬೆರಿಸಿದಿ॥ ಜಯದೇವ ಜಯದೇವ ॥ ೨ ॥ ತಂದೆತ್ರಿಮಲ್ಲ ನೀ ಸದ್ಗುರುನಾಥಾ। ಕಂದಗೆ ಜ್ಞಾನದ ವಸ್ತು ಕೊಟ್ಟಂಥ ದಾತಾ। ಸಂದೇಹ ಬಿಡಿಸಿ ಎನಗೆ ಮಾಡಿದಿ ಪ್ರಖ್ಯಾತಾ। ಛಂದದಿ ಭಜಿಸುವೆ ನಾ ನಿನಗೆ ಅವಧೂತಾ॥ ಜಯದೇವ ಜಯದೇವ ॥ ೩ ॥

(೪)

ಆರತೀ ಕರಾ ಹೋ ಸಜ್ಜನ। ದ್ವೈತಭಾವ ಟಾಕೂನ ॥ ಧೃ ॥ ವಿವೇಕ ಸದ್ಬುದ್ಧಿ। ಸದ್ಬುದ್ಧಿ। ಲಕ್ಷ ಲಾವುನೀ ಪದೀ। ಅಂತಃಕರಣ ಮನಶುದ್ಧಿ।

ದ್ವೈತಾತೀತ ಬುದ್ಧಿ ॥ ೧ ॥ ಇಡಾ ಪಿಂಗಳಾ। ಸುಷುಮ್ನಾ ಮಾರ್ಗ ಆಹೇ ಕಠೀಣಾ। ತ್ರಿಕೂಟ ಸಂಗಮ। ಸಮರ್ಚನ। ಮಹಾಲಿಂಗದರ್ಶನ ॥ ೨ ॥ ಚಿನ್ಮಯ ಗುರುಮೂರ್ತಿ। ಗುರುಮೂರ್ತಿ। ಅಣುರೇಣು ಭಾಸತೀ॥ ಬುದ್ಧಿ ಭಾಸಾಚೀ। ಭಾಸಾಚೀ। ಗುರುಪುತ್ರ ಜಾಣತೀ ॥ ३ ॥

ಭಾವಾರ್ಥ: ಸಜ್ಜನರೇ, ದ್ವೈತಭಾವವನ್ನು ಬಿಟ್ಟು ಆರತಿ ಮಾಡಿರಿ. ವಿವೇಕ ಸದ್ಬುದ್ಧಿಗಳ ಸಹಾಯಹೊಂದಿ ಪರಮೇಶ್ವರನ ಚರಣಕಮಲದಲ್ಲಿ ಲಕ್ಷವಿಡಿರಿ. ಅಂತಃಕರಣ ಮತ್ತು ಮನವನ್ನು ಶುದ್ಧಮಾಡಿರಿ. ಅಂದರೆ ಬುದ್ಧಿ ದ್ವೈತದಾಚೆಗೆ ಹೋಗುವುದು. ಇಡಾ, ಪಿಂಗಳಾ, ಸುಷುಮ್ನಾ ಮಾರ್ಗ ಕಠಿಣವಿದೆ. ಈ ಮೂರರ ಸಂಗಮದಲ್ಲಿ ಮಹಾಲಿಂಗನ ದರ್ಶನವಿದೆ. ಚಿನ್ಮಯ ಮೂರ್ತಿಯು ಅಣುರೇಣುವಿನಲ್ಲಿ ತುಂಬಿದ್ದನ್ನು ನೋಡಬೇಕು. ದ್ವೈತಬುದ್ಧಿಯನ್ನು ದಾಟಬೇಕು. ಇದು ಗುರುಪುತ್ರನಿಗೆ ತಿಳಿಯುವುದು.

(೫)

ಆರತೀ ಜ್ಞಾನರಾಜಾ। ಮಹಾಕೈವಲ್ಯತೇಜಾ। ಸೇವಿತೀ ಸಾಧುಸಂತ। ಮನು ವೇಧಲಾ ಮಾಝಾ ॥ ಧೃ ॥ ಲೋಪಲೇ ಜ್ಞಾನ ಜಗೀ। ಹಿತ ನೇಣತೀ ಕೋಣೀ। ಅವತಾರ ಪಾಂಡುರಂಗ। ನಾಮ ಠೇವಿಲೇ ಜ್ಞಾನೀ ॥ ೧ ॥ ಕನಕಾಚೇ ತಾಟಕರೀ। ಉಭ್ಯಾ ಗೋಪಿಕಾ ನಾರೀ। ನಾರದ ತುಂಬರ ಹೋ।

ಸಾಮಗಾಯನ ಕರೀ ।। ೨ ।। ಪ್ರಕಟ ಗುಹ್ಯ ಬೋಲೇ। ವಿಶ್ವ ಬ್ರಹ್ಮಚಿ ಕೇಲೇ। ರಾಮಾ ಜನಾರ್ದನೀ। ಪಾಯೀ ಟಕಚಿ ಠೇಲೇ ।। ೩ ।।

ಭಾವಾರ್ಥ: ಜ್ಞಾನರಾಜನಿಗೆ ಆರತಿ ಬೆಳಗುವೆನು. ಘನಚಿತ್‌ಸ್ವರೂಪ ಪ್ರಕಾಶನೇ, ಸಾಧುಸಂತರು ನಿನ್ನ ಸೇವೆ ಮಾಡುತ್ತಾರೆ. ನನ್ನ ಮನಸ್ಸನ್ನು ಸೆರೆಹಿಡಿದಿರುವೆ. ಜನರಲ್ಲಿ ಆತ್ಮಜ್ಞಾನವು ಇಲ್ಲದಾಗಿದೆ. ತಮ್ಮ ಹಿತವನ್ನು ಅವರು ಅರಿಯರು. ಆದಕ್ಕೆಂದೇ ಅವತರಿಸಿದ ಪಾಂಡುರಂಗ-ದೇವನು ನೀನು ಎಂದು ಜ್ಞಾನಿಗಳು ಹೇಳುತ್ತಾರೆ. ಬಂಗಾರದ ತಾಟನ್ನು ಹಿಡಿದುಕೊಂಡು ಗೋಪಿಕೆಯರು ನಿನ್ನೆದುರು ನಿಂತಿದ್ದಾರೆ. ನಾರದತುಂಬುರರು ವೇದಗಾಯನ ಮಾಡುತ್ತಿದ್ದಾರೆ. ಗುಹ್ಯವಾದ ವಿಶ್ವವ್ಯಾಪಿಯಾದ ಬ್ರಹ್ಮನನ್ನು ನೀನು ಪ್ರಕಟಗೊಳಿಸಿದ್ದೀ ಎಂದು ತಿಳಿಸಿ, ರಾಮಾ ಜನಾರ್ದನರು ನಿನ್ನ ಚರಣದಲ್ಲಿ ಲೀನರಾಗಿದ್ದಾರೆ.

(೬)

ಕರ್ಪೂರಾರತಿ ಎತ್ತಿ ಬೆಳಗಿರೇ। ಕಾರುಣ್ಯಾಮೃತಕರ ದೇವಗೇ ।। ಪ ।। ನೀಲಕಂಧರ ನಿಗಮಗೋಚರ। ಭಾಲಚಂದ್ರಾಭರಣಗೇ। ಬಾಲಗೊಲಿದನು ಹಾಲಾಹಲ ಸವಿದನು। ಲೋಲ ಶ್ರೀಗುರುರಾಯಗೇ ।। ೧ ।। ವಾರಿಜೋದ್ಭವಶಿರವ ಹರಿದನು। ಮಾರಹರ ಮಹಾದೇವಗೇ। ಘೋರ ದುರಿತವ ದೂರ ಮಾಡುವ। ಶೂರ ಸನ್ಮುಖನಯ್ಯಗೇ ।। ೨ ।। ಶರಣು

ಜನಕಿ ವರವನಿತ್ತನು। ಪರಮ ಪಾರ್ವತಿಯರಸಗೇ। ಧರೆಯೊಳಧಿಕವಾದ ಮುರಶಿಂಗರ। ಪುರದ ಸಿದ್ಧನಾಥಗೇ ॥ ೩ ॥

(೭)

ಜಯ ಜಯ ಕಾಡಸಿದ್ಧಾ। ಆರತಿ ಮಾಡುವೇ ಸಿದ್ಧಾ ॥ ಪ ॥ ಮುತ್ತಿನ ಆರತಿ ಬಂಗಾರದ ಬತ್ತಿ। ದೀವಿಗೀ ಚಂದ್ರದೀಪ್ತಿ। ಬೆಳಗುವೇ ಪೂರ್ಣ ಭಕ್ತಿ ॥ ೧ ॥ ಆರತಿ ಮಾಡುತ ಪ್ರೇಮದಿ ಹಾಡುತ। ಸ್ವಾಮಿ ಸಾ ನಿನ್ನ ದೂತ। ಕರುಣಾ ಮಾಡೋ ಕೃಪಾವಂತ ॥ ೨ ॥ ಆರತಿ ಮೆಚ್ಚಿದ। ತಾನು ವರವ ಕೊಡಬಂದ। ಕೃಪಾ ದೃಷ್ಟಿಯಿಂದ ತುಳಜಾಗೆ ಸದಾನಂದ ॥ ೩ ॥

(೮)

ಜಯ ಜಯ ಜಯ ಜಯ ಆರತಿ ಮಾಡುವೇ॥ ಜಯ ಜಯ ಜಯ ಜಯ ಆರತಿ ತುಂಬುವೇ॥ ಜಯ ಜಯ ಜಯ ಜಯ ಆರತಿ ಬೆಳಗುವೇ॥ ಅಂಗದಾಯತ ಸ್ವಾಮಿಗೇ ॥ ಪ ॥ ಸೂರ್ಯವರ್ಣಗೇ ಸುಂದರರೂಪಗೇ। ಮಂದಿರ ದೊಳು ಕುಣಿದಾಡು ದೇವಗೇ॥ ಚೌರಿಚಾಮರ ಚಕ್ರದೊಡೆಯಗೇ। ಮುಪ್ಪಿನ ಮುನಿಗೆ ಒಪ್ಪುವ ರೂಪಗೇ॥ ಸಾಂಬಪರನಿಗೆ ಸಾಕ್ಷಾತ್ ಶಿವನಿಗೇ। ಬೆಳಗುವೇ ಆರತಿಯ ॥ ೧ ॥ ಚಂದ್ರವರ್ಣಗೇ ಚಿನ್ನರೂಪಗೇ। ಮಂಜಿನೊಳಗಿರು ಮಹಾಹರ ಶಿವಗೇ॥ ಪಂಜಿನ ಬೆಳಕಿಲೇ ರಂಜಿಸು ಮುಖಿಗೇ। ನೀಲವರ್ಣಗೇ ಬಾಲರೂಪಗೇ ॥ ೨ ॥ ಜ್ಯೋತಿರ್ವರ್ಣಗೇ

ಡುಲಾಸುರೂಪಗೇ। ನಲಿನಲಿದಾಡುವ ನಾಗರ ಹೆಡಿಗೇ॥ ಆಗಮಕಾರಗೇ ಅನೇಕರೂಪಗೇ। ಜಗದ ಅರಸಗೇ ಜನ್ಮ ವಿನಾಶಗೇ ॥ ೩ ॥ ಲಿಂಗವರ್ಣಗೇ ನಿಝುಂಕಾರಗೇ। ಝಣಾ ಝಣಾ ಬಹುನಾದ ಘೋರಗೇ॥ ಅಂಗದೊಳಗಿರು ಸಂಗಮೇಶಗೇ। ಗಂಗಾಧರಗೇ ಗೌರೀಹರಗೇ ॥ ೪ ॥ ಎನ್ನವರ್ಣಗೇ ಚನ್ನರೂಪಗೇ। ಭಿನ್ನವಿಲ್ಲದೆ ಪಾದ ತೋರುವಗೇ॥ ಮತ್ತೆ ಬಾರದ ಮುಕ್ತಿಕೊಟ್ಟಗೇ। ನಂಬಿದ ಭಕ್ತಗೇ ತುಂಬಿತುಳುಕುವಗೇ ॥ ೫ ॥ ದೇಶಕಧಿಕವಾದ ವಾಸ ಉಮದೀ। ಗುರುವಿನ ಪಾದದೊಳಾನಂದ ಶಿವಾ॥ ಆತನ ಬೋಧದೊಳು ನಿಮಗ್ನ ಹರಾ। ನಡುಮಧ್ಯದಲ್ಲಿ ಕಂಡೆವು ಘನ॥ ಪರಿಪರಿಯಿಂದಲಿ। ಪರಮಾತ್ಮನಿಗೇ ಬೆಳಗುವೆ ಆರತಿಯಾ ॥ ೬ ॥

(೯)

ಜ್ಯೋತಿ ಬೆಳಗುತದೇ। ಝಗಾಝಗ। ಜ್ಯೋತಿ ಬೆಳಗುತದೇ ॥ ಪ ॥ ಅಸ್ತಮಗಿರಿ ಚನ್ನ ಮಸ್ತಕದೊಳು ಚಲುವ। ವಸ್ತು ಕಾಣುತದೇ ಝಗಾಝಗ ॥ ೧ ॥ ಮಾನಸ ತುದಿಯಲಿ ಧ್ಯಾನಕೇ ನಿಲುಕದೇ। ತಾನೇ ಹೊಳೆಯುತದೇ ಝಗಾಝಗ ॥ ೨ ॥ ಕಂಗಳ ಮಧ್ಯದಿ ತುಂಗ ಗುಡ್ಡದ ಯೋಗಿ। ಅಂಗ ಹೊಳೆಯುತದೇ ಝಗಾಝಗ। ಲಿಂಗ ಹೊಳೆಯುತದೇ ಝಗಾಝಗ ॥ ೩ ॥

(೧೦)

ನಮೋ ನಮೋ ಎಂಬೇ। ಗುರುವೇ ಕಡಗ್ಹಾಯಿಸು ತಂದೇ ॥ ಪ ॥ ಸದಾಭರಿತ ಎನ್ನ ಹೃದಯಕಮಲದೊಳು। ಸುಧಾಮೃತವನು ಸುರಿಸು ನೀ

ಎಂಬೇ ॥ ಅ.ಪ ॥ ಆಶೆ ಮಾಡಿ ಬಂದೇ। ನಿಮ್ಮ ಅನುಭವದೊಳು ಕುಂತೇ। ಮೋಸವಾಗದೇ ಭಾಸುರ ಪ್ರಣವದೊಳು। ನಿರಾಶತಪದೊಳು ನಿಲಿಸಿದೇ ತಂದೇ ॥ ೧ ॥ ಅರ್ಥವಾಗುವಂತೇ। ಅನುಮಾನ ಬಿಟ್ಟು ಹೋಗುವಂತೇ। ಸತ್ಯದಿ ಶಿವಭಜನಿ ನಿತ್ಯದಿ ಮಾಡುವಾಗ। ವ್ಯರ್ಥ ಚಿಂತೆಗಳ ಪರಿಹರಿಸೋ ತಂದೇ ॥ ೨ ॥ ಪುಣ್ಯ ಸುಕೃತದಿಂದೇ। ನಿಮಗೆ ಎಲ್ಲ ಜೀವಗಳೊಂದೇ। ಬಲ್ಲಿದ ಶ್ರೀಗುರು ಬಸವಲಿಂಗಗೇ। ಮಂಗಳ ಆರತಿ ಬೆಳಗುವೆನೆಂಬೇ ॥ ೩ ॥

(೧೧)

ಜಯ ಜಯ ಜಯ ಗುರುಲಿಂಗಾ, ಸಚ್ಚಿತ್ಸುಖ ಕಂದಾ। ತವ ಪದಿ ಶರಣ ಯೇತಾ, ಹರಸೀ ಭವಬಂಧಾ॥ ಜಯ ಜಯ ॥ ಧೃ ॥ ಜಗದ್ರೂಪ ತೂ ಅಸಸೀ, ಅಸಸೀ ನಿಜಯೋಗೀ। ವಸತಿಸ್ಥಾನ ತುಮಚೇ। ಧಾಮ ನಿಂಬರಗೀ ॥ ೧ ॥ ಬ್ರಹ್ಮನಿದ್ರೇಮಾಜೀ, ಮಾಜೀ ತೂ ರಮಸೀ। ಪರಮಾರ್ಥಾಚೀ ಕಿಲ್ಲೀ, ನಿಜದಾಸಾ ದೇಸೀ ॥ ೨ ॥ ತವ ಪದಯುಗಲರಜಾಚಾ, ಲಾಗತ ಮಧುವಾರಾ। ಮಾಯಾ ಭರೂನಿ ಪಾರೂನಿ, ದೇಸೀ ಸುಖಸಾರಾ ॥ ೩ ॥ ನಾರಾಯಣ ಗುರುಚರಣೀ, ಚರಣೀ ಅನನ್ಯ। ಪ್ರೇಮೇ ಆರತಿ ಕರಿತಾ, ದಾಸ ಮ್ಹಣೇ ಧನ್ಯ ॥ ೪ ॥

ಭಾವಾರ್ಥ: ಜಯ ಜಯ ಗುರುಲಿಂಗಾ, ಸಚ್ಚಿತ್ಸುಖಕಂದಾ; ನಿನಗೆ ಶರಣು ಬಂದವರ ಭವಬಂಧನವನ್ನು ದೂರಮಾಡುವಿ. ನೀನು

ಜಗದ್ವ್ಯಾಪಿಯಾಗಿರುವಿ. ನಿಜಯೋಗಿಯೂ ಅಹುದು. ನಿಮ್ಮ ವಾಸಸ್ಥಾನವು ನಿಂಬರಗಿ. ಬ್ರಹ್ಮನಿದ್ರೆಯಲ್ಲಿ ನೀವು ತಲ್ಲೀನರಾಗಿ ಆನಂದದಲ್ಲಿರುವಿರಿ. ಪರಮಾರ್ಥದ ಕೀಲಿಯ ಕೈಯನ್ನು ನಿಜದಾಸರಿಗೆ ಕೊಡುವಿರಿ. ನಿಮ್ಮ ಚರಣಧೂಳಿಯ ಮಧುರ ತಂಪಾದ ಗಾಳಿಯಿಂದ ಮಾಯೆಯನ್ನು ಓಡಿಸಿ, ಸುಖದ ಸಾರವನ್ನು ಕೊಡುವಿರಿ. ನಾರಾಯಣ ಗುರುಚರಣದಲ್ಲಿ ಅನನ್ಯ ಭಕ್ತಿಯಿಂದ ಆರತಿ ಮಾಡಿ ದಾಸನು ಧನ್ಯನಾದನು.

(೧೨)

ಮಂಗಲಂ ಮಹಾಲಿಂಗ ಉಮದೀಶಾ। ಮುನಿಜನ ಪೋಷಾ। ಭಾಸ ಉಪಾಧಿತೀತ ಸರ್ವೇಶಾ। ಇಂಚಗೇರಿವಾಸಾ ॥ ಧೃ ॥ ಪೃಥ್ವಿಮೇಲಿನ ಪ್ರೇಮ ಭಕ್ತರನು। ಪರಿಪಾಲಿಸುವ। ನಿತ್ಯನಿತ್ಯದಿ ಸತ್ಯ ಶಂಕರನೇ। ಚಿತ್ತಶುದ್ಧಿ ಮಾಡು ಎನ್ನ ಕರ್ತೃ ನಿನ್ನ ಕರುಣವಿಟ್ಟು। ಮೃತ್ಯುವಿನ ಬಾಧೆಯನು ಬಿಡಿಸುವ ಸತ್ಯ ಸದ್ಗುರು ಕಾಡಸಿದ್ಧಾ ॥ ೧ ॥ ಧರಣಿ ಪಾಲಿಪ ದುರಿತ ಸಂಹರನೇ। ತ್ರಿಪುರಾಂತಕನೇ। ಚರಣ ಸೇವಕ ಭಜಕ ರಕ್ಷಕನೇ॥ ಮಾಯಾವಿ ನೀನೇ ಪರಮಪಾವನ ಪಂಚಪಾಶಕನೇ। ಮೊರೆಯ ಹೊಕ್ಕರ ಬಿರುದು ಕಾಯುವ ಅರವು ಕೊಟ್ಟು ಮರವು ಬಿಡಿಸುವ। ಶರಣುಜನರಸ್ಮರಣೆ ತಾರಕ ಸುಂದರಾತ್ಮಕ ಸಗುಣ ನಿಧಿಯೇ ॥ ೨ ॥ ಅಷ್ಟದಿಕ್ಪಾಲಕರ ಒಡೆಯನೇ। ಸೃಷ್ಟೀಕರ್ತಾ। ಶ್ರೇಷ್ಠ ಸದ್ಗುರುಲಿಂಗಜಂಗಮನೇ। ನಿಷ್ಠೆಯಿಂದಲಿ ನಂಬಿದವರ

ಕಷ್ಟ ಕಡಿದು ಕಡೆಗೆ ಹಾಯಿಸುವ। ವೃಷ್ಟಿ ಅಮೃತ ಸುರಿದು ಜಗದಿ। ಜಯ ಜಯ ಪಡೆವಂಥ ಸದ್ಗುರು ॥ ೩ ॥

(೧೩)

ಆರತೀ ಉಮದೀಶಾ। ತೂಚಿ ಸ್ವಯಂಪ್ರಕಾಶಾ। ವ್ಯಾಪುನೀ ಜಗದೀಶಾ। ಪುರವೀ ಭಕ್ತಮನೀಷಾ ॥ ಧೃ ॥ ಸ್ಮರತಾ ತವ ನಾಮ। ನಾಮೀ ಜಡಲೇ ಪ್ರೇಮ। ಪ್ರಗಟಲಾ ಆತ್ಮಾರಾಮ। ನಾಮೀ ರಂಗಲೇ ಮನ ॥ ೧ ॥ ಅಸಂಖ್ಯ ತವ ಭಕ್ತಾ। ಸಂರಕ್ಷಿಸೀ ಅನಂತಾ। ತೂ ತವ ನಿಜರೂಪಾ। ದಾವಿಸೀ ಸಮರ್ಥಾ ॥ ೨ ॥ ದೇವಾಧಿನಿಜದೇವ। ಪ್ರಗಟಸೀ ಸ್ವಭಾವ। ಘೇತಾ ತವ ಭಾವ। ಐಸಾ ಸದ್ಗುರು ತೂ ದೇವ॥ ॥ ೩ ॥

ಭಾವಾರ್ಥ: ಸ್ವಯಂಪ್ರಕಾಶನಾದ ಉಮದೀಶನಿಗೆ ಆರತಿ. ಜಗತ್ತನ್ನು ವ್ಯಾಪಿ। ಭಕ್ತರ ಮನೋರಥಗಳನ್ನು ಈಡೇರಿಸುವಿ. ನಿನ್ನ ನಾಮಸ್ಮರಣೆಯಿಂದ ಪ್ರೇಮವುಕ್ಕಿ ಆತ್ಮಾರಾಮನು ಪ್ರಕಟನಾಗುತ್ತಾನೆ. ಅದರಲ್ಲಿ ಮನಸ್ಸು ಸಂತುಷ್ಟಗೊಳ್ಳುತ್ತದೆ. ಅಸಂಖ್ಯ ಭಕ್ತರನ್ನು ಸಂರಕ್ಷಿಸಿರುವಿ. ಅವರಿಗೆ ನಿಜರೂಪವನ್ನು ತೋರಿಸುವಿ. ದೇವಾಧಿದೇವನಾದ ನೀನು ಭಕ್ತರ ಭಾವ ಹಾಗೂ ಭಕ್ತಿಗೆ ಅನುಸರಿಸಿ ಪ್ರಕಟನಾಗುತ್ತೀ.

(೧೪)

ಓವಾಳೂ ಆರತಿ ಪೂಜ್ಯ ಬಾಬಾಲಾ। ನಿರಂಜನಾಚ್ಯಾ ದಿವ್ಯಕೀರ್ತಿಲಾ ॥ ಧೃ ॥ ಸ್ವರ್ಗಾತುನಿ ಜಣು ನಿಷ್ಠಾ ಉತರೀ। ತಪ ತಳಪತ ಅವತರೇ

ಭೂವರೀ। ಸದ್ಗುರುಮಹಿಮಾ ವರ್ಣೀ ಭಾರೀ। ಗುರುಕರಿಚ್ಯಾ ಮಂಗಲ ಮುರಲೀಲಾ ॥ ೧ ॥ ಜ್ಯೋತೀಮಧ್ಯೇ ಕರ್ಪುರ ಜೇವೀ। ಸದ್ಗುರುಪದಿ ತೈಸಾ ರತ ಹೋಯೀ। ದಿವ್ಯಾನಂದ ಸುಧೇಲಾ ಸ್ರವವೀ। ಭಗವಂತಾಚ್ಯಾ ಭವ್ಯ ಪ್ರಭೇಲಾ ॥ ೨ ॥

ಭಾವಾರ್ಥ: ಕರ್ಪೂರಾರುತಿಯನ್ನು ಬೆಳಗುವೆನು। ಜಗಜಣ್ಣಜೀಯಗೆ ॥ ಪಲ್ಲ ॥ ಕರ್ಪೂರಾರತಿಯನ್ನು ಬೆಳಗುವೇ। ನಿರ್ಮಲಾಂತಃಕರಣಯತಿಗೇ। ನಿರ್ಮಲತ್ವದ ಮಾನ್ಯ ಮೂರ್ತಿಗೇ। ನಿರ್ಗುಣದ ನಿರ್ಬಯಲ ಕೀರ್ತಿಗೇ ॥ ಅ.ಪ ॥ ನಂಬಿಗೆಯು ಅಂಬರದಿ ಬಂದಿಹುದೋ। ಉದ್ಧಾರ ಕಾರ್ಯಕೆ ತಪವೆ ತೊಳಗುತ ಇಳೆಯೊಳಿಳಿದಿಹುದೋ॥ ತನ್ನ ಹಿರಿತನವನ್ನು ಅರಿಯದೇ। ಧನ್ಯಗುರುವಿನ ಮಹಿಮೇ ಸಾರುವ। ಚಿನ್ಮಯದ ಚಿನ್ನಾದ ಬೀರುವ। ಭಾವುರಾಯರ ಭವ್ಯ ಕೊಳಲಿಗೇ ॥ ೧ ॥ ಕರ್ಪೂರವುತಾನುರಿಯನಪ್ಪುತಲೀ॥ ಅದು ಉರಿಯುತುರಿಯುತ। ಉರಿಯೊಳಗೆ ಅಳಿದುಳಿಯುವಂದದಲೀ॥ ಗುರುವಿನಲ್ಲಿಯೇ ತಾನು ಬೆರೆಯುವ। ಅವರ ಹಿರಿತನದಲ್ಲಿ ಮೆರೆಯುವ। ಹಿರಿಯ ಆನಂದವನು ಕರೆಯುವ। ದೇವರಾಯನ ದಿವ್ಯ ಬೆಳಕಿಗೇ ॥ ೨ ॥

(೧೫)

ಜಯದೇವ ಜಯದೇವ ಜಯ ಸದ್ಗುರುರಾಯಾ, ಜಯ ಅಂಬುರಾಯಾ ಓವಾಳೂ ಪಂಚಾರತಿ ಪ್ರೇಮೇ ತವ ಪಾಯಾ॥ ಜಯದೇವ ॥ ಧೃ ॥

ಜೀರ್ಣೋದ್ಧಾರ ಕರಾಯಾ ಆತ್ಮಜ್ಞಾನಾಚಾ। ಝಾಲಾಸೇ ಅವತಾರ ಭಕ್ತೀಭಾವಾಚಾ। ಪ್ರಭಾವ ಪಾಹುನಿ ಗುರುನೀ ಅಂತಃಶಕ್ತೀಚಾ। ಪ್ರೇಮೇ ತುಜ ಘಟ ದಿಧಲಾ ಅಮೃತನಾಮಾಚಾ ॥ ೧ ॥ ಭಕ್ತೀಭಾವೇ ತನಮನ ಗುರುಪದೀ ಅರ್ಪಿಯಲೇ। ತ್ರಿಕಾಲ ಸಾಧನ ಕರುನಿ ತೇ ವನ ಉದ್ಧರಿಲೇ। ಸೇವಾ ತವ ಪಾಹುನಿಯಾ ಭಾವೂರಾವ ಭುಲಲೇ। ಝಾಲೋ ಧನ್ಯ ಮ್ಹಣುನಿ ಬಿರೂದ ಬಾಂಧಿಯಲೇ ॥ ೨ ॥ ಸಾದರ ಸದ್ಗುರುಚರಣೀ ಸರ್ವಾರ್ಪಣ ಕೇಲೇ। "ಮಾಝೇ ಮೀ ಪಣ" ತೇಣೇ ವಿರೂನಿಯಾ ಗೇಲೇ। ಪರಮಾನಂದೀ ಅವಘೇ ಮನ ತೇ ಮಾವಳಲೇ। ಆತ್ಮಪದಾವರಿ ಶ್ರೀ ಗುರುರಾಯೇ ಭೂಷವಿಲೇ ॥ ೩ ॥ ಸದ್ಗುರುನಾಮಾಚಾ ತೋ ಝೇಂಡಾ ರೋವಿಯಲಾ। ಕರ್ನಾಟಕ ಮಹಾರಾಷ್ಟ್ರೀ ಡಂಕಾ ವಾಜವಿಲಾ। ಜೀವನಮುಕ್ತೀಚಾ ನಿಜಮಾರ್ಗಹೀ ದಾವಿಯಲಾ। ಆರತೀ ಕರುನಿ ಪಾವನ ದಾಸ ರಾಮು ಝಾಲಾ ॥ ೪ ॥

ಭಾವಾರ್ಥ: ಜಯದೇವ ಜಯದೇವ ಸದ್ಗುರುರಾಯಾ, ಜಯ ಅಂಬೂರಾಯಾ, ನಿನ್ನ ಚರಣಗಳಿಗೆ ಭಕ್ತಿಯಿಂದ ಪಂಚಾರತಿ ಬೆಳಗುವೆನು. ಆತ್ಮಜ್ಞಾನದ ಜೀರ್ಣೋದ್ಧಾರದ ಕೆಲಸಕ್ಕೇ ನೀನು ಅವತರಿಸಿರುವಿ. ಗುರುವಿನ ಮೇಲಿನ ಅನನ್ಯಭಕ್ತಿಯನ್ನೂ, ಪ್ರೀತಿಯನ್ನೂ; ನಿನ್ನ ಅಂತಃಶಕ್ತಿಯ ಪ್ರಭಾವವನ್ನೂ ನೋಡಿ, ನಾಮಸ್ಮರಣೆಯ ಅಮೃತದ ಕೊಡವನ್ನೇ ನಿನಗೆ ಕೊಟ್ಟಿದ್ದಾರೆ. ಭಕ್ತಿಭಾವದಿಂದ ಗುರುವಿನ ಚರಣದಲ್ಲಿ ತನುಮನವನ್ನು

ಅರ್ಪಿಸಿದಿ. ತ್ರಿಕಾಲ ಸಾಧನೆಮಾಡಿ ಆ ಪ್ರದೇಶವನ್ನು ಪಾವನಗೊಳಿಸಿದೆ. ನಿನ್ನ ನಿಶ್ಚಲ ಸೇವೆಯಿಂದ ಭಾವೂರಾವಮಹಾರಾಜರು ಮುಗ್ಧರಾಗಿ "ನಾನು ಧನ್ಯನಾದೆನು" ಎಂದು ನಿನಗೆ ಬಿರುದು ಕೊಟ್ಟರು. ಆದರದಿಂದ ಸದ್ಗುರುಚರಣದಲ್ಲಿ ಸರ್ವಾರ್ಪಣ ಮಾಡಿದಿ. ನಾನು, ನನ್ನದು ಎಂಬ ಅಹಂಕಾರವು ನಷ್ಟವಾಯಿತು. ಮನಸ್ಸು ಸಹಜವಾಗಿ ಪರಮಾನಂದದಲ್ಲಿ ತಲ್ಲೀನವಾಯಿತು. ಗುರುಗಳಿಂದ ನೀನು ಸ್ವರೂಪ ಸ್ಥಿತಿಯನ್ನು (ಆತ್ಮಸ್ವರೂಪವನ್ನು) ಅಲಂಕರಿಸಿದಿ. ಸದ್ಗುರುವಿನ ನಾಮದ ಪತಾಕೆ ಹಾರಿಸಿ ಕರ್ನಾಟಕ ಮಹಾರಾಷ್ಟ್ರದಲ್ಲಿ ಡಂಗುರ ಸಾರಿ ಜೀವನ್ಮುಕ್ತಿಯ ನಿಜವಾದ ಮಾರ್ಗವನ್ನು ತೋರಿಸಿದಿ. ನಿನಗೆ ಆರುತಿ ಮಾಡಿ ದಾಸನಾದ ರಾಮನು ಪಾವನನಾದನು.

(೧೬)

ಜಯದೇವ ಜಯದೇವ ಜಯಸದ್ಗುರು ರಾಮಾ। ಗುರುದೇವ ರಾಮಾ।। ಆರತೀ ಓವಾಳೂ ತುಜ ಆತ್ಮಾರಾಮಾ ।। ಧೃ ।। ಜಂಬೂಖಿಂಡೀ ಗ್ರಾಮೀ ಕರ್ನಾಟಕ ದೇಶೀ। ರಾಮೇಶ್ವರ ವರದಾನೇ ಅವತಾರ ಘೇಶೀ। ಉಮದೀಶಾನುಗ್ರಹ ತುಜ ಲಾಭೇ ಬಾಲ್ಯದಶೀ। ಸಾಧನಯೋಗೇ ಕೈವಲ್ಯಾಚಾ ಪ್ರಭು ಹೋಶೀ ।। ೧ ।। ಗುರುಲಿಂಗಜಂಗಮಪ್ರಭೂಚಾ ತೂ ನವಅವತಾರ। ಸದ್ಗುರು ಉಮದೀಶಾಚಾ ಶಿಷ್ಯೋತ್ತಮ ಥೋರ। ಭಕ್ತಿಪಥಾಚಾ ಪ್ರೇಷಿತ ಸಿದ್ಧ ಮಹೋದಾರ। ಸಾಕ್ಷಾತ್ಕಾರಾಚಾ ತೂ

ಮಹಾಭಾಷ್ಯಕಾರ ॥ ೨ ॥ ನಿಂಬಾಳಾಶ್ರಮ ತವ ಹೇ ಮುಕ್ತೀಚೇ ತೀರ್ಥ। ಪರಮಾರ್ಥಾಚೇ ಮಂದಿರ ಅಧ್ಯಾತ್ಮಪೀಠ। ನಾಮಾಚೇ ನೇಮಾಚೇ ಹೇ ಸಾಧನಪೀಠ। ಭಕ್ತಜನಾನಾ ವಾಟೇ ಭೂವರಿ ವೈಕುಂಠ ॥ ೩ ॥ ಭಕ್ತೀಚೇ ಫಲ್ಗುನದೀ ಪುನರಪಿ ಪ್ರಕಟಾಯಾ। ಜಡಜೀವಾ ತಾರಾಯಾ ಅವತಾರ ಘ್ಯಾವಾ। ಭಕ್ತಜನಾಂಚೇ ವಾಂಛಿತ ಪುರವಾ ಗುರುದೇವಾ। ಲಕ್ಷ್ಮೀಸುತ ಪ್ರಾರ್ಥಿತಸೇ ಧರುನಿ ನಮ್ರಭಾವಾ ॥ ೪ ॥ ಜಯದೇವ ಜಯದೇವ॥

ಭಾವಾರ್ಥ: ಜಯದೇವ ಜಯದೇವ ಜಯ ಸದ್ಗುರು ರಾಮಾ, ಗುರುದೇವ ರಾಮಾ, ಆತ್ಮಾರಾಮನಾದ ನಿನಗೆ ಆರತಿ ಬೆಳಗುವೆನು. ಕರ್ನಾಟಕದ ಜಮಖಂಡಿ ಗ್ರಾಮದಲ್ಲಿ ರಾಮೇಶ್ವರನ ಅನುಗ್ರಹದಿಂದ ಜನ್ಮ ಪಡೆದು ಬಾಲ್ಯದಲ್ಲಿಯೇ ಉಮದೀಶನ ಅನುಗ್ರಹ ಸಂಪಾದಿಸಿದಿ. ಸಾಧನೆಯ ಬಲದಿಂದ ಕೈವಲ್ಯ ಪ್ರಭುವಾದೆ. ಗುರುಲಿಂಗಜಂಗಮಪ್ರಭುಗಳ ಹೊಸ ಅವತಾರವಾಗಿರುವೆ. ಸದ್ಗುರು ಉಮದೀಶರ ಶಿಷ್ಯೋತ್ತಮನು, ಭಕ್ತಿಪಂಥವನ್ನು ಪ್ರಚಾರಮಾಡಲಿಕ್ಕೆಂದು ಕಳಿಸಿದ ಮಹಾಸಿದ್ಧಪುರುಷನು ನೀನು. ಸಾಕ್ಷಾತ್ಕಾರದ ಶ್ರೇಷ್ಠ ಭಾಷ್ಯಕಾರನು. ನಿಂಬಾಳಾಶ್ರಮವು ಮುಕ್ತಿಯ ಸ್ಥಾನವು. ಪರಮಾರ್ಥ ಸಾಧನೆಯ ಮಂದಿರವು, ಆಧ್ಯಾತ್ಮ ಪೀಠವು. ಅಲ್ಲದೆ ಧ್ಯಾನ, ನಿತ್ಯನೇಮದ ಭಕ್ತಿಯ ಪೀಠವೂ ಆಗಿ, ಭಕ್ತ ಜನರಿಗೆ ಭೂಮಿಯ ಮೇಲಿನ ವೈಕುಂಠವೇ ಎನಿಸಿದೆ. ಭಕ್ತಿಯ ಫಲ್ಗುನದಿಯು ಪುನಃ ಪ್ರಕಟವಾಗಿ ಜಡಜೀವರ

ಉದ್ಧಾರಕ್ಕಾಗಿ ಅವತರಿಸಿರಿ. ಗುರುದೇವಾ, ಭಕ್ತರ ಕಾಮನೆಗಳನ್ನು ಪೂರೈಸಿರಿ, ಎಂದು ನಮ್ರಭಾವದಿಂದ ಲಕ್ಷ್ಮೀಸುತನು ಪ್ರಾರ್ಥಿಸುತ್ತಾನೆ. ಜಯದೇವ ಜಯದೇವ.

(೧೭)

ಜಯಜಯ ಶ್ರೀ ಗುರುದೇವಾ। ವಾಢವಿ ಸದ್ಭಾವಾ। ಭಕ್ತಜನಾನಾ ದಾವಾ। ಅಕ್ಷಯ ನಿಜ ಠೇವಾ ॥ ಧೃ ॥ ನವಯುಗಿಚಾ ವರ ಸಂತ। ಅಭಿನವ ಹೃದಯಾತ। ನವಜೀವನಮೂಲ್ಯಾನಾ ಫುಲವಿಸಿ ಗಾ ತ್ವರಿತ ॥ ೧ ॥ ವಿಜ್ಞಾನಾತ್ಮಜ್ಞಾನ। ಪೂರಕ ಜಾಣೋನ। ತೇಣೇ ಕರಣ್ಯಾ ಕಥಿಸೀ। ಜೀವನ ಪರಿಪೂರ್ಣ ॥ ೨ ॥ ಆತ್ಮಜ್ಞಾನಾಚಾರ್ಯಾ। ಸಾಕ್ಷಾಚ್ಚೈತನ್ಯಾರ್ಯಾ ಆತ್ಮಪ್ರಭಾ ದಾವುನಿಯಾ। ಧನ್ಯ ಕರಿಸೀ ಆರ್ಯಾ ॥ ೩ ॥ ಸ್ವಾನಂದಾಸ್ತವ ಯೇತ। ಭಾವಿಕಜನ ಆರ್ತ। ನಾಮಸುಧಾ ಸೇವುನಿಯಾ ಹೋತೀ ಕೃತಾರ್ಥ ॥ ೪ ॥ ಆರತೀ ಮನೋಹರ। ಮಂಗಲಮಯ ಥೋರ। ಓವಾಳೀ ಪ್ರೇಮಭರೇ। ಕರೀ ಜಯಜಯಕಾರ ॥ ೫ ॥

ಭಾವಾರ್ಥ: ಜಯ ಜಯ ಶ್ರೀಗುರುದೇವಾ. ಭಕ್ತರಲ್ಲಿ ಸದ್ಭಾವನೆಯನ್ನು ಹುಟ್ಟಿಸಿ ಅಕ್ಷಯಸುಖದಮಾರ್ಗ ತೋರಿಸಿರಿ. ನವಯುಗದ ಶ್ರೇಷ್ಠ ಸಂತರೆಂದೆನಿಸಿರುವಿರಿ. ನವಜೀವನದ ಜನರ ಹೃದಯಗಳಲ್ಲಿ ಮೌಲ್ಯಗಳನ್ನು

ಬಿತ್ತಿದಿರಿ. ವಿಜ್ಞಾನ ಮತ್ತು ಆತ್ಮಜ್ಞಾನಗಳಲ್ಲಿಯ ಭೇದವನ್ನರಿತು, ಅವು ಪೂರಕವೆಂದು ತಿಳಿದು ಜೀವನ ಪರಿಪೂರ್ಣ ಮಾಡಿಕೊಳ್ಳುವ ಮಾರ್ಗವನ್ನು ಹೇಳಿಕೊಟ್ಟಿರುವಿರಿ. ಆತ್ಮಜ್ಞಾನದ ಆಚಾರ್ಯರಾಗಿ, ಸಾಕ್ಷಾತ್ ಚಿತ್‌ಸೂರ್ಯರಾಗಿರುವ ನೀವು ಆತ್ಮಪ್ರಭೆಯನ್ನು ಬಿತ್ತರಿಸಿ ಭಾರತದೇಶವನ್ನು ಧನ್ಯಮಾಡಿದಿರಿ. ಭಾವಿಕರೂ, ದುಃಖಿತರೂ ನಿಮ್ಮೆಡೆಗೆ ಸ್ವಾನಂದದ ಸಲುವಾಗಿ ಬರುತ್ತಾರೆ ಮತ್ತು ನಾಮಸ್ಮರಣೆಯ ಸೇವನೆಯಿಂದ ಕೃತಾರ್ಥರಾಗುತ್ತಾರೆ. ಮನೋಹರನು ಮಂಗಲಮಯವಾದ ಆರತಿಯನ್ನು ಭಕ್ತಿಪೂರ್ವಕ ಬೆಳಗಿ ನಿಮಗೆ ಜಯಜಯಕಾರ ಮಾಡಿದನು. ಜಯ ಜಯ ಗುರುದೇವಾ.

# ಶೇಜಾರತಿಗಳು (ಲಾಲಿ)

೧

ಆತಾ ಸ್ವಾಮೀ ಸುಖೇ ನಿದ್ರಾ ಕರಾ ಅವಧೂತಾ। ನರಸಿಂಹಸರಸ್ವತಿ ಅವಧೂತಾ। ಚಿನ್ಮಯ ಸುಖಧಾಮೀ ಜಾವುನಿ ಪಹುಡಾ ಏಕಾಂತಾ ॥ ಧೃ ॥ ವೈರಾಗ್ಯಾಚಾ ಕುಂಚಾ ಘೇವೂನಿ ಚೌಕ ಝಾಡಿಲಾ। ತಯಾವರೀ ಸಪ್ರೇಮಾಚಾ ಶಿಡಕಾವಾ ಕೇಲಾ ॥ ೧ ॥ ಪಾಯಘಡ್ಯಾ ಘಾತಲ್ಯಾ ಸುಂದರ ನವವಿಧಾ ಭಕ್ತೀ। ಜ್ಞಾನಾಚ್ಯಾ ಸಮಯಾ ಉಜಳುನಿ ಲಾವಿಲ್ಯಾ ಜ್ಯೋತೀ ॥ ೨ ॥ ಭಾವಾರ್ಥಾಚಾ ಮಂಚಕ ಹೃದಯಾಕಾಶೀ ಟಾಂಗಿಲಾ। ಮನಾಚೀ ಸುಮನೇ ಜೋಡುನಿ ಕೇಲೇ ಶೇಜೇಲಾ ॥ ೩ ॥ ದ್ವೈತಾಚೇ ಕಪಾಟ ಲಾವುನಿ ಏಕತ್ರ ಕೇಲೇ। ದುರ್ಬುದ್ಧೀಚ್ಯಾ ಗಾಠೀ ಸೋಡುನಿ ಪಡದೇ ಸೋಡಿಲೇ ॥ ೪ ॥ ಆಶಾತೃಷ್ಣಾಕಲ್ಪನಾಂಚಾ ಸಾಂಡುನಿ ಗಲಬಲಾ। ಕ್ಷಮಾ ದಯಾ ಶಾಂತಿ ದಾಸೀ ಉಭ್ಯಾ ಸೇವೇಲಾ ॥ ೫ ॥ ಅಲಕ್ಷ್ಯ ಉನ್ಮನಿ ಘೇಉನಿ ನಾಜುಕ ದುಶೇಲಾ। ನಿರಂಜನೀ ಸದ್ಗುರು ಮಾಝಾ ನಿಜೇ ನಿಜೇಲಾ ॥ ೬ ॥

ಭಾವಾರ್ಥ: ಸದ್ಗುರು ಸ್ವಾಮಿಗಳೇ, ತಾವು ಸುಖವಾಗಿ ನಿದ್ರೆ ಮಾಡಿರಿ. ನರಸಿಂಹ ಸರಸ್ವತಿ ಅವಧೂತಾ, ಚಿನ್ಮಯ ಸುಖರೂಪದ ಮಂದಿರದಲ್ಲಿ ಏಕಾಂತದಲ್ಲಿ ಸುಖದಿಂದ ನಿದ್ರೆಯನ್ನು ಮಾಡಿರಿ. ವೈರಾಗ್ಯದ ಕುಂಚ (ಪೊರಕೆ)ದಿಂದ ಚೌಕವನ್ನು ಉಡುಗಿ, ಭಕ್ತಿ-ಪ್ರೇಮದ ನೀರನ್ನು ಸಿಂಪಡಿಸಿ, ಸುಂದರವಾದ ನವವಿಧ ಭಕ್ತಿಗಳ ಮೆಟ್ಟಲುಗಳನ್ನು ನಿರ್ಮಿಸಿರುವೆನು. ಜ್ಞಾನರೂಪೀ ದೀಪದ ಕಂಬಗಳನ್ನು ಬೆಳಗಿ ದೀಪವನ್ನು ಹಚ್ಚಿದ್ದೇನೆ. ಹೃದಯಾಕಾಶದಲ್ಲಿ ಪರಮ ಭಕ್ತಿಯೆಂಬ ಮಂಚವನ್ನು ಹಾಕಿ, ಅದರಮೇಲೆ ಮನಸ್ಸೆಂಬ ಹೂಗಳ ಹಾಸಿಗೆ ಹಾಕಿದ್ದೇನೆ. ದ್ವೈತದ ಎರಡೂ ಫಲಕುಗಳನ್ನು ಒಂದುಗೂಡಿಸಿದ್ದೇನೆ. ದುರ್ಬುದ್ಧಿಯ ಗಂಟುಗಳನ್ನು ಬಿಚ್ಚಿ ಪರದೆಯನ್ನು ಇಳಿಬಿಟ್ಟಿದ್ದೇನೆ. ಆಸೆ, ತೃಷ್ಣೆ ಇವುಗಳ ಕಲ್ಪನೆಗಳ ಗದ್ದಲವನ್ನು ನಿಲ್ಲಿಸಿದ್ದೇನೆ. ಕ್ಷಮೆ-ದಯೆ-ಶಾಂತಿ ಎಂಬ ದಾಸಿಯರು ಸೇವೆಗೆ ನಿಂತಿದ್ದಾರೆ. ನನ್ನ ಸದ್ಗುರುಗಳು ಅಲಕ್ಷ್ಯವಾದ ಉನ್ಮನಿ ಸ್ಥಿತಿಯೆಂಬ ಮೃದುವಾದ ಹೊದಿಕೆ ಹೊದ್ದುಕೊಂಡು ನಿಜಸ್ವರೂಪದಲ್ಲಿ ಮಲಗಿದ್ದಾರೆ (ಇಲ್ಲಿ ಸ್ವಾಮಿಯೆಂದರೆ ಆತ್ಮದೇವನೆಂಬ ಅರ್ಥವೂ ಇದೆ).

## ಧಾವಾ (ಆರ್ತ ಪ್ರಾರ್ಥನೆ)

### (ಏಕಾದಶಿಯಂದು ಅನ್ನುವದು)

ಕೃಷ್ಣಾ ಧಾವ ಬಾ, ಲವಕರೀ, ಸಂಕಟ ಪಡಲೇ ಭಾರೀ
ಹರಿ ತೂ ಆಮುಚಾ, ಕೈವಾರೀ ಅಲೇ ವಿಘ್ನ ನಿವಾರೀ ॥ ಧೃ ॥

ಪಾಂಡವ ಅಸತಾ ವನವಾಸೀ, ಕಳಲೇ ಕೌರವಾಸೀ
ತ್ಯಾನೀ ಪಾಠವಿಲೇ, ತೇ ಋಷೀ, ಸತ್ವ ಹರಾಯಾಸೀ ॥ ೧ ॥

ರಾತ್ರ ಝಾಲೀಸೇ, ದೋನ ಪ್ರಹರ, ಆಲೇ ಋಷೀಶ್ವರ।
ಭೋಜನ ಮಾಗತೀ ಸತ್ವರ, ಕರೂ ಕೈಸಾ ವಿಚಾರ ॥ ೨ ॥

ಸಾಠೀ ಸಹಸ್ರ ಖಿಂಡ್ಯಾ ಅನ್ನ ದುರ್ವಾಸಾ ಭೋಜನ।
ಸತ್ವ ಜಾತೀಲ, ಘೇವೂನ, ಅಂತರ ಪಡತಾ ಜಾಣ ॥ ೩ ॥

ಆಜಿ ನಿಷ್ಠುರ ಕಾ, ಝಾಲಾಸೀ, ಕೋಠೇ ಗುಂತಲಾಸೀ।
ಮಾರ್ಗಿ ಹೋಯೀಲ ಬಾ, ಗತ ಕೈಶೀ, ಅನಾಥ ಮೀ ಪರದೇಶೀ
॥ ೪ ॥

ಕಂಠ ಶೋಷಲಾ, ಅನಂತಾ, ಪ್ರಾಣ ಜಾಯೀಲ ಆತಾ।
ಪದರ ಪಸರೀತೇ, ತುಜ ಆತಾ, ಪಾವ ರುಕ್ಮಿಣೀಕಾಂತಾ ॥ ೫ ॥

ಆತಾ ನ ಲಾವೀ, ಉಶೀರ, ಧರ್ಮ ಚಿಂತಾತುರ।
ಅನರ್ಥ ಕರೀಲ, ತೋ ಫಾರ, ಏವಢಾ ಕರೀ ಉಪಕಾರ ॥ ೬ ॥

ಐಕುನಿ ಬಹಿಣೀಚೇ, ಕರುಣಾ, ಆಲಾ ಯಾದವ ರಾಣಾ।
ದ್ರೌಪದೀ ಲೋಳತಸೇ, ಹರಿಚರಣಾ, ಉದ್ಧವಚಿದ್ಘನ ಜಾಣಾ
॥ ೭ ॥

# ಆರ್ತ ಪ್ರಾರ್ಥನೆ

ಭಾವಾರ್ಥ: ಹೇ ಕೃಷ್ಣಾ, ಬೇಗನೇ ಓಡಿ ಬಾರಯ್ಯಾ. ನಮಗೆ ಸಂಕಟ ಬಂದ ಸಮಯದಲ್ಲಿ ನಮ್ಮನ್ನು ರಕ್ಷಿಸುವ ಕೈವಾರಿ ನೀನು. ಪಾಂಡವರು ವನವಾಸದಲ್ಲಿದ್ದಾಗ, ಕೌರವರಿಗೆ ಅದು ತಿಳಿದು, ಅವರ ಸತ್ವಹರಣ ಮಾಡಲಿಕ್ಕೆಂದು ದೂರ್ವಾಸ ಋಷಿಯನ್ನು ಕಳಿಸಿದರು. ರಾತ್ರಿಯ ಎರಡನೆಯ ಪ್ರಹರದಲ್ಲಿ ಋಷಿಗಳು ಭೋಜನಕ್ಕೆ ಹಾಕು ಎಂದು, ಅರವತ್ತು ಸಾವಿರ ಖಂಡಗ ಅನ್ನವನ್ನು ಬೇಗನೇ ನೀಡು ಎಂದು ಕೇಳಿದರು. ಊಟ ಕೊಡಲು ತಪ್ಪಿದರೆ ಅವರು ನಮ್ಮ ಸತ್ವಹರಣ ಮಾಡಿಕೊಂಡು ಹೋಗುವರು. ದ್ರೌಪದಿಯು ಅನನ್ಯಭಕ್ತಿಯಿಂದ "ಕೃಷ್ಣಾ, ನೀನು ನನ್ನ ಮೇಲೆ ಇಂದು ನಿರ್ದಯನೇಕೆ ಆಗಿರುವಿ? ಎಲ್ಲಿ ಸಿಕ್ಕಿಕೊಂಡಿರುವೀ? ನಾನು ಅನಾಥಳೂ ಪರದೇಶಿಯೂ ಆಗಿದ್ದೇನೆ. ಕಂಠವು ಒಣಗಿತು. ಇನ್ನು ಪ್ರಾಣವೂ ಹೋಗುವುದು. ನೀನು ಕೈ ಬಿಟ್ಟರೆ ನನ್ನ ಗತಿ ಏನು? ಸೆರಗೊಡ್ಡಿ ನಿನಗೆ ಪ್ರಾರ್ಥಿಸುತ್ತೇನೆ. ನನ್ನನ್ನು ರಕ್ಷಿಸು. ರುಕ್ಮಿಣಿಕಾಂತಾ ತಡಮಾಡಬೇಡ; ಧರ್ಮರಾಜನು ಚಿಂತಾತುರನಾಗಿದ್ದಾನೆ. ಇನ್ನು ನೀನು ತಡಮಾಡಿದರೆ ಅನರ್ಥವಾದೀತು. ನನ್ನ ಮೇಲೆ ಉಪಕಾರ ಮಾಡು" ಎಂದು ಪ್ರಾರ್ಥಿಸಿದಾಗ, ಕೃಷ್ಣನು ತಂಗಿಯ ಆರ್ತಧ್ವನಿ ಕೇಳಿ ಪ್ರತ್ಯಕ್ಷನಾಗಲಾಗಿ, ಅವನ ಚರಣದ ಮೇಲೆ ದ್ರೌಪದಿಯು ಹೊರಳಾಡಿದಳು ಎಂದು ಉಧ್ಧವಚಿದ್ಘನರು ಹೇಳುತ್ತಾರೆ.

# ಕರುಣಾಷ್ಟಕ

## (ಏಕಾದಶಿಯ ದಿನ ಹೇಳುವುದು)

ತತ್ತ್ವಕಳತಾ ಮಗ ಜಾಣೀವಭಾವ ನಾಹೀ। ಸ್ವಾನಂದತೃಪ್ತಿ ಸಕಳಾಸಹಿ ಮುಕ್ತಿ ಪಾಹೀ। ರಾಹೋಽಥವಾ ತನು ಪಡೋ ಸಮತಾ ಜಯಾಲಾ। ಅದ್ವೈತ-ಬೋಧ-ಪದ ನಿಶ್ಚಯ ಪೂರ್ಣ ಝಾಲಾ ॥ ೧ ॥ ಸ್ವಪ್ನೇಂದ್ರಜಾಲವತ ಮಾಯಿಕ ಸರ್ವ ಆಹೇ। ಯಾಲಾಗಿ ನಿಶ್ಚಯ ಮನೀ ಭಯ ಕೋಣ ವಾಹೇ। ಸ್ವಪ್ರತ್ಯಯೇ ವಿವಿಧ ಭಾವಅಭಾವ ಗೇಲಾ। ಅದ್ವೈತ ಬೋಧಪದ..... ॥ ೨ ॥ ಜ್ಞಾನಾನಳೀ ವಿವಿಧ ಸಂಚಿತ ದಗ್ಧ ಝಾಲೇ। ವಂಧ್ಯಾವಿಲಾಸವತ ತೇ ಕ್ರಿಯಮಾಣ ಝಾಲೇ। ಪ್ರಾರಬ್ಧ ಶೇಷ ಉರಲೇ ಜನ ನಿಶ್ಚಯಾಲಾ ಅದ್ವೈತಬೋಧ ಪದ..... ॥ ೩ ॥ ಕೋಣೀ ಉದಾಸ ವನವಾಸಿಚ ಪೇಳ ಪೇಳೀ। ಕೋಣೀಹಿ ಕರ್ಮರತ ಆಶ್ರಯಧರ್ಮ ಕೇಲೇ। ಸ್ವಚ್ಛಂದತಾ ರಮತ ಏಕ ವಿಕಲ್ಪ ಗೇಲಾ। ಅದ್ವೈತಬೋಧ ಪದ.... ॥ ೪ ॥ ರಙ್ಕೂ ಗಜಾ ಮದಗಜಾರೂಢ ರಾಜಭದ್ರೀ। ಭಿಕ್ಷೂ ಅಕಿಂಚನ ಉದಾಸಿನ ಹೋ ದರಿದ್ರೀ। ಸಂಕಲ್ಪಶೂನ್ಯ ಮನ ಆಗ್ರಹಿ ಭಾವ ಠೇಲಾ। ಅದ್ವೈತಬೋಧ ಪದ.... ॥ ೫ ॥ ಜೀವೇಶ್ವರಾ ಆಣಿ ಜಗಾಪ್ರತಿ ಏಕ ಕಾಳೀ। ನಿರ್ಧಾರಿಲೇ ಘಟಮಠೀ ನಭ ಜೇವಿ ಪೇಳೀ। ವೇದಾಂತಸಂತ-ನಿಜಸಮ್ಮತ ಯಾಚ ಬೋಲಾ।

ಅದ್ವೈತಬೋಧ ಪದ.... ॥ ೬ ॥ ಸಿಂಧೂಹಿ ಸಿಂಧುಸ ಭಾಸ್ಕರ ಜೋ ತಯಾತೇ। ತ್ಯಾಹೂನಿ ಚೋಜ ಉಪಮಾ ನ ದಿಸೇ ತಯಾತೇ। ವರ್ಣೀಲ ಕೋಣ ಗುಣವರ್ಜಿತ ನಿರ್ಗುಣಾಲಾ। ಅದ್ವೈತಬೋಧ ಪದ.... ॥ ೭ ॥ ಹಾ ಚಿದ್ವಿಲಾಸ ಮುನಿಮಾನಸ-ಹಂಸ ಜಾಣಾ। ವಿಶ್ವೀ ವಸೇ ಪರಿ ನಿರಂಕುಶ-ಗಮ್ಯ ಜಾಣಾ। ರಂಗೋನಿ ಭಾಸ್ಕರ ನಿಜಾನುಭವೀ ಬುಡಾಲಾ। ಅದ್ವೈತಬೋಧ ಪದ.... ॥ ೮ ॥

ಭಾವಾರ್ಥ: ತತ್ವಗಳು ತಿಳಿದ ನಂತರ "ನನಗೆ ತಿಳಿದಿದೆ" ಎನ್ನುವ ಭಾವನೆ ಇರಲಾರದು. ಆಗ ಲಭಿಸುವ ಜ್ಞಾನದಿಂದ ಎಲ್ಲರಿಗೂ ಆನಂದತೃಪ್ತಿಯೂ ಮುಕ್ತಿಯೂ ಲಭಿಸುವುದು. ಶರೀರವು ಇರಲಿ, ಇಲ್ಲವೆ ಬಿದ್ದು ಹೋಗಲಿ, ಎಲ್ಲವೂ ಒಂದೇ ಎಂಬ ಸಮಭಾವ ಬಂದವನಿಗೆ ಅದ್ವೈತ ಬೋಧದ ಸ್ಥಿತಿಯ ನಿರ್ಧಾರವು ಪೂರ್ಣವಾಯಿತು. ॥ ೧ ॥ ಸ್ವಪ್ನದಂತೆ ಇಂದ್ರಜಾಲದಂತೆ ಎಲ್ಲವೂ ಮಾಯಾರೂಪಿಯಾಗಿರುವುದು. ಇದಕ್ಕಾಗಿ ಮನಸ್ಸಿನಲ್ಲಿ ಯಾರೂ ಭಯ ತಾಳುವುದಿಲ್ಲ. ಸ್ವಾನುಭವದಿಂದ ಇದೆ, ಇಲ್ಲ ಎನ್ನುವ ಭಾವನೆ ಹೋಗಿಬಿಡುವುದು. ಹೀಗೆ ಅದ್ವೈತ ಬೋಧದ... ॥ ೨ ॥ ಜ್ಞಾನದ ಅಗ್ನಿಯೊಳಗೆ ಪೂರ್ವಸಂಚಿತ ಕರ್ಮಗಳೆಲ್ಲ ಸುಟ್ಟು ಹೋದವು. ಆದರಿಂದ ಬಂಜೆಯ ಆಟದಂತೆ ಕರ್ಮಗಳೆಲ್ಲ ವ್ಯರ್ಥವಾದವು. ಪ್ರಾರಬ್ಧದ ಶೇಷಭಾಗವು ಜನರ ದೃಷ್ಟಿಯಲ್ಲಿ ಉಳಿಯಿತು. ಹೀಗೆ ಅದ್ವೈತಬೋಧದ... ॥ ೩ ॥ ಕೆಲವರು

ಉದಾಸೀನ ವೃತ್ತಿಯಿಂದ ಅರಣ್ಯದಲ್ಲಿ ಕಾಲ ಕಳೆದರು; ಕೆಲವರು ಗ್ರಹಸ್ಥಾಶ್ರಮಿಗಳಾಗಿ ಕಾರ್ಯನಿರತರಾದರು. ಆದರೆ ಸ್ವಚ್ಛಂದದಿಂದ ಆನಂದ ಪಡುವವರಲ್ಲಿ ಹೆಚ್ಚು ಕಡಿಮೆ ಎಂಬ ವಿಕಲ್ಪ ಉಳಿಯಲಿಲ್ಲ. ಹೀಗೆ ಅದ್ವೈತಬೋಧದ.... ॥ ೪ ॥ ಜ್ಞಾನಿಯು ಆನೆಯನ್ನು ಕಟ್ಟಿ ಪಟ್ಟದ ಮದ್ದಾನೆಯ ಮೇಲೆ ಕುಳಿತಿರಲಿ ಅಥವಾ ಬಡ ಭಿಕ್ಷುಕನಂತೆ ದಾರಿದ್ರ್ಯದಲ್ಲಿ ಉದಾಸೀನನಾಗಿರಲಿ, ಸಂಕಲ್ಪರಹಿತವಾದ ಅವನ ಮನಸ್ಸು ಬ್ರಹ್ಮನಲ್ಲಿ ನೆಲೆಸಿರುತ್ತದೆ. ಹೀಗೆ ಅದ್ವೈತಬೋಧದ... ॥ ೫ ॥ ಆಕಾಶವು ಕೊಡದ ಮತ್ತು ಮನೆಯ ಉಪಾಧಿಯಿಂದ, ಘಟಾಕಾಶ, ಮಠಾಕಾಶವೆಂದೆನಿಸಿದರೂ ಅದು ಒಂದೇ ಆಗಿರುವಂತೆ, ಜೀವ-ಈಶ್ವರ-ಜಗತ್ತು ಎಲ್ಲವೂ ಒಂದೇ ಬ್ರಹ್ಮಸ್ವರೂಪವಿರುತ್ತವೆಂಬ ಸಿದ್ಧಾಂತಕ್ಕೆ ಜ್ಞಾನಿಯು ಬರುತ್ತಾನೆ. ಇದೇ ದ್ಧಾಂತವನ್ನು ವೇದಗಳೂ, ಸಂತರೂ, ಸಾರಿ ಸಾರಿ ಹೇಳುತ್ತಾರೆ. ಹೀಗೆ ದ್ವೈತಬೋಧದ... ॥ ೬ ॥ ಸಮುದ್ರಕ್ಕೆ ಉಪಮೆಯು ಸಮುದ್ರವೇ. ಸೂರ್ಯನಿಗೆ ಉಪಮೆಯು ಸೂರ್ಯನೇ. ಇದಕ್ಕಿಂತಲೂ ಒಳ್ಳೆಯ ಉಪಮೆ ಸಿಗಲಾರದು. ಅದರಂತೆ ಗುಣರಹಿತನಾದ ನಿರ್ಗುಣಬ್ರಹ್ಮನನ್ನು ಗುಣದಲ್ಲಿಯ ಉಪಮೆಗಳಿಂದ ವರ್ಣಿಸಲು ಯಾರಿಗೆ ಸಾಧ್ಯ? ಇಂಥ ಜ್ಞಾನಿಗೆ ಅದ್ವೈತಬೋಧದ... ॥ ೭ ॥ ಈ ಚಿತ್‌ಸರೋವರದಲ್ಲಿ ಜ್ಞಾನಿಗಳ ಮನಸ್ಸು ಹಂಸದಂತೆ ಇರುವುದು. ವಿಶ್ವದಲ್ಲಿದ್ದರೂ ಯಾವ ಬಂಧನಕ್ಕೊಳಗಾಗದೆ ಸ್ವತಂತ್ರರಾಗಿರುವರು. ಭಾಸ್ಕರನು ತಲ್ಲೀನನಾಗಿ ಆತ್ಮಾನುಭವದಲ್ಲಿ

ಮುಳುಗಿದನು. ಹೀಗೆ ಅವನಿಗೆ ಅದ್ವೈತ ಬೋಧದ ನಿರ್ಧಾರವು ಪೂರ್ಣವಾಯಿತು ॥ ೮ ॥

# ಕರುಣಾಷ್ಟಕಗಳು

## ಸೋಮವಾರ

ಜ್ಯಾ ಸಂಗತೀನೇಚ ವಿರಾಗ ಝಾಲಾ। ಮನೋದರೀಂಚಾ ಜಡಭಾಸ ಗೇಲಾ। ಸಾಕ್ಷಾತ್ಪರಾತ್ಮಾ ಮಜ ಭೇಟವೀಲಾ। ವಿಸರೂ ಕಸಾಮೀ ಗುರುಪಾದುಕಾಲಾ ॥ ೧ ॥ ಸದ್ಯೋಗಪಂಥೇ ಘರಿ ಆಣಿಯೇಲೇ। ಅಂಗೇಚ ಮಾತೇ ಪರಬ್ರಹ್ಮ ಕೇಲೇ। ಪ್ರಚಂಡ ತೋ ಬೋಧರವೀ ಉದೇಲಾ। ವಿಸರೂ.... ॥ ೨ ॥ ಚರಾಚರೀ ವ್ಯಾಪಕತಾ ಜಯಾಚೀ। ಅಖಂಡ ಭೇಟೀ ಮಜಲಾ ತಯಾಚೀ। ಪರಂಪದೀ ಸಂಗಮ ಪೂರ್ಣ ಝಾಲಾ। ವಿಸರೂ.... ॥ ೩ ॥ ಜೋ ಸರ್ವದಾ ಗುಪ್ತ ಜನಾತ ವಾಗೇ। ಪ್ರಪನ್ನ ಭಕ್ತಾ ನಿಜಬೋಧ ಸಾಂಗೇ। ಸದ್ಭಕ್ತಿ ಭಾವಾಕರಿತಾ ಭುಕೇಲಾ। ವಿಸರೂ.... ॥೪॥ ಅನಂತ ಮಾಝೇ ಅಪರಾಧ ಕೋಟೀ। ನಾಣೀ ಮನೀ ಘಾಲುನಿ ಸರ್ವ ಪೋಟೀ। ಪ್ರಬೋಧಿತಾ ತೋ ಶ್ರಮ ಫಾರ ಝಾಲಾ। ವಿಸರೂ.... ॥ ೫ ॥ ಕಾಹೀ ಮಲಾ ಸೇವನಹೀ ನ ಝಾಲೇ। ತಥಾಪಿ ತೇಣೇ ಮಜ ಉದ್ಧರಿಲೇ। ಆತಾ ತರೀ ಅರ್ಪಿನ ಪ್ರಾಣ ತ್ಯಾಲಾ। ವಿಸರೂ..... ॥ ೬ ॥ ಮಾಝಾ

ಅಹಂಭಾವ ಅಸೇ ಶರೀರೀ। ತಥಾಪಿ ತೋ ಸದ್ಗುರು ಅಂಗಿಕಾರೀ। ನಾಹೀ ಮನೀ ಅಲ್ಪ ವಿಕಾರ ಝಾಲಾ। ವಿಸರೂ.... ॥ ೭ ॥ ಆತಾ ಕಸಾ ಹಾ ಉಪಕಾರ ಫೇಡೂ। ಹಾ ದೇಹ ಓವಾಳುನೀ ದೂರ ಸೋಡೂ। ಮ್ಯಾಂ ಏಕಭಾವೇ ಪ್ರಣಿಪಾತ ಕೇಲಾ। ವಿಸರೂ.... ॥ ೮ ॥ ಜಯಾ ವಾನಿತಾ ವಾನಿತಾ ವೇದವಾಣೀ। ಮ್ಹಣೇ ನೇತಿ ನೇತಿ ತಿಲಾ ಜೇ ದುರೂನೀ। ನವ್ಹೇ ಅಂತ ನಾ ಪಾರ ಜ್ಯಾಚ್ಯಾ ರುಪಾಲಾ। ವಿಸರೂ.... ॥ ೯ ॥ ಜೋ ಸಾಧುಚಾ ಅಂಕಿತ ಜೀವ ಝಾಲಾ। ತ್ಯಾಚಾ ಅಸೇ ಭಾರ ನಿರುಂಜನಾಲಾ। ನಾರಾಯಣಾಚಾ ಭ್ರಮ ದೂರ ಕೇಲಾ। ವಿಸರೂ.... ॥ ೧೦ ॥

ಭಾವಾರ್ಥ: ಯಾವ ಸದ್ಗುರುವಿನ ಕೃಪೆಯಿಂದ ವೈರಾಗ್ಯವುಂಟಾಗಿ ಮನಸ್ಸಿನಲ್ಲಿಯ ಜಡಪ್ರಪಂಚದ ಮೋಹವು ಹೋಗಿ ಪರಮಾತ್ಮನ ದರ್ಶನವಾಯಿತೋ ಅಂಥ ಗುರುವಿನ ಪಾದಗಳನ್ನು ನಾನು ಹೇಗೆ ಮರೆಯಲಿ? ಯಾರು ಯೋಗಮಾರ್ಗದಿಂದ ಬ್ರಹ್ಮಸ್ವರೂಪ ತಾಳುವಂತೆ ಮಾಡಿದರೋ, ಯಾರ ಕೃಪೆಯಿಂದ ಬೋಧಸೂರ್ಯನು ಉದಯಿಸಿದನೋ, ಅಂಥ ಸದ್ಗುರುವಿನ ಪಾದಗಳನ್ನು ನಾನು ಹೇಗೆ ಮರೆಯಲಿ? ಚರಾಚರ ಸೃಷ್ಟಿಯನ್ನೆಲ್ಲ ವ್ಯಾಪಿಸಿದ ಗುರುವು ನನಗೆ ನಿರಂತರವಾಗಿ ಭೆಟ್ಟಿಯಾಗುವನು. ಯಾರಿಂದ ಪರಮಪದದಲ್ಲಿ ಐಕ್ಯತೆವುಂಟಾಯಿತೋ ಅಂಥ ಗುರುವಿನ ಪಾದಗಳನ್ನು ನಾನು ಹೇಗೆ ಮರೆತೇನು? ಯಾರು ಯಾವಾಗಲೂ ಗುಪ್ತ ರೀತಿಯಲ್ಲಿ ಸಂಚರಿಸುತ್ತ ಶರಣುಬಂದ ಭಕ್ತರಿಗೆ ಸ್ವರೂಪಬೋಧನೆಯನ್ನು ಮಾಡುವರೋ, ಮತ್ತು

## ಕರುಣಾಷ್ಟಕಗಳು

ಅನನ್ಯಭಕ್ತಿಭಾವಕ್ಕಾಗಿ ಯಾರು ಹಸಿದಿರುವರೋ, ಅಂಥ ಗುರುಪಾದಗಳನ್ನು ನಾನು ಹೇಗೆ ಮರೆಯಲಿ? ನನ್ನ ಅಪರಾಧಗಳು ಅನಂತವಾಗಿದ್ದು ಕೋಟಿಗಟ್ಟಲೆ ಇವೆ; ಅವುಗಳನ್ನು ಮನಸ್ಸಿನಲ್ಲಿ ತರದೆ ಹೊಟ್ಟೆಯಲ್ಲಿ ಹಾಕಿಕೊಂಡು ನನ್ನನ್ನು ಎಚ್ಚರಿಸಿದರು. ಅವರಿಗೆ ಶ್ರಮವೆಷ್ಟಾಗಿರಬಹುದು? ಅಂಥ ಗುರುಪಾದಗಳನ್ನು ನಾನು ಹೇಗೆ ಮರೆಯಲಿ? ನನ್ನಿಂದ ಯಾವ ಸೇವೆ ಸಲ್ಲದಿದ್ದರೂ, ನನ್ನನ್ನು ಯಾರು ಉದ್ಧರಿಸಿದರೋ ಅಂಥ ಗುರುವಿಗೆ ಈಗಲಾದರೂ ಪ್ರಾಣಾರ್ಪಣೆ ಮಾಡುವೆನು. ಇಂಥ ಗುರುಪಾದಗಳನ್ನು ನಾನು ಹೇಗೆ ಮರೆಯಲಿ? ನನ್ನಲ್ಲಿ ಅಹಂಭಾವವಿದ್ದರೂ, ಗುರುಗಳು ನನ್ನನ್ನು ಅಂಗೀಕರಿಸಿದರು. ನನ್ನ ಬಗ್ಗೆ ಅವರಿಗೆ ಲವಲೇಶವಾದರೂ ಯಾವ ವಿಕಲ್ಪವಾಗಲಿಲ್ಲ. ಅಂಥ ಗುರುವಿನ ಪಾದಗಳನ್ನು ಹೇಗೆ ಮರೆಯಲಿ? ಈ ಉಪಕಾರವನ್ನು ಹೇಗೆ ತೀರಿಸಲಿ? ಈ ದೇಹವನ್ನು ನಿವಾಳಿಸಿ ಒಗೆದರೂ ಅದು ತೀರದೆಂದು ಭಕ್ತಿಯಿಂದ ಸಾಷ್ಟಾಂಗ ನಮಸ್ಕಾರ ಮಾಡುವೆನು. ಇಂಥ ಗುರುವಿನ ಪಾದಗಳನ್ನು ಹೇಗೆ ಮರೆಯಲಿ? ಯಾರ ಸ್ವರೂಪ ಸ್ಥಿತಿಯನ್ನು ವರ್ಣಿಸಲಿಕ್ಕೆ ವೇದಗಳಿಗೂ ಸಾಧ್ಯವಾಗದೆ "ನೇತಿ ನೇತಿ" ಎಂದು ಘೋಷಿಸಿದವೋ, ಯಾರ ಸ್ವರೂಪಕ್ಕೆ ತುದಿ ಮೊದಲಿಲ್ಲವೋ, ಅಂಥ ಗುರುವಿನ ಪಾದಗಳನ್ನು ಹೇಗೆ ಮರೆತೇನು? ಯಾವ ಜೀವನು ಸದ್ಗುರುವಿನ ವಶನಾಗುವನೋ ಅವನ ಭಾರವು ಪರಮಾತ್ಮನ ಮೇಲೆ ಇರುವುದು. ನಾರಾಯಣನ ಭ್ರಮೆ ದೂರ ಮಾಡಿದನು. ಅಂಥ ಗುರುವಿನ ಪಾದಗಳನ್ನು ಹೇಗೆ ಮರೆಯಲಿ?

# ನಿತ್ಯನೇಮಾವಲಿ

## ಮಂಗಳವಾರ

(೧)

ಸಮಾಧಾನ ಸಾಧುಜನಾಚೇನಿ ಯೋಗೇ। ಪರಿ ಮಾಗುತೇ ದುಃಖ ಹೋತೇ ವಿಯೋಗೇ। ಘಡೀನೇ ಘಡೀ ಶೀಣ ಅತ್ಯಂತ ವಾಟೇ। ಉದಾಸೀನ ಹಾ ಕಾಳ ಕೋಠೇ ನ ಕಂಠೇ ॥ ೧ ॥ ಘರೇ ಸುಂದರೇ ಸೌಖ್ಯ ನಾನಾಪರೀಚೇ। ಪರೀ ಕೋಣ ಜಾಣೇಲ ತೇ ಅಂತರೀಚೇ। ಮನೀ ಆಠವಿತಾಚಿ ತೋ ಕಂಠ ದಾಟೇ। ಉದಾಸೀನ.... ॥ ೨ ॥ ಬಳೇ ಲಾವಿತಾ ಚಿತ್ತ ಕೋಠೇ ಜಡೇನಾ। ಸಮಾಧಾನ ತೇ ಕಾಹೀ ಕೇಲ್ಯಾ ಘಡೇನಾ। ನಯೇ ಧೀರ ಡೋಳಾ ಸದಾ ನೀರ ಲೋಟೇ। ಉದಾಸೀನ.... ॥ ೩ ॥ ಅವಸ್ಥಾ ಮನೀ ಲಾಗಲೀ ಕಾಯ ಸಾಂಗೋ। ಗುಣೇ ಗುಂತಲಾ ಹೇತ ಕೋಣಾಸಿ ಮಾಗೋ। ಬಹೂಸಾಲ ಭೇಟಾವಯ ಪ್ರಾಣ ಫೂಟೇ। ಉದಾಸೀನ.... ॥ ೪ ॥ ಕೃಪಾಳೂಪಣೇ ಭೇಟ ರೇ ರಾಮರಾಯಾ। ವಿಯೋಗೇ ತುಝ್ಯಾ ಸರ್ವ ವ್ಯಾಕೂಳ ಕಾಯಾ। ಜನಾಮಾಜಿ ಲೌಕೀಕ ಹಾಹೀ ನ ಸೂಟೇ। ಉದಾಸೀನ.... ॥ ೫ ॥ ಅಹಾ ರೇ ವಿಧೀ ತ್ವಾಂ ಅಸೇ ಕಾಯ ಕೇಲೇ। ಪರಾಧೀನತಾ ಪಾಪ ಮಾಝೀ ಉದೇಲೇ। ಬಹೂತಾಮಧೇ ಚೂಕತಾ ತೂಕ ತೂಟೇ। ಉದಾಸೀನ.... ॥ ೬ ॥ ಸಮರ್ಥಾ ಮನೀ ಸಾಂಡಿ ಮಾಝೀ ನಸಾವೀ। ಸದಾ ಸರ್ವದಾ ಭಕ್ತಚಿಂತಾ ಅಸಾವೀ। ಘಡೇನಾ ತುಝಾ ಯೋಗ ಹಾ ಪ್ರಾಪ್ತ ಖೋಟೇ। ಉದಾಸೀನ.... ॥ ೭ ॥ ಅಖಂಡೀತ ಹೇ

## ಕರುಣಾಷ್ಟಕಗಳು

ಸಾಂಗ ಸೇವಾ ಘಡಾವೀ। ನ ಹೋತಾ ತುಝೀ ಭೇಟಿ ಕಾಯಾ ಪಡಾವೀ। ದಿಸೇಂದೀಸ ಆಯುಷ್ಯ ಹೇ ವ್ಯರ್ಥ ಲೋಟೇ। ಉದಾಸೀನ.... ॥ ೮ ॥ ಭಜೋ ಕಾಯ ಸರ್ವಾಪರೀ ಹೀನ ದೇವಾ। ಕರೂ ಕಾಯ ರೇ ಸರ್ವ ಮಾಝಾಚಿ ಠೇವಾ। ಮ್ಹಣೋ ಕಾಯ ಮೀ ಕರ್ಮರೇಖಾ ನ ಲೋಟೇ। ಉದಾಸೀನ.... ॥ ೯ ॥ ಮ್ಹಣೇ ದಾಸ ಮೀ ವಾಟ ಪಾಹೇ ದಯಾಳಾ। ರಘೂನಾಯಕಾ ಭಕ್ತಪಾಳಾ ಭುಪಾಳಾ। ಪಹಾವೇ ತುಲಾ ಹೇ ಜಿವೀ ಆರ್ತ ಮೋಠೇ। ಉದಾಸೀನ.... ॥ ೧೦ ॥

ಭಾವಾರ್ಥ: ಸಾಧು ಜನರ ಯೋಗದಿಂದ (ಸತ್ಸಂಗದಿಂದ) ಸಮಾಧಾನ ಸಿಗುತ್ತದೆ; ಆದರೆ ಸತ್ಸಂಗದ ಅಗಲುವಿಕೆಯಿಂದ ದುಃಖವಾಗುತ್ತದೆ. ಕ್ಷಣಕ್ಷಣಕ್ಕೂ ಜೀವನವು ಹೇಯವೆಂದೆನಿಸುತ್ತದೆ. ಉದಾಸೀನನಾದದ್ದರಿಂದ ಬಾಳುವೆ ಸಾಗಿಸುವದು ಅತಿ ಘೋರವಾಗಿದೆ. ನಾನಾತರದ ಸುಖ ಎಂದರೆ ಸುಂದರವಾದ ಮನೆಗಳು ಮುಂತಾದ ಐಹಿಕ ಸುಖಗಳು ಇವೆ. ಆದರೆ ಮನಸ್ಸಿನಲ್ಲಿಯ ವೇದನೆಯನ್ನು ಯಾರೂ ಅರಿಯರು. ಈ ದ್ವಂದ್ವಭಾವನೆಯಿಂದ ಕಂಠವು ಬಿಗಿದು ಬರುವುದು. ಬಲವಂತದಿಂದ ಮನಸ್ಸನ್ನು ಹತೋಟಿಯಲ್ಲಿಡಲೂ ಬರುವುದಿಲ್ಲ. ಏನು ಮಾಡಿದರೂ ಮನಸ್ಸಿಗೆ ಸಮಾಧಾನವಿಲ್ಲ. ಕಣ್ಣೀರು ಧಾರಾಕಾರವಾಗಿ ಬರುತ್ತದೆ. ಧೈರ್ಯವೆಲ್ಲ

ಅಡಗಿಹೋಯಿತು. ಮನಸ್ಸಿನಲ್ಲಿ ನಡೆದಿರುವ ಸಂಘರ್ಷವನ್ನು ಹೇಗೆ ಹೇಳಲಿ? ಪ್ರಪಂಚದಲ್ಲಿ ಮುಳುಗಿರುವೆ. ನನ್ನ ಜೀವಿತದ ಆದರ್ಶವನ್ನು ಯಾರಿಗೆ ಬೇಡಲಿ? ಪರಮೇಶ್ವರನ ಭೆಟ್ಟಿಗಾಗಿ ಪ್ರಾಣವು ಹಾತೊರೆಯುತ್ತಿರುವುದು. ಆದ್ದರಿಂದ ರಾಮಾರಾಯಾ, ಕೃಪೆ ಮಾಡಿ ಭೆಟ್ಟಿಯಾಗು; ನೀನು ಇಲ್ಲವಾದರೆ ವ್ಯಾಕುಲತೆ ಆವರಿಸುವುದು. ಲೌಕಿಕವನ್ನೂ ಬಿಡುವಂತಿಲ್ಲ. ಏನು ಮಾಡಲಿ? ಎಲೈ ವಿಧಿಯೇ, ನೀನು ಹೀಗೇಕೆ ತಮಾಷೆ ಮಾಡುತ್ತಿದ್ದೀ. ಪರತಂತ್ರವೆಂಬ ನನ್ನ ಪಾಪವು ಪ್ರಕಟವಾಯಿತಲ್ಲ. ದೇವರೇ, ನನ್ನ ಕೈಬಿಡಬೇಡ. ನಿನ್ನ ಯೋಗವು ಲಭಿಸದು; ಅದು ಸುಲಭಸಾಧ್ಯವಿಲ್ಲ. ಆದ್ದರಿಂದ ಸಮರ್ಥಾ, ನನ್ನ ದೇಹಬುದ್ಧಿ ಹೋಗಬೇಕು. ನಿನಗೆ ಭಕ್ತನ ಚಿಂತೆ ಹತ್ತಬೇಕು. ನಿನ್ನ ಸೇವೆಯು ಅಖಂಡವಾಗಿ ನನಗೆ ಸಿಗಬೇಕು. ಇಲ್ಲದಿದ್ದರೆ ಈ ದೇಹವು ನಶಿಸಿಹೋಗಬೇಕು. ಇಲ್ಲವಾದರೆ ದಿನದಿನಕ್ಕೂ ವ್ಯರ್ಥವಾಗಿ, ಆಯುಷ್ಯ ಹಾಳಾಗುತ್ತದೆ. ನಾನು ಎಲ್ಲರಿಗಿಂತ ಹೀನನಾಗಿರುವುದರಿಂದ, ನಿನ್ನ ಭಜನೆಯನ್ನು ಹೇಗೆ ಮಾಡೇನು? ಎಲ್ಲವೂ ಪೂರ್ವಸಂಚಿತ ಕರ್ಮವಾಗಿದ್ದು ವಿಧಿರೇಖೆಯನ್ನು ಅಳಿಸಲಾಗದು. ನಿನ್ನ ದರ್ಶನದ ದಾರಿಯನ್ನೇ ಕಾಯುತ್ತಲಿರುವೆ; ಹೇ ದಯಾಳುವಾದ ರಘೂನಾಯಕಾ, ಭಕ್ತಪರಿಪಾಲಕಾ, ಈ ಜನ್ಮದಲ್ಲಿ ನಿನ್ನ ದರ್ಶನ ಪಡೆಯಬೇಕೆಂಬ ಹಂಬಲ ನನಗಿದೆ ದೇವಾ, ಎಂದು ರಾಮದಾಸರು ಹೇಳುತ್ತಾರೆ. ಜಯಜಯ ರಘುವೀರ ಸಮರ್ಥ.

## ಕರುಣಾಷ್ಟಕಗಳು

### ಮಂಗಳವಾರ

### (೨)

ವೃಥಾ ಹಿಂಪುಟೀ ಕಾಸಯಾಲಾಗಿ ಹೋತಾ। ಗೃಹೀ ಆಯತಾ ಮೋಕ್ಷಲಾಭೇ ಸ್ವಹಸ್ತಾ। ವದೇ ಏಕ ಸಾಂಗೋ ತಶಾ ಸಾಧನಾಲಾ। ಮುಖೀ ರಾಮಚಂದ್ರ ಸ್ಮರಾ ವೇಳೋವೇಳಾ ॥ ೧ ॥ ಸ್ನುಷಾ ಪಾಂಡುಚೀ ದ್ರೌಪದೀ ರಾಜಕನ್ಯಾ। ಮುಖೀ ಕೃಷ್ಣನಾಮೇ ಸ್ಮರೇ ಲೋಕಮಾನ್ಯಾ। ಸಭೇಮಾಜಿ ವಸ್ತ್ರ-ಪ್ರದಾತಾ ತಿಯೇಲಾ। ಮುಖೀ.... ॥ ೨ ॥ ಬುಡೋ ಹೀ ಧರಾ ಕೀ ಲಯಾ ವಿಶ್ವ ಜಾವೋ। ಪಡೋ ಕಾಳಹಸ್ತೇ ಶಿರೀ ವಜ್ರ ಘಾವೋ। ವಿಸಂಬೇಚಿನಾ ಸರ್ವಥಾ ನಾಮಮಾಲಾ। ಮುಖೀ.... ॥ ೩ ॥ ನಕಾ ಯಾಗ ಮಾಂಡೂ ನಕಾ ಪ್ರಾಣ ಕೋಂಡೂ। ನಕಾ ದ್ರವ್ಯದಾರಾ ಘರೇ ಭೋಗ ಸೋಡೂ। ನಕಾ ಕಷ್ಟವೂ ಪರ್ವತಾಗ್ರೀ ತನೂಲಾ। ಮುಖೀ.... ॥ ೪ ॥ ವಧೂ ಗೌತಮಾಚೀ ಪತೀಶಾಪಡೋಹಿ। ಬುಡಾಲೀ ಅಥಾಂಬೀ ಶಿಲಾರೂಪ ಹೋಯೀ। ಪದೀ ಉದ್ಧರೀ ಜೋ ವಿರಂಚ್ಯಾತ್ಮಜೇಲಾ। ಮುಖೀ.... ॥ ೫ ॥ ರಘೂನಾಥರಾಜೇ ಋಜೇ ದೇಹ ಜ್ಯಾಚಾ। ನ ತ್ಯಾ ಪ್ರಾಪ್ತ ಬೋಲೋ ಶಕೇ ವೇದವಾಚಾ। ಜಟಾಯೂ ವಿಮಾನೀ ಸುಖೀ ಬೈಸವೀಲಾ। ಮುಖೀ.... ॥ ೬ ॥ ಫಳೇ ಭಿಲ್ಲಿಣೀ ವೇಚಿತಾ ಗಾತ ಓವೀ। ಜಿಭೇ ಗೋಡ ತೀ ರಾಘವಾಲಾಗಿ ಠೇವೀ। ತಿಚ್ಯಾ ಆವಡೀ ಭಕ್ತಿಲಾಗೀ ಭುಕೇಲಾ। ಮುಖೀ.... ॥ ೭ ॥ ಪ್ರತಾಪೇ ಬಳೇ ನಾಮ ತಾರೀ ಶಿಲೇತೇ। ರಣೀ ಭೇಡತಾ ಶ್ರೇಯ ಗೋಲಾಂಗುಲಾತೇ। ನಸೇ

ತಾಪ ತ್ಯಾಲಾ ರುಚೇ ನಾಮ ಜ್ಯಾಲಾ। ಮುಖೀ.... ॥ ೮ ॥ ಆಶಾ ನಿಶ್ಚಯೇ ಠಾಮನೇ ಯಾ ಮನಾಲಾ। ಸುಖಪ್ರಾಪ್ತಿಲಾಗೀ ಅಸಾ ಬೋಧ ಕೇಲಾ। ಮ್ಹಣೋನಿ ತುಮ್ಹಾ ಪ್ರಾರ್ಥಿತೋ ಭಾವಿಕಾಲಾ। ಮುಖೀ.... ॥ ೯ ॥

ಭಾವಾರ್ಥ: ವ್ಯರ್ಥವಾಗಿ ಏಕೆ ಕಷ್ಟಪಡುತ್ತೀರಿ? ಮನೆಯಲ್ಲಿದ್ದುಕೊಂಡೇ ಮೋಕ್ಷಪ್ರಾಪ್ತಿಯಾಗುವ ಒಂದು ಸಾಧನವನ್ನು ಹೇಳುತ್ತೇನೆ. ಅದೇನೆಂದರೆ ಮೇಲಿಂದ ಮೇಲೆ ರಾಮಸ್ಮರಣೆ ಮಾಡಿರಿ. ಪಾಂಡವರ ಸೊಸೆ ದ್ರೌಪದಿ ತುಂಬಿದ ಸಭೆಯಲ್ಲಿ ಕೃಷ್ಣನನ್ನು ಪ್ರಾರ್ಥಿಸಿದಾಗ ವಸ್ತ್ರವನ್ನು ಅವನು ದಯಪಾಲಿಸಿದನು. ನಾಮಸ್ಮರಣೆ ಮಾಡಿರಿ, ಭೂಮಿಯು ಮುಳುಗಿ ವಿಶ್ವ ಪ್ರಳಯವಾದರೂ ಚಿಂತೆ ಇಲ್ಲ. ಯಮದೂತರು ಎಳೆದೊಯ್ಯುವಾಗಲೂ ತಲೆಯ ಮೇಲೆ ವಜ್ರಾಘಾತವಾಗುವಾಗಲೂ ನಾಮಸ್ಮರಣೆ ಮರೆಯಬೇಡಿರಿ. ಯಾಗ ಬೇಡ, ವಾಯು ಬಂಧನ ಬೇಡ; ಹೆಂಡತಿ, ದ್ರವ್ಯ, ಮನೆಯ ಸುಖವನ್ನು ಬಿಡಬೇಡಿರಿ. ಅಡವಿಗೆ ಹೋಗಿ ಕಷ್ಟಪಡಬೇಡಿರಿ. ನಾಮಸ್ಮರಣೆ ಮೇಲಿಂದಮೇಲೆ ಮಾಡಿರಿ. ಪತಿಯ ಶಾಪದಿಂದ ಶಿಲೆಯಾದ ಅಹಲ್ಯೆಯನ್ನು ತನ್ನ ಪಾದಸ್ಪರ್ಶದಿಂದ ಉದ್ಧರಿಸಿದ ಶ್ರೀರಾಮನ ನಾಮ ತೆಗೆದುಕೊಳ್ಳಿರಿ. ರಾಮನ ಕಾರ್ಯಕ್ಕಾಗಿ ತನ್ನ ದೇಹವನ್ನೇ ಅರ್ಪಿಸಿದ ಹಾಗೂ ವೇದಗಳನ್ನು ಅರಿಯದ ಜಟಾಯುವಿಗೆ ವಿಮಾನದಲ್ಲಿ ಕೂಡಿಸಿ ನಿಜಧಾಮಕ್ಕೆ ಕಳಿಸಿದ ಶ್ರೀರಾಮನನ್ನು ನೆನೆಯಿರಿ. ರಾಮನಾಮ ಹಾಡುತ್ತ, ಹಣ್ಣು ಕಚ್ಚಿ ಕಚ್ಚಿ ನೋಡಿ ಸಿಹಿ ಹಣ್ಣುಗಳನ್ನು ತಿನ್ನಲಿಕ್ಕೆ ಕೊಟ್ಟ, ಶಬರಿಯ ಭಕ್ತಿಗೆ ಮಾರುಹೋದ

## ಕರುಣಾಷ್ಟಕಗಳು

ಶ್ರೀರಾಮನ ಸ್ಮರಣೆ ಬಿಡಬೇಡಿರಿ. ನಾಮದ ಪ್ರಭಾವದಿಂದ ಕಲ್ಲುಗಳೂ ಸಮುದ್ರದಲ್ಲಿ ತೇಲಿದವು. ಶ್ರೀರಾಮನು ತಾನೇ ಯುದ್ಧದಲ್ಲಿ ಗೆದ್ದರೂ ಶ್ರೇಯವನ್ನೆಲ್ಲ ವಾನರರಿಗೆ ಕೊಟ್ಟನು. ನಾಮದ ರುಚಿಯನ್ನು ಸವಿದವರಿಗೆ ಭವದ ತಾಪವಿಲ್ಲ. ಮನಸ್ಸಿನಿಂದ ನಿಶ್ಚಯಿಸಿ ನಿಜಸುಖಪ್ರಾಪ್ತಿಗೋಸ್ಕರ ನಾಮಸ್ಮರಣೆಮಾಡಿರೆಂದು ಎಲ್ಲ ಭಾವಿಕರಿಗೆ ವಾಮನಕವಿಯು ಪ್ರಾರ್ಥಿಸುತ್ತಾನೆ.

### ಬುಧವಾರ

ಯುಕ್ತಿ ನಾಹೀ ಬುದ್ಧಿ ನಾಹೀ ವಿದ್ಯಾ ನಾಹೀ ವಿವಂಚಿತಾ। ನೇಣತಾ ಭಕ್ತ ಮೀ ತೂಝಾ। ಬುದ್ಧಿ ದೇಂ ರಘುನಾಯಕಾ ॥ ೧ ॥ ಮನ ಹೇ ಆವರೇನಾ ಕೀ ವಾಸನಾ ವಾವರೇ ಸದಾ। ಕಲ್ಪನಾ ಧಾವತೇ ಸೈರಾ ಬುದ್ಧಿ ದೇ.... ॥ ೨ ॥ ಅನ್ನ ನಾಹೀ ವಸ್ತ್ರ ನಾಹೀ ಸೌಖ್ಯ ನಾಹೀ ಜನಾಮಧೇ। ಆಶ್ರಯೋ ಪಾಹತಾ ನಾಹೀ ಬುದ್ಧಿ ದೇ.... ॥ ೩ ॥ ಬೋಲತಾ ಚಾಲತಾ ಏನಾ ಕಾರ್ಯಭಾಗ ಕಳೇಚಿನಾ। ಬಹೂತ ಪೀಡಲೋ ಲೋಕೀ ಬುದ್ಧಿ ದೇ.... ॥ ೪ ॥ ತುಝಾ ಮೀ ಟೋಣಪಾ ಝಾಲೋ। ಕಷ್ಟಲೋ ಬಹುತಾ ಪರೀ। ಸೌಖ್ಯ ತೋ ಪಾಹತಾ ನಾಹೀ ಬುದ್ಧಿ ದೇ.... ॥ ೫ ॥ ನೇಟಕೇ ಲಿಹಿತಾ ಯೇನಾ ವಾಚಿತಾ ಚುಕತೋ ಸದಾ। ಅರ್ಥ ತೋ ಸಾಂಗತಾ ಯೇನಾ ಬುದ್ಧಿ ದೇ.... ॥ ೬ ॥ ಪ್ರಸಂಗ ವೇಳ ತರ್ಕೇನಾ ಸುಚೇನಾ ದೀರ್ಘ ಸೂಚನಾ। ಮೈತ್ರಿಕೀ ರಾಖಿತಾ

ಯೇನಾ ಬುದ್ಧಿ ದೇ.... ॥ ೭ ॥ ಸಂಸಾರೀ ಶ್ಲಾಘ್ಯತಾ ನಾಹೀ ಸರ್ವಹೀ ಲೋಕ ಹಾಸತೀ। ವಿಸರೂ ಪಡತೋ ಪೋಟೀ ಬುದ್ಧಿ ದೇ.... ॥ ೮ ॥ ಚಿತ್ತ ದುಶ್ಚಿತ್ತ ಹೋತೇ ಹೇ ತಾಳತಂತ್ರ ಕಳೇಚಿನಾ। ಆಳಸೂ ಲಾಗಲಾ ಫಾರೀ ಬುದ್ಧಿ ದೇ.... ॥ ೯ ॥ ಕಳೇನಾ ಸ್ಫೂರ್ತಿ ಹೋಯೀನಾ ಆಪದಾ ಲಾಗಲೀ ಬಹೂ। ಪ್ರತ್ಯಹೀ ಪೋಟ ಸೋಡೀನಾ ಬುದ್ಧಿ ದೇ.... ॥ ೧೦ ॥ ಸಂಸಾರ ನೇಟಕಾ ನಾಹೀ ಉದ್ವೇಗ ವಾಟತೋ ಜಿವೀ। ಪರಮಾರ್ಥ ಆಕಳೇನಾ ಕೀ ಬುದ್ಧಿ ದೇ.... ॥ ೧೧ ॥ ದೇಯೀನಾ ಪುರ್ವೀನಾ ಕೋಣ್ಹೀ ಉಗೇಚೀ ಜನ ಹಾಸತೀ। ಲೌಕಿಕ ರಾಖಿತಾ ಯೇನಾ ಬುದ್ಧಿ ದೇ.... ॥ ೧೨ ॥ ಪಿಸುಣೇ ವಾಟತೀ ಸರ್ವೇ ಕೋಣೇಹೀ ಮಜಲಾ ನಸೇ। ಸಮರ್ಥಾ ತೂ ದಯಾಸಿಂಧೂ ಬುದ್ಧಿ ದೇ.... ॥ ೧೩ ॥ ಉದಾಸ ವಾಟತೇ ಜೀವೀ ಆತಾ ಜಾವೇ ಕುಣೇಕಡೇ। ತೂ ಭಕ್ತವತ್ಸಲಾ ರಾಮಾ ಬುದ್ಧಿ ದೇ ॥ ೧೪ ॥ ಕಾಯಾವಾಚಾ ಮನೋಭಾವೇ ತುಝಾ ಮೀ ಮ್ಹಣವೀತಸೇ। ಹೇ ಲಾಜ ತುಜಲಾ ಮಾಝೀ ಬುದ್ಧಿ ದೇ.... ॥ ೧೫ ॥ ಸೋಡವಿಲ್ಯಾ ದೇವಕೋಟೀ ಭೂಭಾರ ಫೇಡಿಲಾ ಬಳೇ। ಭಕ್ತಾಸೀ ಆಶ್ರಯೋ ಮೋಠಾ ಬುದ್ಧಿ ದೇ.... ॥ ೧೬ ॥ ಉದಂಡ ಭಕ್ತ ತುಮ್ಹಾಲಾ ಆಮ್ಹಾಲಾ ಕೋಣ ಪುಸತೇ। ಬ್ರೀದ ಹೇ ರಾಖಣೇ ಆಧೀ ಬುದ್ಧಿ ದೇ.... ॥ ೧೭ ॥ ಉದಂಡ ಐಕಿಲೀ ಕೀರ್ತಿ ಪತಿತಪಾವನಾ ಪ್ರಭು। ಮೀ ಏಕ ರಂಕ ದುರ್ಬುದ್ಧಿ ಬುದ್ಧಿ ದೇ.... ॥ ೧೮ ॥ ಆಶಾ ಹೇ ಲಾಗಲೀ ಮೋಠೀ ದಯಾಳೂ

ಬಾ ಕೃಪಾ ಕರೀ। ಆಣಿಕ ನಲಗೇ ಕಾಹೀ ಬುದ್ಧಿದೇ.... ॥ ೧೯ ॥ರಾಮದಾಸ ಮ್ಹಣೇ ಮಾಝ್ಯಾ ಸಂಸಾರ ತುಜ ಲಾಗಲಾ। ಸಂಶಯೋ ವಾಟತೋ ಫೋಟೀ ಬುದ್ಧಿ ದೇ ॥ ೨೦ ॥ ಜಯ ಜಯ ರಘುವೀರ ಸಮರ್ಥ॥

ಭಾವಾರ್ಥ: ರಘೂನಾಯಕಾ, ನಾನು ಯುಕ್ತಿಯನ್ನರಿಯೆ, ಬುದ್ಧಿಯನ್ನರಿಯೆ, ವಿದ್ಯೆಯನ್ನರಿಯೆ, ಇಂಥ ಅಜ್ಞಾನಿ ಭಕ್ತ ನಾನು. ನನಗೆ (ಈಶ್ವರ ಪ್ರಾಪ್ತಿಯ) ಬುದ್ಧಿ ಕೊಡು. ಮನಸ್ಸು ವಶದಲ್ಲಿರಲಾರದು, ದುಷ್ಟವಾಸನೆಗಳು ಹೋಗಲಾರವು, ಸ್ವಚ್ಛಂದವೃತ್ತಿಯಿಂದ ವಿಷಯ ಕಲ್ಪನೆಗಳ ಕಡೆಗೆ ಮನಸ್ಸು ಓಡುತ್ತದೆ. ನನಗೆ ಅನ್ನವಿಲ್ಲ, ವಸ್ತ್ರವಿಲ್ಲ, ಸೌಖ್ಯವಿಲ್ಲ. ಆಪತ್ತು ಬಂದಾಗ ಯಾರ ಆಶ್ರಯವೂ ಇಲ್ಲ, ಮಾತು ಬರುವುದಿಲ್ಲ, ನಡೆಯಲು ಬರದು. ಕಾರ್ಯಪ್ರವೃತ್ತಿ ತಿಳಿಯುವುದಿಲ್ಲ. ಸಂಸಾರದಲ್ಲಿ ಬಹಳ ಕಷ್ಟಪಟ್ಟಿದ್ದೇನೆ. ಆಲಸ್ಯದಿಂದ ಮುತ್ಕಾಳುವಿನಂತೆ ಅಡ್ಡಾಡಿ ಕಷ್ಟಪಟ್ಟಿದ್ದೇನೆ. ಸುಖವು ಕಾಣಲಾರದು. ಸರಿಯಾಗಿ ಓದಲಾರೆ, ಬರೆಯಲಾರೆ, ಅರ್ಥ ತಿಳಿಯುವದಂತೂ ದೂರದ ಮಾತು. ಹೊತ್ತು-ಪ್ರಸಂಗವನ್ನು ತಿಳಿಯಲಾರೆ. ದೂರದೃಷ್ಟಿಯ ಸೂಚನೆ ಕೂಡ ಇಲ್ಲ. ಮಿತ್ರತ್ವ ಕಾಪಾಡಿಕೊಳ್ಳುವ ಸಾಮರ್ಥ್ಯವೂ ಇಲ್ಲ. ಸಂಸಾರದಲ್ಲಿ ಹೊಗಳಿಕೆಯ ಬದಲು ಎಲ್ಲರೂ ನನ್ನನ್ನು ಪರಿಹಾಸ ಮಾಡುತ್ತಾರೆ. ಅಂತಃಕರಣದಲ್ಲಿ ವಿಸ್ಮರಣೆಯಾಗುತ್ತದೆ. ಚಿತ್ತವು ದುಷ್ಟವಾಸನೆಯಿಂದ ಕೂಡಿದೆ. ಅದನ್ನು ನಿವಾರಿಸುವ ಬಗೆ ತಿಳಿಯಲಾರೆ. ಆಲಸ್ಯ ಬೆನ್ನು ಹತ್ತಿದೆ.

# ನಿತ್ಯನೇಮಾವಲಿ

ದೇವಾ, ಯಾವುದೂ ತಿಳಿಯಲೊಲ್ಲದು. ಸ್ಫೂರ್ತಿ ಇಲ್ಲ. ಸಂಕಟಗಳು ಬೆನ್ನಟ್ಟಿವೆ. ಹೊಟ್ಟೆಯ ಹಸಿವು ಅಹರ್ನಿಶಿ ಕಾಡುತ್ತದೆ. ಸಂಸಾರವು ಸಮಾಧಾನಕರವಿಲ್ಲ. ಉದ್ವೇಗ ಹೆಚ್ಚಾಗಿದೆ. ಪರಮಾರ್ಥದ ಬುದ್ಧಿ ಹುಟ್ಟಲೊಲ್ಲದು. ಯಾರೂ ಏನನ್ನೂ ಕೊಡುವುದಿಲ್ಲ. ಸುಮ್ಮನೆ ನೋಡಿ ನಗುತ್ತಾರೆ. ಹೀಗಾಗಿ ಲೌಕಿಕದಲ್ಲಿ ಇರುವುದೂ ಕಷ್ಟವಾಗಿದೆ. ಎಲ್ಲರೂ ನನ್ನನ್ನು ಹೀಯಾಳಿಸುವವರೇ. ಸಮರ್ಥಾ, ದಯಾಸಿಂಧುವಾದ ನೀನು ನನಗೆ ಸದ್ಬುದ್ಧಿ ಕೊಡು. ಜೀವವೇ ಬೇಡ ಎಂದೆನಿಸಹತ್ತಿದೆ. ಆದರೆ ಎಲ್ಲಿ ಹೋಗಲಿ? ರಾಮಾ ನೀನು ಭಕ್ತವತ್ಸಲನು. ಕಾಯಾ-ವಾಚಾ-ಮನಸಾ, ನಾನು ನಿನ್ನವನು. ನನ್ನನ್ನು ರಕ್ಷಣೆ ಮಾಡುವ ಹೊಣೆ ನಿನ್ನದು. ದೇವಾ ನೀನು ಅಸಂಖ್ಯ ದೇವತೆಗಳನ್ನು ಮುಕ್ತಮಾಡಿ, ಭೂ-ಭಾರವನ್ನು ಇಳಿಸಿದಿ. ಭಕ್ತರಿಗೆ ಆಶ್ರಯದಾತನು. ಶ್ರೇಷ್ಠ ಭಕ್ತರಿರುವಾಗ ನನ್ನಂಥ ಪಾಮರನನ್ನು ಯಾರು ಕೇಳುವರು? ನನ್ನ ಮಾನರಕ್ಷಣೆ ನಿನ್ನ ಕೆಲಸ. ನಿನ್ನ ಕೀರ್ತಿ ದಿಗಂತದವರೆಗೂ ಕೇಳುತ್ತದೆ. ನೀನು ಪತಿತ-ಪಾವನಾ, ನಾನು ದರಿದ್ರ ಮಾನವ. ಭಗವದ್ಭಕ್ತಿಯ ಆಸೆಯು ಬಲವತ್ತರವಾಗ ಹತ್ತಿದೆ. ಪ್ರಭುವೇ, ಅನುಗ್ರಹ ಮಾಡು. ನಿನ್ನ ದರ್ಶನದ ಹೊರತು ನನಗೇನೂ ಬೇಕಾಗಿಲ್ಲ. ರಾಮದಾಸರು ಹೇಳುವಂತೆ ನನ್ನ ಸಂಸಾರದ ಚಿಂತೆ ನಿನಗೆ ಸೇರಿದೆ. ಇನ್ನೇಕೆ ವಿಳಂಬ? ಇನ್ನೂ ಏಕೆ ಸಂಶಯ? ನನಗೆ ಬುದ್ಧಿಕೊಡು. ಜಯಜಯ ರಘುವೀರ ಸಮರ್ಥ.

## ಕರುಣಾಷ್ಟಕಗಳು

### ಗುರುವಾರ

### (೧)

ಸದಾ ಪ್ರಾರ್ಥಿತೋ ಶ್ರೀಗುರೂಚ್ಯಾ ಪದಾಸೀ। ಧರೀತೋ ಶಿರೀ ವಂದಿತೋ ಆದರೇಸೀ। ಧರೂನಿ ಕರೀ ತಾರಿ ಯಾ ಬಾಲಕಾಸೀ। ನಮಸ್ಕಾರ ಹಾ ಸ್ವಾಮಿ ದತ್ತಾತ್ರೇಯಾಸೀ ॥ ೧ ॥ ಮತಿಹೀನ ಮೀ ದೀನ ಆಹೇ ಖರಾ ಹೋ। ಪರೀ ಮೀ ತುಝಾ ದಾಸ ಕೃಪಾ ಕರಾಹೋ। ಜಸೇ ಲೇಕರೂ ಪಾಳತೇ ಮಾಯ ಕೂಶೀ। ನಮಸ್ಕಾರ.... ॥ ೨ ॥ ಲಡೀವಾಳ ಮೀ ಬಾಳ ಅಜ್ಞಾನ ತುಝಾ। ಗುರುವಾಚುನಿ ಪಾಂಗ ಫೇಡಿಲ ಮಾಝಾ। ತುಝ್ಯಾವೀಣ ದೂಜಾ ಕೋಣ ಆಹೇ ಆಮ್ಹಾಸೀ। ನಮಸ್ಕಾರ.... ॥ ೩ ॥ ಪಿತಾ ಮಾಯ ಬಂಧು ಸಖ ತೂಚಿ ದೇವಾ। ಮುಲೇ ಮಿತ್ರ ಸಾರೇ ಸೋಯರೇ ವ್ಯರ್ಥ ಹೇವಾ। ಕಳೋನಿ ಅಸೇ ಭ್ರಾಂತಿ ಹೋಯೀ ಆಮ್ಹಾಸೀ। ನಮಸ್ಕಾರ.... ॥ ೪ ॥ ಚರಿತ್ರೇ ಗುರೂಚೀ ಕರೀ ನಿತ್ಯ ಪಾಠ। ಜಯಾ ಭಕ್ತಿ ಲಾಗೆ ಪದೀ ಏಕನಿಷ್ಠ। ತಯಾಚೀ ಕುಳೀ ದೀಪ ಸಜ್ಞಾನರಾಶೀ। ನಮಸ್ಕಾರ.... ॥ ೫ ॥ ವಸೇ ಉಂಬರಾಸನ್ನಿಧ ಸರ್ವಕಾಳ। ಜನೀ ಕಾನನೀ ಘಾಲವೀ ನಿತ್ಯಕಾಳ। ತಯಾ ಸದ್ಗುರೂಚೀ ನಾಮ ಕಲ್ಯಾಣರಾಶೀ। ನಮಸ್ಕಾರ.... ॥ ೬ ॥ ಶ್ರಮೋನೀ ಗುರೂಪಾಶೀ ತೋ ಮ್ಲೇಂಛ ಆಲಾ। ತಯಾ ಸ್ಫೋಟರೋಗಾತುನೀ ಮುಕ್ತ ಕೇಲಾ। ಕೃಪೇನೇ ತಸೇ ಸ್ವಾಮಿ ಪಾಳೀ ಆಮ್ಹಾಸೀ। ನಮಸ್ಕಾರ.... ॥ ೭ ॥ ಸತೀ ಅನುಸೂಯಾ ಸುಧೀ ಆದಿಮಾತಾ। ತ್ರಯೀಮೂರ್ತಿ ಧ್ಯಾನೀ ಮನೀ ನಿತ್ಯ ಗಾತಾ। ಹರೇ ರೋಗ

ಪೀಡಾ ದರಿದ್ರಾಸಿ ನಾಶೀ। ನಮಸ್ಕಾರ.... ॥ ೮ ॥ ಕರೋನೀ ಮನೀ ನಿಶ್ಚಯೋ ಅಷ್ಟಕಾಚಾ। ಕರಾಹೋ ಜನೀ ಪಾಠ ದತ್ತಾತ್ರೇಯಾಚಾ। ಕರೀ ಮಾಧವಾಚ್ಯಾ ಸುತಾ ದಾಸ ದಾಸೀ। ನಮಸ್ಕಾರ.... ॥ ೯ ॥

**ಭಾವಾರ್ಥ:** ಸ್ವಾಮಿ ದತ್ತಾತ್ರೇಯನಿಗೆ ಪ್ರಾರ್ಥಿಸುತ್ತೇನೆ. ನಿನ್ನ ಪಾದಗಳ ಮೇಲೆ ತಲೆ ಇಟ್ಟು, ನಿನಗೆ ವಂದಿಸುವೆ. ಈ ಬಾಲಕನನ್ನು ಕೈಹಿಡಿದು ನಡೆಸು ಎಂದು ಬೇಡಿಕೊಳ್ಳುತ್ತೇನೆ. ನಾನು ಮತಿಹೀನನಾದರೂ ನಿನ್ನ ದಾಸನು. ತಾಯಿಯು ತನ್ನ ಮಗುವನ್ನು ಪೋಷಿಸುವಂತೆ ನನ್ನನ್ನು ಕಾಪಾಡು. ನಿನ್ನ ಪ್ರೀತಿಯ ಅಜ್ಞಾನಿ ಮಗು ನಾನು. ಗುರುವಿನ ಹೊರತು ಬೇರೆ ಯಾರು ಇದ್ದಾರೆ? ತಾಯಿ-ತಂದೆ, ಬಂಧು-ಮಿತ್ರ ಎಲ್ಲವೂ ನೀನೇ. ಮಕ್ಕಳು-ಮಿತ್ರರು ಸಹಾಯಕರು ಎಂಬ ಭ್ರಾಂತಿಯಿಂದ ಇದ್ದೆ. ಗುರುಚರಿತ್ರೆಯ ನಿತ್ಯ ಪಠಣ ಮಾಡಿ ಅವನ ಚಿತ್ತದಲ್ಲಿ ಮನಸ್ಸು ನೆಲೆಸಿದಾಗ, ಅವನ ಕುಲದ ಜ್ಯೋತಿ ಬೆಳಗುತ್ತಿದೆ. ಯಾವಾಗಲೂ ಔದುಂಬರ ವೃಕ್ಷದ ಸನ್ನಿಧಿಯಲ್ಲಿ ಇದ್ದು, ಜನರಲ್ಲಿಯೂ ಅಡವಿಗಳಲ್ಲಿಯೂ ಸುತ್ತಾಡಿ, ಅವರೆಲ್ಲರ ಕಲ್ಯಾಣಪ್ರದಾಯಕನಾದ ಸದ್ಗುರುವಿಗೆ ನಮಸ್ಕಾರ. ತೊಂದರೆಗೊಳಗಾದ ಮ್ಲೇಂಛರಾಜನು ಗುರುವಿನ ಹತ್ತಿರ ಬರಲು ಅವನಿಗಾದ ಸ್ಫೋಟ (ಹುಣ್ಣು) ರೋಗವನ್ನು ಕಳೆದಿರಿ. ಅದರಂತೆಯೇ ನಮ್ಮನು ರಕ್ಷಿಸಿರಿ. ಆದಿಮಾತೆಯಾದ ಸತಿ ಅನುಸೂಯಾದೇವಿಯು ಯಾವಾಗಲೂ ತ್ರಿಮೂರ್ತಿಗಳ ಧ್ಯಾನಮಾಡುತ್ತಾಳೆ. ಅದರಿಂದ ದೀನ ದರಿದ್ರರ ರೋಗ ಹರಣವಾಯಿತು. ಮನದಲ್ಲಿ ತ್ರಿಮೂರ್ತಿಗಳ ಅಷ್ಟಕಗಳನ್ನು ಸ್ಮರಿಸುತ್ತ

ದತ್ತಾತ್ರೇಯನ ಚರಿತ್ರೆಯ ಪಠಣಮಾಡಿರಿ. ಹೀಗೆ ಹೇಳುತ್ತ ಮಾಧವನ ಮಗನು ತನ್ನನ್ನು ದಾಸರ ದಾಸನನ್ನಾಗಿ ಮಾಡಿಕೋ ಎಂದು ಪ್ರಾರ್ಥಿಸುತ್ತಾನೆ. ದತ್ತಾತ್ರೇಯನಿಗೆ ನಮಸ್ಕಾರ.

## ಗುರುವಾರ

### (೨)

ಉದಾಸೀನ ಹೇ ವೃತ್ತಿ ಜೀವೀ ಧರಾವೀ। ಅತೀ ಆದರೇ ಸರ್ವ ಸೇವಾ ಕರಾವೀ। ಸದಾ ಪ್ರೀತಿ ಲಾಗೋ ತುಝೀ ಗೂಣ ಗಾತಾ। ರಘೂನಾಯಕಾ ಮಾಗಣೇ ಹೇಚಿ ಆತಾ ॥ ೧ ॥ ತುಝೇ ರೂಪಡೇ ಲೋಚನೀ ಮ್ಯಾಂ ಪಹಾವೇ। ತುಝೇ ಗೂಣ ಗಾತಾ ಮನಾಸೀ ರಹಾವೇ। ಉರೋ ಆವಡೀ ಭಕ್ತಿಪಂಥೇಚಿ ಜಾತಾ। ರಘೂನಾಯಕಾ.... ॥ ೨ ॥ ಮನೀ ವಾಸನಾ ಭಕ್ತಿ ತೂರಿಝೀ ಕರಾವೀ। ಕೃಪಾಳೂಪಣೇ ರಾಘವೇ ಪೂರವಾವೀ। ವಸಾವೇ ಮದೀಯಾಂತರೀ ನಾಮ ಘೇತಾ। ರಘೂನಾಯಕಾ.... ॥ ೩ ॥ ಸದಾಸರ್ವದಾ ಯೋಗ ತೂಝಾ ಘಡಾವಾ। ತುಝೇ ಕಾರಣೀ ದೇಹ ಮಾಝಾ ಪಡಾವಾ। ನುಪೇಕ್ಷೀ ಕದಾ ಗುಣವಂತಾ ಅನಂತಾ। ರಘೂನಾಯಕಾ.... ॥ ೪ ॥ ನಕೋ ದ್ರವ್ಯ ದಾರಾ ನಕೋ ಯೇರಝಾರಾ। ನಕೋ ಮಾನಸೀ ಜ್ಞಾನಗರ್ವೇ ಫುಗಾರಾ। ಸಗೂಣೀ ಮಲಾ ಲಾವಿ ರೇ ಭಕ್ತಿಪಂಥಾ। ರಘೂನಾಯಕಾ.... ॥ ೫ ॥ ಭವೇ ತಾಪಲೋ ಪ್ರೀತಿಛಾಯಾ

ಕರಾವೀ। ಕೃಪಾಸಾಗರೇ ಸರ್ವ ಚಿಂತಾ ಹರಾವೀ। ಮಲಾ ಸಂಕಟೀ ಸೋಡವಾವೇ ಸಮರ್ಥಾ। ರಘೂನಾಯಕಾ.... ॥ ೬ ॥ ಮನೀ ಕಾಮನಾ ಕಲ್ಪನಾ ತೇ ನಸಾವೀ। ಕುಬುದ್ಧಿ ಕುಡೀ ವಾಸನಾ ನೀರಸಾವೀ। ನಕೋ ಸಂಶಯೋ ತೋಡಿ ಸಂಸಾರವೇಥಾ। ರಘೂನಾಯಕಾ.... ॥ ೭ ॥ ಸಮರ್ಥಾಪುಢೇ ಕಾಯ ಮಾಗೋ ಕಳೇನಾ। ದುರಾಶಾ ಮನೀ ಬೈಸಲೀ ಹೇ ಢಳೇನಾ। ಪುಢೇ ಸಂಶಯೋ ನೀರಸೀ ಸರ್ವ ಚಿಂತಾ। ರಘೂನಾಯಕಾ.... ॥ ೮ ॥ ಬ್ರಿದಾಕಾರಣೇ ದೀನ ಹಾತೀ ಧರಾವೇ। ಮ್ಹಣೇ ದಾಸ ಭಕ್ತಾಸಿ ರೇ ಉದ್ಧರಾವೇ। ಸುಟೇ ಬ್ರೀದ ಆಮ್ಹಾಸೀ ಸೋಡೂನಿ ಜಾತಾ। ರಘೂನಾಯಕಾ ಮಾಗಣೇ ಹೇಚಿ ಆತಾ ॥ ೯ ॥ ಜಯಜಯ ರಘುವೀರ ಸಮರ್ಥ॥

ಭಾವಾರ್ಥ: ರಘೂನಾಯಕಾ, ನಿನ್ನನ್ನು ನಾನು ಇಷ್ಟೇ ಕೇಳಿಕೊಳ್ಳುತ್ತೇನೆ. ಏನೆಂದರೆ ಪ್ರಪಂಚದಲ್ಲಿ ಉದಾಸೀನ ವೃತ್ತಿಯಿಂದ ಇದ್ದು ಪರಮ ಶ್ರದ್ಧೆಯಿಂದ ನಿನ್ನ ಸೇವೆ ಮಾಡಬೇಕು. ನಿನ್ನ ಗುಣಕೀರ್ತನೆ ಮಾಡುವಲ್ಲಿ ನನಗೆ ಯಾವಾಗಲೂ ಪ್ರೀತಿ ಇರಲಿ. ನನ್ನ ಈ ಕಣ್ಣುಗಳು ನಿನ್ನ ರೂಪವನ್ನು ನೋಡಲಿ, ನಿನ್ನ ಗುಣಗಾನದಲ್ಲಿ ಮನಸ್ಸು ಏಕಾಗ್ರವಾಗಲಿ; ಭಕ್ತಿಮಾರ್ಗದಲ್ಲಿ ನಡೆಯುವುದೇ ನನಗೆ ಇಷ್ಟವಾಗಲಿ. ರಘೂನಾಯಕಾ, ನಿನ್ನ ಭಕ್ತಿ ಮಾಡುವುದೇ ನನ್ನ ವಾಸನೆಯಾಗಲಿ. ಕೃಪೆಯಿಂದ ಇದನ್ನು ಪೂರ್ಣ ಮಾಡು. ನಾಮಸ್ಮರಣೆ ಮಾಡುವಾಗ ನನ್ನ ಹೃದಯದಲ್ಲಿ ನೀನು ವಾಸವಾಗಿರು. ನಿನ್ನ ಸಹಯೋಗವು ನನಗೆ ಸದಾ ಲಭಿಸಲಿ. ನಿನಗೋಸ್ಕರವಾಗಿ ನನ್ನ ಈ ದೇಹವು ಭೂಮಿಯ

ಮೇಲೆ ಬೀಳಲಿ. ನನ್ನನ್ನು ಉಪೇಕ್ಷಿಸಬೇಡ, ಗುಣವಂತನಾದ ರಘುನಾಯಕಾ. ನನಗೆ ದ್ರವ್ಯ-ಹೆಂಡತಿ-ಮಕ್ಕಳು ಬೇಡ. ಅದಕ್ಕಾಗಿ ಭವಕ್ಕೆ ಅಲೆದಾಡುವುದೂ ಬೇಡ. ಜ್ಞಾನದ ಗರ್ವದಿಂದ ನಾನು ಸೊಕ್ಕುವುದೂ ಬೇಡ. ಸಗುಣ ಬ್ರಹ್ಮನಲ್ಲಿ ಭಕ್ತಿಯನ್ನು ಅನುಗ್ರಹಿಸು. ಭವತಾಪದಿಂದ ಬೆಂದ ನನ್ನ ಮೇಲೆ ಪ್ರೀತಿಯ ನೆರಳನ್ನು ಹಾಯಿಸು. ನಿನ್ನ ಕೃಪೆಯಿಂದ ಎಲ್ಲ ಚಿಂತೆಗಳು ದೂರಾಗುವಂತೆ ಮಾಡು. ಈ ಸಂಕಟದಿಂದ ಪಾರುಮಾಡು. ಮನಸ್ಸಿನಲ್ಲಿ ಯಾವ ಕಾಮನೆಯೂ, ವಿಷಯ ಕಲ್ಪನೆಯೂ ಇಲ್ಲದಂತಾಗಲಿ; ದುಷ್ಟಬುದ್ಧಿ, ಹೀನವಾಸನೆಗಳು ನಷ್ಟವಾಗಲಿ. ಸಂಶಯಗಳು ದೂರಾಗಿ ಸಂಸಾರವ್ಯಥೆಯು ಬಿಟ್ಟು ಹೋಗಲಿ. ನಿನ್ನಂಥ ಸರ್ವಶಕ್ತನಿಂದ ನಾನು ಏನನ್ನು ಕೇಳಿಕೊಳ್ಳಲಿ? ಅದು ತಿಳಿಯದಾಗಿದೆ. ಮನಸ್ಸಿನಲ್ಲಿಯ ದುರಾಶೆಯು ಹೋಗಲೊಲ್ಲದು. ಸಂಶಯದಿಂದುಂಟಾದ ಚಿಂತೆಗಳೆಲ್ಲ ನಷ್ಟವಾಗಲಿ. ದೇವಾ, ನಿನ್ನ ಬಿರುದು ಕಾಪಾಡಿಕೊಳ್ಳುವದಕ್ಕಾದರೂ ನನ್ನಂಥ ದೀನನ ಕೈಹಿಡಿದು ರಕ್ಷಿಸು. ಭಕ್ತರ ಉದ್ಧಾರವೇ ನಿನ್ನ ಹೊಣೆ. ನಮ್ಮನ್ನು ಹಾಗೆಯೇ ಬಿಟ್ಟರೆ ನಿನ್ನ ಬಿರುದು ಹೋಗುವುದು ರಘೂನಾಯಕಾ. ಜಯಜಯ ರಘುವೀರ ಸಮರ್ಥ.

## ಶುಕ್ರವಾರ

ತುಝಿಯಾ ವಿಯೋಗೇ ಜೀವತ್ವ ಆಲೇ। ಶರೀರಯೋಗೇ ಬಹು ದುಃಖ ಝಾಲೇ। ಅಜ್ಞಾನ ದಾರಿದ್ರ್ಯ ಮಾಝೇ ಸರೇನಾ। ತುಜವೀಣ ರಾಮಾ ಮಜ ಕಂಠವೇನಾ ॥ ೧ ॥ ಪರತಂತ್ರ ಜೇಣೇ ಕಂಠೂ ಕಿತೀ ರೇ। ಉದಾಸ ಮಾಝ್ಯಾ

ಮನೀ ವಾಟತೇ ರೇ। ಲಲ್ಲಾಟರೇಖಾ ತರಿ ಪಾಲಟೇನಾ। ತುಜವೀಣ.... ॥ ೨ ॥ ಜಡಲೀ ಉಪಾಧೀ ಅಭಿಮಾನ ಸಾಧೀ। ವಿವೇಕ ನಾಹೀ ಬಹುಸಾಲ ಬಾಧೀ। ತುಝಿಯಾ ವಿಯೋಗೇ ಪಳಹೀ ಗಮೇನಾ। ತುಜವೀಣ.... ॥ ೩ ॥ ವಿಶ್ರಾಂತಿ ನಾಹೀ ಅಭಿಮಾನ ದೇಹೀ। ಕುಳಾಭಿಮಾನೇ ಪಡಲೋ ಪ್ರವಾಹೀ। ಸ್ವಹೀತ ಮಾರ್ಘೀ ಹೋತಾ ದೀಸೇನಾ। ತುಜವೀಣ.... ॥ ೪ ॥ ಸಂಸಾರಸಂಗೇ ಬಹು ಪೀಡಲೋ ರೇ। ಕಾರುಣ್ಯಸಿಂಧೂ ಮಜ ಸೋಡವೀ ರೇ। ಕೃಪಾಕಟಾಕ್ಷೇ ಸಾಂಭಾಳಿ ದೀನಾ। ತುಜವೀಣ.... ॥ ೫ ॥ ವಿಷಯೀ ಜನಾನೇ ಮಜ ಲಾಜವೀಲೇ। ಪ್ರಪಂಚಸಂಗೇ ಆಯುಷ್ಯ ಗೇಲೇ। ಸಮಯೀ ಬಹು ಕ್ರೋಧ ಶಾಂತೀ ಘಡೇನಾ। ತುಜವೀಣ.... ॥ ೬ ॥ ಸುದೃಢ ಝಾಲೀ ದೇಹಬುದ್ಧಿ ದೇಹೀ। ವೈರಾಗ್ಯ ಕಾಹೀ ಹೋಣಾರ ನಾಹೀ। ಅಪೂರ್ಣ ಕಾಮೀ ಮನ ಹೇ ವಿಟೇನಾ॥ ತುಜವೀಣ.... ॥ ೭ ॥ ನಿರೂಪಣೀ ಹೇ ಸದ್ವೃತ್ತಿ ಹೋತೇ। ಸ್ಥಲತ್ಯಾಗ ಹೋತಾ ಸವೇಚಿ ಜಾತೇ। ಕಾಯ ಕರೂ ರೇ ಕ್ರಿಯಾ ಘಡೇನಾ। ತುಜವೀಣ.... ॥ ೮ ॥ ಜಯ ಜಯ ದಯಾಳಾ। ತ್ರೈಲೋಕ್ಯಪಾಳಾ। ಭವಸಿಂಧುಹಾರೀ ಮಜ ತಾರಿ ಹೇಳಾ। ಸ್ವಾಮೀವಿಯೋಗೇ ಪಳಹೀ ಗಮೇನಾ। ತುಜವೀಣ.... ॥ ೯ ॥ ಆಮ್ಹಾ ಅನಾಥಾ ತೂ ಏಕ ದಾತಾ। ಸಂಸಾರಚಿಂತಾ ಚುಕವೀ ಸಮರ್ಥಾ। ದಾಸಾ ಮನೀ ಆಠವ ವೀಸರೇನಾ। ತುಜವೀಣ ರಾಮಾ ಮಜ ಕಂಠವೇನಾ ॥ ೧೦ ॥ ಜಯಜಯ ರಘುವೀರ ಸಮರ್ಥ॥

## ಕರುಣಾಷ್ಟಕಗಳು

ಭಾವಾರ್ಥ: ಹೇ ರಾಮಾ, ನಿನ್ನ ವಿಯೋಗದಿಂದ ನನಗೆ ಈ ಜನ್ಮವು ಪುನಃ ಬಂದಿದೆ. ಶರೀರ ಧಾರಣೆಯಿಂದ ಬಹಳ ದುಃಖವಾಗಿದೆ. ನನ್ನ ಅಜ್ಞಾನವೂ ದಾರಿದ್ರ್ಯವೂ ಹೋಗಿಲ್ಲ. ನಿನ್ನ ಹೊರತು ನನಗೆ ಸಮಾಧಾನವಾಗಲೊಲ್ಲದು. ಪರತಂತ್ರದಲ್ಲಿ ಹೇಗೆ ಎಂತು ಜೀವಿಸಲಿ? ಅದರಿಂದ ಮನಸ್ಸು ನಿರುತ್ಸಾಹಿಯಾಗಿದೆ. ಇನ್ನೂ ನನ್ನ ವಿಧಿಲಿಖಿತ-ರೇಖೆ ಬದಲಾಗಲಿಲ್ಲ. ಬೇರೂರಿದ ಉಪಾಧಿಯೂ ಅಹಂಕಾರವೂ ಹೋಗಿಲ್ಲ. ವಿವೇಕವಿಲ್ಲದೆ ಬಹಳ ವರ್ಷ ನೊಂದಿದ್ದೇನೆ. ನಿನ್ನ ಹೊರತು ಕ್ಷಣ ಮಾತ್ರವೂ ಇರಲಾರೆ ದೇವಾ! ಅಹಂಕಾರದಿಂದ ಕೂಡಿದ ಈ ದೇಹಕ್ಕೆ ವಿಶ್ರಾಂತಿ ಇಲ್ಲಾ. ವ್ಯರ್ಥವಾದ ಕುಲದ ಅಭಿಮಾನ-ಪ್ರವಾಹದಲ್ಲಿ ಬಿದ್ದಿದ್ದೇನೆ. ನನ್ನ ಹಿತವು ನನಗೇ ಕಾಣದಾಗಿದೆ. ಸಂಸಾರದ ಆಸಕ್ತಿಯಿಂದ ಬಹಳ ಕಷ್ಟಪಟ್ಟಿದ್ದೇನೆ. ಕಾರುಣ್ಯಸಿಂಧುವಾದ ರಾಮಾ, ನನ್ನನ್ನು ಪಾರುಮಾಡು. ಕೃಪಾಕಟಾಕ್ಷದಿಂದ ರಕ್ಷಿಸು ದೇವಾ. ದೇಹಬುದ್ಧಿ ಸುದೃಢವಾಗಿದೆ; ವೈರಾಗ್ಯವಂತೂ ಇಲ್ಲ. ಕೆಟ್ಟ ಕೆಲಸ ಮಾಡಲು ಮನಸ್ಸು ಹೇಸುವುದಿಲ್ಲ. ಪ್ರಪಂಚ ಬಂಧನದಲ್ಲಿ ಆಯುಷ್ಯ ಕಳೆಯಿತು. ವಿಷಯಾಸಕ್ತಿಯಿಂದ ಜನರ ಹಾಸ್ಯಕ್ಕೆ ಗುರಿಯಾದೆ. ಪ್ರಸಂಗದಲ್ಲಿ ಸಿಟ್ಟು ಬರುವುದರಿಂದ ಶಾಂತಿ ದೊರೆಯಲೊಲ್ಲದು. ನಿರೂಪಣೆಯಿಂದ ಸದ್ವಸ್ತುವಿನ ಕಡೆಗೆ ಮನಸ್ಸು ಎಳೆಯುತ್ತದೆ. ಆದರೆ ಸ್ಥಳವನ್ನು ಬಿಟ್ಟೊಡನೆ ದೇಹಬುದ್ಧಿಯಿಂದ ಅದನ್ನು ಮರೆತುಬಿಡುತ್ತೇನೆ. ಹೀಗಾಗಿ ಯಾವ ಕೆಲಸವೂ ಆಗಲೊಲ್ಲದು. ಹೇ ದಯಾಳಾ, ತ್ರೈಲೋಕ್ಯ ರಕ್ಷಕಾ, ಭವಸಿಂಧುಹಾರಿ, ನನ್ನನ್ನು ರಕ್ಷಿಸು. ದೇವರನ್ನು

ಬಿಟ್ಟರೆ ನನಗೆ ಕ್ಷಣಮಾತ್ರವೂ ಇರಲಾಗದು. ನಾನು ಅನಾಥ; ನೀನು ನಮ್ಮ ರಕ್ಷಕ. ಸಂಸಾರ ಚಿಂತೆಯನ್ನು ಬಿಡಿಸಿ ನಿನ್ನ ವಿಸ್ಮರಣೆಯಾಗದಂತೆ ಮಾಡು. ನಿನ್ನ ಹೊರತು ನನಗೆ ಸಮಾಧಾನವಿಲ್ಲ. ಜಯಜಯ ರಘುವೀರ ಸಮರ್ಥ.

## ಶನಿವಾರ

### (೧)

ಉದಾಸೀನ ಹಾ ಕಾಳ ಜಾತೋ ಗಮೇನಾ। ಸದಾ ಸರ್ವದಾ ಘೋರ ಚಿಂತಾ ಶಮೇನಾ। ಉಠೇ ಮಾನಸೀ ಸರ್ವ ಸೋಡೂನ ಜಾವೇ। ರಘೂನಾಯಕಾ ಕಾಯ ಕೈಸೇ ಕರಾವೇ ॥ ೧ ॥ ಜನೀ ಬೋಲತಾ ಬೋಲತಾ ವೀಟ ವಾಟೇ। ನಸೇ ಅಂತರೀ ಸೂಖ ಕೋಠೇ ನ ಕಂಠೇ। ಘಡೀನೇ ಘಡೀ ಚಿತ್ತ ಕೀತೀ ಧರಾವೇ। ರಘೂನಾಯಕಾ.... ॥ ೨ ॥ ಬಹೂ ಪಾಹತಾ ಅಂತರೀ ಕೋಂಡ ಹೋತೋ। ಶರೀರಾಸ ತೋ ಹೇತ ಸೋಡೋನಿ ಜಾತೋ। ಉಪಾಧೀಸ ದೇಖೋನಿ ವಾಟೇ ಸರಾವೇ। ರಘೂನಾಯಕಾ.... ॥ ೩ ॥ ಅವಸ್ಥಾ ಮನೀ ಹೋಯ ನಾನಾ ಪರೀಚೀ। ಕಿತೀ ಕಾಯ ಸಾಂಗೂ ಗತೀ ಅಂತರೀಚೀ। ವಿವೇಕೇಚಿ ಯಾ ಮಾನಸಾ ಆವರಾವೇ। ರಘೂನಾಯಕಾ.... ॥ ೪ ॥ ಮ್ಹಣೇ ದಾಸ ಊದಾಸ ಝಾಲೋ ದಯಾಳಾ। ಜನೀ ವ್ಯರ್ಥ ಸಂಸಾರ ಹಾ ವಾಯಚಾಳಾ। ತುಝಾ ಮೀ ತುಲಾ ಪೂಸತೋ ಸರ್ವ ಭಾವೇ। ರಘೂನಾಯಕಾ.... ॥ ೫ ॥

## ಶನಿವಾರ

(೨)

ತುಝಾ ಭಾಟ ಮೀ ವರ್ಣಿತೋ ರಾಮರಾಯಾ। ಸದಾ ಸರ್ವದಾ ಗಾಯ ಬ್ರೀದೇ ಸವಾಯಾ। ಮಹಾರಾಜ ದೇ ಅಂಗಿಚೀ ವಸ್ತ್ರ ಆತಾ। ಬಹೂ ಜೀರ್ಣ ಝಾಲೀ ದೇಹಬುದ್ಧಿ ಕಂಥಾ ॥ ೧ ॥ ರಾಮದೂತ ವಾಯುಸೂತ ಭೀಮಗರ್ಭ ಜುತ್ಪತೀ। ಜೋ ನರಾತ ವಾನರಾತ ಭಕ್ತಿಪ್ರೇಮ ವಿತ್ಪತೀ। ದಾಸದಕ್ಷ ಸ್ವಾಮಿಪಕ್ಷ ನೀಜಕಾಜಸಾರಥೀ। ವೀರಜೋರ ಶೀರಜೋರ ಧಕ್ಕ ಧಿಂಗ ಮಾರುತೀ ॥ ೨ ॥

## ಶನಿವಾರ

(೧)

ಭಾವಾರ್ಥ: ಉದಾಸೀನ ವೃತ್ತಿಯಿಂದ ಕಾಲ ಹೋಗುತ್ತದೆ. ಆದರೆ ನನಗೆ ಸಮಾಧಾನವಿಲ್ಲ. ಯಾವಾಗಲೂ ಮಾಡುತ್ತಿರುವ ಚಿಂತೆ ಕಡಿಮೆಯಾಗಲೊಲ್ಲದು. ಮನಸ್ಸಿನಲ್ಲಿ ಒಮ್ಮೊಮ್ಮೆ ಎಲ್ಲವನ್ನು ಬಿಟ್ಟು ಓಡಿಹೋಗಬೇಕೆಂದೆನಿಸುತ್ತದೆ. ಹೇಗೆ ಮಾಡಲಿ? ರಘೂನಾಯಕಾ, ಜನರೊಡನೆ ಅದೇ ಅದೇ ಮಾತನಾಡಿ ತಿರಸ್ಕಾರ ಉಂಟಾಗಿದೆ. ಎಲ್ಲಿ ಹುಡುಕಿದರೂ ಸಮಾಧಾನವಿಲ್ಲ, ಮನಸ್ಸನ್ನು ಎಷ್ಟೆಂದು ಬಿಗಿ ಹಿಡಿಯಲಿ. ಹೃದಯದಲ್ಲಿ ತಳಮಳ ನಡೆದಿದೆ. ಪರಮಾರ್ಥಪ್ರಾಪ್ತಿಯ ಉಚ್ಚ ಧ್ಯೇಯವು

ದೇಹಕ್ಕೆ ತಿಳಿಯುವುದಿಲ್ಲ. ದೇಹಬುದ್ಧಿಯಿಂದ ಜೀವನ ನಡೆದಿರುತ್ತದೆ. ಉಪಾಧಿಯನ್ನು ನೋಡಿ ಜೀವನದಲ್ಲಿ ಬೇಸರಿಕೆಯಾಗಿದೆ. ಏನು ಮಾಡಬೇಕೆಂಬುದನ್ನು ನೀನೇ ಹೇಳಬೇಕು. ಮನಸ್ಸಿನ ಅವಸ್ಥೆ ಏನಾಗಿದೆ, ಅಂತರ್ಯದಲ್ಲಿ ಏನು ನಡೆದಿದೆ ಎಂಬುದನ್ನು ಏನೆಂದು ಹೇಳಲಿ? ವಿವೇಕ ಬುದ್ಧಿಯು ಇದನ್ನು ತಡೆದು ಸರಿಪಡಿಸಬೇಕು. ಹೇ ದಯಾಳುವೇ, ದಾಸನಾದ ನಾನು ಉದಾಸೀನನಾಗಿದ್ದೇನೆ. ಪ್ರಪಂಚ ವ್ಯರ್ಥ, ಜೊಳ್ಳು ಎಂಬ ನಿರ್ಧಾರಕ್ಕೆ ಬಂದಿದ್ದೇನೆ. ನಿನ್ನನ್ನೇ ಅನನ್ಯಭಕ್ತಿಯಿಂದ ಕೇಳಿಕೊಳ್ಳುತ್ತಿದ್ದೇನೆ. ಏನು ಮಾಡಲಿ? ಹೇಗೆ ಮಾಡಲಿ? ಎಂದು ರಾಮದಾಸರು ಕೇಳುತ್ತಾರೆ.

## ಶನಿವಾರ

## (೨)

ಭಾವಾರ್ಥ: ನಾನು ನಿನ್ನನ್ನು ಹೊಗಳುತ್ತಿದ್ದೇನೆ. ನಿನ್ನ ಕೀರ್ತಿಯನ್ನು ಹಾಡುತ್ತಿದ್ದೇನೆ. ರಘೂನಾಯಕಾ, ಜೀರ್ಣವಾದ ಈ ದೇಹಬುದ್ಧಿಯ ವಸ್ತ್ರವನ್ನು ಬಿಟ್ಟು ಬೇರೆ ವಸ್ತ್ರವನ್ನು ಕೊಡು. ರಾಮದೂತನೂ, ವಾಯುಸುತನೂ, ಹುಟ್ಟಿನಿಂದಲೇ ಭಯಂಕರ ಸ್ವರೂಪನೂ ಆದ ನೀನು ಮಾನವರಲ್ಲಿಯೂ, ವಾನರರಲ್ಲಿಯೂ, ಭಕ್ತಿ-ಪ್ರೇಮವನ್ನು ಹುಟ್ಟಿಸಿರುವೆ. ದಾಸರಲ್ಲಿ ಅತ್ಯಂತ ದಕ್ಷನು. ಸ್ವಾಮಿಯ ಪಕ್ಷ ವಹಿಸಿ, ಸತ್ಕಾರ್ಯ ಸಾರಥಿಯಾಗಿದ್ದೀ. ವೀರನೂ, ಶೂರನೂ, ಅದ್ಭುತ ಸಾಹಸಿಯೂ ಆದ 'ಧಕ್ ಧಿಂಗ' ಎಂದು ಕುಣಿದಾಡುವ ಮಾರುತಿಗೆ ಜಯವಾಗಲಿ.

## ಕರುಣಾಷ್ಟಕಗಳು

### ರವಿವಾರ

ಅಸಂಖ್ಯಾತ ರೇ ಭಕ್ತ ಹೋವೂನ ಗೇಲೇ। ತಿಹೀ ಸಾಧನಾಂಚೇ ಬಹೂ ಕಷ್ಟ ಕೇಲೇ। ನವ್ಹೇ ಕಾರ್ಯಕರ್ತಾ ಭೂಮೀಭಾರ ಝಾಲೋ। ತುಝಾ ದಾಸ ಮೀ ವ್ಯರ್ಥ ಜನ್ಮಾಸಿ ಆಲೋ ॥ ೧ ॥ ಬಹೂ ದಾಸ ತೇ ತಾಪಸೀ ತೀರ್ಥವಾಸೀ। ಗಿರೀಕಂದರೀ ಭೇಟಿ ನಾಹೀ ಜನಾಸೀ। ಸ್ಥಿತಿ ಐಕತಾ ಥೋರ ವಿಸ್ಮೀತ ಝಾಲೋ। ತುಝಾ ದಾಸ.... ॥ ೨ ॥ ಸದಾ ಪ್ರೇಮಳಾಸೀ ತಯಾ ಭೇಟಲಾಸೀ। ತುಝ್ಯಾ ದರ್ಶನೇ ಸ್ಪರ್ಶನೇ ಪುಣ್ಯರಾಶೀ। ಅಹಂತಾ ಮನೀ ಶಬ್ದಜ್ಞಾನೇ ಬುಡಾಲೋ। ತುಝಾ ದಾಸ.... ॥ ೩ ॥ ತುಝ್ಯಾ ಪ್ರೀತಿಚೇ ದಾಸ ನಿರ್ಮಾಣ ಝಾಲೇ। ಅಸಂಖ್ಯಾತ ತೇ ಕೀರ್ತಿ ಬೋಲೋನಿ ಗೇಲೇ ಬಹೂ ಧಾರಣಾ ಥೋರ ಚಕೀತ ಝಾಲೋ। ತುಝಾ ದಾಸ.... ॥ ೪ ॥ ಬಹೂಸಾಳ ದೇವಾಲಯೇ ಹಾಟಕಾಚೇ। ರಸಾಳಾ ಕಳಾ ಲಾಘವೇ ನಾಟಕಾಚೇ। ಪುಜಾ ದೇಖತಾ ಜಾಡ ಜೇವೀ ಗಳಾಲೋ। ತುಝಾ ದಾಸ.... ॥ ೫ ॥ ಕಿತೇಕೀ ದೇಹ ತ್ಯಾಗಿಲೇ ತೂಜಲಾಗೀ। ಪುಢೇ ಜಾಹಲೇ ಸಂಪತೀಚೇ ವಿಭಾಗೀ। ದೇಹೇದುಃಖ ಹೋತಾಚಿ ವೇಗೇ ಪಳಾಲೋ। ತುಝಾ ದಾಸ.... ॥ ೬ ॥ ಕೀತೀ ಯೋಗಮೂರ್ತೀ ಕಿತೀ ಪುಣ್ಯಮೂರ್ತೀ। ಕಿತೀ ಧರ್ಮಸಂಸ್ಥಾಪನಾ ಅನ್ನಶಾಂತೀ। ಪಸ್ತಾವಲೋ ಕಾವಲೋ ತಪ್ತ ಝಾಲೋ। ತುಝಾದಾಸ.... ॥ ೭ ॥ ಸದಾ ಸರ್ವದಾ ರಾಮ ಸೋಡೋನಿ ಕಾಮೀ। ಸಮರ್ಥಾ ತುಝೇ ದಾಸ ಆಮ್ಹೀ ನಿಕಾಮೀ। ಬಹು ಸ್ವಾರ್ಥಬುದ್ಧೀ ನ ರೇ ಕಷ್ಟವೀಲೋ। ತುಝಾ ದಾಸ.... ॥ ೮ ॥ ಜಯಜಯ ರಘುವೀರ ಸಮರ್ಥ.

ಭಾವಾರ್ಥ: ಅಸಂಖ್ಯಾತ ಭಕ್ತರು ಹಿಂದಕ್ಕೆ ಆಗಿಹೋಗಿದ್ದಾರೆ. ಅವರೆಲ್ಲರೂ ಕಷ್ಟಪಟ್ಟು ಸಾಧನೆ ಮಾಡಿದ್ದಾರೆ. ನಾನು ಮಾತ್ರ ಏನನ್ನೂ ಮಾಡದೆ ಭೂಮಿಗೆ ಭಾರನಾಗಿದ್ದೇನೆ. ನನ್ನ ಜನ್ಮವು ವ್ಯರ್ಥವಾಗಿದೆ. ಭಕ್ತಶ್ರೇಷ್ಠರೆಲ್ಲರೂ ತೀರ್ಥಾಟನೆ ಮಾಡಿ, ತಪಶ್ಚರ್ಯ ಮಾಡಿ, ಯಾರೂ ಭೆಟ್ಟಿಯಾಗದಂತೆ ಗಿರಿಕಂದರಗಳಲ್ಲಿ ವಾಸಮಾಡಿ, ಆ ಸ್ಥಿತಿಯನ್ನು ಪಡೆದಿದ್ದಾರೆ. ಅದನ್ನು ಕೇಳಿ ನಾನು ಆಶ್ಚರ್ಯಚಕಿತನಾಗಿದ್ದೇನೆ. ಅಂಥ ಶ್ರದ್ಧಾಪೂರ್ಣ ಭಕ್ತರಿಗೆ ದರ್ಶನ ಕೊಟ್ಟಿರುವಿ. ನಿನ್ನ ದರ್ಶನದಿಂದ ಅವರು ಪುಣ್ಯದ ರಾಶಿಯನ್ನೇ ಪಡೆದಿದ್ದಾರೆ. ನಾನು ಮಾತ್ರ ಅಹಂಭಾವದಿಂದ, ಶಬ್ದಜ್ಞಾನದಿಂದ, ಭಕ್ತಿ ಇಲ್ಲದೆ ದುಃಖದಲ್ಲಿ ಮುಳುಗಿದ್ದೇನೆ. ನಿನ್ನ ಪ್ರೀತಿಗೆ ಪಾತ್ರರಾದ ಅನೇಕ ಭಕ್ತರು ನಿನ್ನ ಕೀರ್ತಿಯನ್ನು ಹಾಡಿ ಹೊಗಳಿದ್ದಾರೆ. ಅಂಥ ದೃಢಭಕ್ತಿಯನ್ನು ನೋಡಿ ಚಕಿತನಾಗಿದ್ದೇನೆ. ಆದಕಾರಣ ನನ್ನ ಜನ್ಮ ವ್ಯರ್ಥವಾಯಿತು. ಭಕ್ತರು ಸುಂದರವಾದ ಎಷ್ಟೋ ದೇವಾಲಯಗಳನ್ನು ಕಟ್ಟಿಸಿದ್ದಾರೆ. ಡಾಂಭಿಕ ಪೂಜೆಯನ್ನು ನೋಡಿ, ನನ್ನ ಧೈರ್ಯವಡಗಿತು. ಅದನ್ನು ನೆನಪಿಸಿ ಕೊಂಡಾಗ ನನಗೆ ನನ್ನ ಜನ್ಮ ವ್ಯರ್ಥವೆಂಬ ಭಾವನೆ ಬರುತ್ತದೆ. ತೋರಿಕೆಯ ಭಕ್ತಿಯ ನಾಟಕಗಳು ನಡೆದಿವೆ. ಅದೆಷ್ಟೋ ಭಕ್ತರು ನಿನ್ನ ಪ್ರಾಪ್ತಿಗೋಸ್ಕರ ದೇಹ ತ್ಯಜಿಸಿದ್ದಾರೆ. ಅವರು ಒಳ್ಳೇ ವೈಭವದ ದಿನಗಳನ್ನು ಕಂಡರು. ನಾನು ಮಾತ್ರ ದೇಹದುಃಖದಿಂದ ದುಃಖಿತನಾಗಿ ಜನ್ಮ ವ್ಯರ್ಥಮಾಡಿಕೊಂಡಿದ್ದೇನೆ. ಎಷ್ಟೋಜನ, ಯೋಗಿಗಳಾಗಿ ಹೋಗಿದ್ದಾರೆ; ಪುಣ್ಯದ ಸಾಕಾರ ಮೂರ್ತಿಯಾಗಿದ್ದಾರೆ. ಧರ್ಮಸಂಸ್ಥೆಗಳನ್ನು ಸೃಷ್ಟಿಸಿ ಅನ್ನದಾನ

ಮಾಡಿದ್ದಾರೆ. ನಾನು ಮಾತ್ರ ಬೆಂದು, ಪಶ್ಚಾತ್ತಾಪಪಡುತ್ತ ಜನ್ಮ ವ್ಯರ್ಥಮಾಡಿಕೊಂಡಿದ್ದೇನೆ. ರಾಮಾ, ನಾವು ನಿನ್ನ ದಾಸರೆಂದುಕೊಳ್ಳುತ್ತೇವೆ. ಆದರೆ ನಿನ್ನನ್ನು ಮರೆತು ಐಹಿಕ ಸುಖದಲ್ಲಿ ಸಿಲುಕಿಕೊಂಡಿದ್ದೇವೆ. ನಾವು ನಿಷ್ಕ್ರಿಯಾವಂತರು; ಸ್ವಾರ್ಥ ಬುದ್ಧಿಜೀವಿಗಳು. ನಮ್ಮ ಕಷ್ಟವನ್ನು ಪರಿಹರಿಸಿ ನಮ್ಮನ್ನು ರಕ್ಷಿಸು. ಜಯಜಯ ರಘುವೀರ ಸಮರ್ಥ.

## ಪಾಳಣೆ (ಜೋಗುಳಗಳು)

ಜೋ ಜೋ ಜೋ ಜೋ ರೇ ಶ್ರೀರಾಮಾ।
ನಿಜಸುಖಗುಣವಿಶ್ರಾಮಾ ॥ ಧೃ ॥

ಧ್ಯಾತೀ ಮುನಿಯೋಗೀ ತುಜಲಾಗೀ।
ಕೌಸಲ್ಯಾವ್ಹೋಸಂಗೀ ॥ ೧ ॥

ವೇದಶಾಸ್ತ್ರೇಂಚೀ ಮತಿ ಜಾಣ।
ಸ್ವರೂಪಿ ಝಾಲೀ ಲೀನ ॥ ೨ ॥

ಚಾರೀ ಮುಕ್ತೀಂಚಾ ವಿಚಾರ।
ಚರಣೀ ಪಾಹತೀ ಥೋರ ॥ ೩ ॥

ಭೋಳಾ ಶಂಕರ ನಿಶಿ ದಿನೀ।
ತುಜಲಾ ಜಪತೋ ಮನೀ ॥ ೪ ॥

ದಾಸ ಗಾತಸೇ ಪಾಳಣಾ।
ರಾಮ ಲಕ್ಷ್ಮಣಾ ॥ ೫ ॥

ಭಾವಾರ್ಥ: ಆತ್ಮಸುಖದಿಂದಲೇ ವಿಶ್ರಾಂತಿ ಪಡೆಯುತ್ತಿರುವ ಶ್ರೀರಾಮಾ ನಿದ್ರಿಸು. ಮುನಿಯೋಗಿಗಳು ನಿನ್ನನ್ನು ಕುರಿತು ಧ್ಯಾನ ಮಾಡುತ್ತಿದ್ದಾರೆ. ಕೌಸಲ್ಯೆಯು ನಿನ್ನನ್ನು ತೂಗಾಡಿಸುತ್ತಾಳೆ. ವೇದ-ಶಾಸ್ತ್ರಗಳ ತರ್ಕವು ಸಹ ನಿನ್ನ ಸ್ವರೂಪದಲ್ಲಿ ಲಯವಾಯಿತು. ನಾಲ್ಕು ಮುಕ್ತಿಗಳು ನಿನ್ನ ಪಾದದಲ್ಲಿಯೇ ಶ್ರೇಷ್ಠತೆಯನ್ನು ಪಡೆದಿರುತ್ತವೆ. ಸಾಂಬಸದಾಶಿವನು ಹಗಲೂ-ರಾತ್ರಿ ನಿನ್ನ ಜಪ ಮಾಡುತ್ತಿದ್ದಾನೆ. ರಾಮದಾಸರೇ ರಾಮ-ಲಕ್ಷ್ಮಣರ ಜೋಗುಳ ಹಾಡುತ್ತಿದ್ದಾರೆ. ಜೋಜೋ ಜೋಜೋ...

೨

ನಿಜಸುಖ ಪಾಳಣಾ, ಪಾಳಣಾ, ಹಾಲವಿತೇ ಮೀ ಕೃಷ್ಣಾ। ಕ್ಷಣಭರಿ ಕರಿ ಶಯನಾ, ಕರಿ ಶಯನಾ, ಲಾಗೋ ದೇ ತುಜ ನಯನಾ ॥ ಧೃ ॥ ಚಂದನಕಾಷ್ಟಾಚಾ, ಕಾಷ್ಟಾಚಾ, ರಂಗಿತ ಭವರಂಗಾಚಾ। ಜಡೀತ ರತ್ನಾಂಚಾ, ರತ್ನಾಂಚಾ, ವರಚೇಂಡೂ ಮೋತ್ಯಾಂಚಾ ॥ ೧ ॥ ಕಳಸ ಸೋನ್ಯಾಚಾ, ಸೋನ್ಯಾಚಾ, ಚೌಕೋನೀ ರೂಪ್ಯಾಚಾ। ಸಾಖಳದಂಡಾಚಾ, ದಂಡಾಚಾ, ಮಂಜುಳ ಶಬ್ದ ಸುಖಾಚಾ ॥ ೨ ॥ ದೋರೀ ನಿಜಹಾತೀ, ನಿಜಹಾತೀ, ತುಜಲಾ ಗಾತೀ ಗೀತೀ। ಸಖಯಾ ಹಾಲವಿತೀ, ಹಾಲವಿತೀ, ಘೇ ಬಾಳಾ

ವಿಶ್ರಾಂತೀ ॥ ೩ ॥ ಐಶಾ ವ್ರಜಬಾಳಾ, ವ್ರಜಬಾಳಾ, ಹಾಲವಿತೀ ಗೋಪಾಳಾ। ತ್ರ್ಯಂಬಕ ಪ್ರಭುಲೀಲಾ, ಪ್ರಭುಲೀಲಾ, ವರ್ಣಿತ ವೇಳೋವೇಳಾ ॥ ೪ ॥

ಭಾವಾರ್ಥ: ಆತ್ಮಸುಖದ ತೊಟ್ಟಿಲನ್ನು ತೂಗುತ್ತಿದ್ದೇನೆ. ಕೃಷ್ಣಾ, ಕ್ಷಣ ಮಾತ್ರವಾದರೂ ಕಣ್ಣುಮುಚ್ಚಿಕೊಂಡು ನಿದ್ರೆ ಮಾಡು. ಶ್ರೀಗಂಧದ ಕಟ್ಟಿಗೆಯಿಂದ ಮಾಡಿದ, ತರತರದ ಬಣ್ಣಗಳಿಂದ ಚಿತ್ರಿಸಿದ, ರತ್ನದಿಂದ ಒಡಗೂಡಿದ, ಈ ತೊಟ್ಟಿಲನ್ನು ಮುತ್ತುಗಳ ಚೆಂಡಿನಿಂದ ಅಲಂಕರಿಸಿದ್ದೇನೆ. ಕಳಸವು ಚಿನ್ನದ್ದು ಆಗಿದ್ದು ಚೌಕೋನವು ಬೆಳ್ಳಿಯದಾಗಿದೆ. ಸರಪಳಿಯ ಮಂಜುಳ ಸುಖನಾದವು ಆಗುತ್ತದೆ. ಕೈಯಲ್ಲಿ ಹಗ್ಗವನ್ನು ಹಿಡಿದು ಜೋಗುಳ ಹಾಡುತ್ತಿರುವೆನು; ನಿನ್ನನ್ನು ತೂಗುತ್ತಿರುವೆನು. ಮಗುವೇ, ವಿಶ್ರಾಂತಿ ಪಡೆ. ಗೋಕುಲದ ಗೋಪಾಲನನ್ನು ತೊಟ್ಟಿಲದಲ್ಲಿ ತೂಗಿತೂಗಿ ತ್ರ್ಯಂಬಕರು ಕೃಷ್ಣನ ಲೀಲೆಗಳನ್ನು ಹಾಡುತ್ತ, ಪುನಃ ಪುನಃ ವರ್ಣಿಸುತ್ತಿರುವರು.

೩

ಆಸನ ಹಾಕಿ ಕುಳ್ಳಿರಿಸಿದವನು। ನಾಸಿಕಾಗ್ರದೃಷ್ಟಿ ನಿಲ್ಲಿಸಿದವನು। ಬೀಸುವ ವಾಯುವ ತುಂಬಿಸಿದವನು। ಇಂಥ ಸೂಸುಮುತ್ತಿನ ಮಳೆಗರಿಸಿದವನು। ಜೋಜೋ ॥ ೧ ॥ ಆರುಚಕ್ರದಮೇಲೆ ಆರಡಿಸಿದವನು। ಭೇರಿ ಝಾಂಗುಟಿ ತಾಳ ಭೋರ್ಗ್ಯಾಡಿಸಿದವನು। ಬೀರುವ ತ್ರಿದಳ ಸಾಧನ ತೋರಿದನು। ಇಂಥ

ಮೂರುಕೋಟಿಪ್ರಭಾ ಬೆಳಕ ತೋರಿದನು ॥ ೨ ॥ ಸಹಸ್ರದಳದಮನಿಯ ಪೋಗಿಸಿದವನು। ಜೀವಬ್ರಹ್ಮಾನಂದ ಸುಖವ ಉಣಿಸಿದನು। ಕೇವಳ ಸುಷುಮ್ನಮಾರ್ಗ ತಿಳಿಸಿದನು। ನಮ್ಮ ದೇವ ಚಿದಾನಂದ ತಾನೇ ಅನಿಸಿದನು ॥ ೩ ॥ ದೇಹವಿದ್ದು ದೇಹವಿಲ್ಲಧಾಂಗ ಇರಬೇಕು। ದೇಹದ ಗುಣಗಳು ತಿಳಿದಿರಬೇಕು। ಮನಸಿನ ಇಂದ್ರಿಯಗಳು ದೂರಿರಬೇಕು। ಹೀಗೆ ದಿನದಿನಕ ಅನುಭವ ತಿಳಿದಿರಬೇಕು ॥ ೪ ॥ ಮಾತು ಇದ್ದು ಮಾತು ಇಲಧಾಂಗಿರಬೇಕು। ಮಾತಿನ ಮಜಕೂರ ತಿಳಿದಿರಬೇಕು। ಪಾತಕರ ಗೆಳೆತನ ದೂರಿರಬೇಕು। ಇಂಥ ನೀತಿಮಾರ್ಗಕ್ಕೇ ನೇಟಾಗಿರಬೇಕು ॥ ೫ ॥ ಕಣ್ಣುಯಿದ್ದು ಕಣ್ಣು ಇಲಧಾಂಗಿರಬೇಕು। ಕಣ್ಣಿನ ಕಳೆಗಳು ತಿಳಿದಿರಬೇಕು। ಹುಣ್ಣಿವಿ ಚಂದ್ರಮನ ಹಾಗೆ ಉದಗಿರಬೇಕು। ನಮ್ಮ ದೇವ ಚಿದಾನಂದನ ಹಾಗೆ ಇರಬೇಕು ॥ ೬ ॥ ಜೋ ಜೋ

## ೪

ಎದ್ದ ಘಳಿಗಿ ಮೊದಲು ಗುರುವಿನ ನೆನೆಸಿ। ಅರವಿನೊಳಗೆ ನಾಮಸ್ಮರಣೆಯ ಹಿಡಿಸಿ। ಮರವಿನ ದೇಹಕ್ಕೆ ಬೋಧವ ಮಾಡಿಸಿ। ಹೀಗೆ ದಿನದಿನಕ ಆತ್ಮನ ಕೈಯ ಸೇರಿಸೀ ॥ ಜೋ ಜೋ ॥ ೧ ॥ ಮೂರು ಮಾಡಬೇಕು ಚಿತ್ತ ಪಾಲಟ। ಆರು ಮಾಡಬೇಕು ಅವನ ಕೈವಾಸ। ಆಗತಿಳಿಯೋದು ಯೋಗಿ ಮನೆ ಆಟ। ಇದರ ಖೂನ ತಿಳಿಯಬೇಕು ಗುರುವಿನ ಗುರುತ ॥ ೨ ॥ ಪಾಪದ

## ಜೋಗುಳಗಳು

ಮನೆಯೊಂದು ತೊಳೆಯಿಸಿದವನು। ಪುಣ್ಯದ ಮನೆಯೊಂದು ತಿಳಿಯಿಸಿದವನು। ನಾಮ ಅಮೃತಸಾರ ಉಣ್ಣಿಸಿದವನು। ನಿತ್ಯನೇಮದೊಳಗೆ ನಿರಾಕಾರ ತೋರಿದನು ॥ ೩ ॥ ಮನಸಿನಬಿಢಿ ಕಡಿಯಿಸಿದವನು। ಕನಸಿನ ಪ್ರಕಾರ ಎನ್ನಿಸಿದವನು। ಮಾಸಮಾಸಕೇ ತಾನೇ ಪಾಲಟಾದನು। ನಮ್ಮ ಗುರುವಿನ ಮಗ ಗುರಿಯಾಗಿ ತೋರಿದನು ॥ ೪ ॥ ವಸ್ತು ತಾನೇ ಆದ ಮಸ್ತಕದಲ್ಲಿ। ಮಸ್ತಕ ಮಧ್ಯದ ಮೂಲ ಕೊನೆಯಲ್ಲಿ। ಸತ್ಯಪೂರೆಂಬೋ ಶಿವ ಮಂತ್ರದಲ್ಲಿ। ಅಲ್ಲಿ ಚಿತ್ತ ಕೂಡಿತು ನಮ್ಮ ಶಿವನಭೆಟ್ಯಾಗೀ ॥ ೫ ॥ ಬಾಲ ಹುಟ್ಟಿದ ಬಾಲೆಯ ಉದರಲ್ಲಿ। ಜೋಗುಳ ಹಾಡೇವು ಅವನ ಹೆಸರಲ್ಲಿ। ಭೋಗದ ಗುಣಗಳು ನೀಗಿದವಲ್ಲಿ। ನಮ್ಮ ಯೋಗಿಯ ತೊಟ್ಟಿಲ ತೂಗಿರೇ ಬ್ಯಾಗದಲಿ ॥ ೬ ॥ ಮುತ್ತಿನ ಮೂಗುತಿ ಮೂಗಿನಲ್ಲಿಟ್ಟು। ವಸ್ತು ಬಾಲನ ತೊಟ್ಟಿಲು ತೂಗುತ। ಅನುಭವಕೆಲ್ಲರು ಕೂಡಿರೆವ್ವ। ಇಂಥ ಸೃಷ್ಟಿಯೊಳಗ ಶಿವನ ತೊಟ್ಟಿಲ ತೂಗುತ ॥ ೭ ॥ ಅಪ್ಪ ಕೊಟ್ಟನು ಎನಗೆ ಒಪ್ಪುವ ಮಗನ। ತಪ್ಪಗೊಡದೆ ನಿಮ್ಮ ಜೋಗುಳ ಹಾಡುವೆನು। ಸತ್ತು ಹುಟ್ಟಿಬರುವ ಜನ್ಮ ಕಡಿದವನು। ನಿತ್ಯ ನಿತ್ಯ ಕಾಲದಲ್ಲಿ ನಿಮ್ಮನೇ ಭಜಿಸುವೆನು ॥ ೮ ॥ ಜೋಗುಳ ಹಾಡೇವು ನೋಡುತ ಅವನ। ಕಂಡೇವೀಗ ನಮ್ಮ ವಸ್ತು ಬಾಲನ್ನ। ಮೈಲಿಗೆ ಮುಡಚಟ್ಟು ಇಲ್ಲದೇ ಹುಟ್ಯಾನ। ಇಂಥ ರಾಮರಸದಿಂದ ಕಾಮ ಹುಟ್ಟಿದನು ॥ ೯ ॥ ಗುರುವಿನ ದಯದಿಂದ ಮಾಡಿದ ಪದವು। ಅರವಿಟ್ಟು ತಿಳಿದವರಿಗೆ ಆದೀತು ವರವು। ಅರವಿಲ್ಲದವರಿಗೆ ಮಾಯಾದ ಮಲವು। ಇಂಥ ಕಾಯದೊಳು

ಇರುವವನ ತಿಳಿದು ಪಾರಾಗು ॥ ೧೦ ॥ ಜೋ ಜೋ ನಮ್ಮ ಗುರುವಿನ ಹಾಡಿ। ಜೋ ಜೋ ಸತ್ಯ ಸಾಧುರನ ಪಾಡಿ। ಜೋ ಜೋ ದೇವ ಸಾಂಬನ ನೋಡಿ। ನಮ್ಮ ಉಮದಿ ಗುರುವಿನ ನೆನಿಸಿ ಕೊಂಡ್ಯಾಡಿ ॥ ೧೧ ॥ ಜೋ ಜೋ॥

## ಭಾರುಡಗಳು (ಮುಂಡಿಗೆಗಳು)

### ೧

ದೇವಾಚ್ಯಾ ಘರಚೀ ಆಹೆ ಉಲಟೀ ಖೂಣ।
ಪಾಣ್ಯಾಲಾ ಮೋಠೀ ಲಾಗಲೀ ತಹಾನ ॥ ೧ ॥

ಆತ ಘಾಗರ ಬಾಹೇರ ಪಾಣೀ।
ಪಾಣ್ಯಾಲಾ ಪಾಣೀ ಆಣೀ ಬಾಂಧೋನೀ ॥ ೨ ॥

ಹಂಡಾ ಖಾವೂನ ಭಾತ ಟಾಕಿಲಾ।
ಬಕರ್‍ಯಾಚ್ಯಾ ಪುಢೇ ದೇವ ಕಾಪಿಲಾ ॥ ೩ ॥

ಆಜ ಏಕ ಆಮ್ಹೀ ನವಲ ದೇಖಿಲೇ।
ವಳಚಣೀಚೇ ಪಾಣೀ ಆಢ್ಯಾಸೀ ಗೇಲೇ ॥ ೪ ॥

ಶೇತ ಪೇರೂನ ಹುರಡ್ಯಾಸೀ ಆಲಾ।
ಶೇತಾಚಾ ರಾಖಣದಾರ ಶೇತಾನೇ ಗಿಳಲಾ ॥ ೫ ॥

ಮುಂಡಿಗೆಗಳು

ಏಕಾ ಜನಾರ್ದನೀ ಮಾರ್ಗ ಆಹೇ ಉಲಟಾ।
ಜೋ ಜಾಣೇಲ ತೋ ತರೇಲ ಸದ್ಗುರುಕಾ ಬೇಟಾ ॥ ೬ ॥

ಭಾವಾರ್ಥ: ಪರಮಾತ್ಮನ ಮನೆಯ ನೀತಿ-ನ್ಯಾಯವು ವಿಲಕ್ಷಣವಾದದ್ದು. ಅದು ಒಂದು ರೀತಿಯಿಂದ ವಿಪರೀತವೇ ಸರಿ. ಅವನ ಸಾಮ್ರಾಜ್ಯದಲ್ಲಿ ಅಲೌಕಿಕ ಘಟನೆಗಳು ನಡೆಯುತ್ತವೆ. ದಾಹ ಶಮನಮಾಡುವ ನೀರಿಗೇ ಅತೀ ನೀರಡಿಕೆಯಾಗಿದೆ. (ಸಂಸಾರದ ಪಿಪಾಸೆ ದುರ್ಧರವಾದದ್ದು.) ಕೊಡದ ಒಳಗೆ ನೀರು ಇರುವದರ ಬದಲು ನೀರೇ ಹೊರಗೆ, ನೀರನ್ನು ಒಳಗೊಳ್ಳುವ ಕೊಡವೇ ಒಳಗೆ ದೃಶ್ಯವಾಗುತ್ತದೆ. (ನಿಜವಾಗಿ ಬ್ರಹ್ಮತತ್ತ್ವವೇ ಅಧಿಷ್ಠಾನ, ಪ್ರಪಂಚವು ಆ ತತ್ತ್ವದ ಮೇಲಿನ ಒಂದು ವಾದ. ಹೀಗಿರುವಾಗ ಪರಮಾತ್ಮನನ್ನು ಮರೆಮಾಡಿ ಪ್ರಪಂಚವೇ ಕಣ್ಣಿಗೆ ಬೀಳುತ್ತದೆ). ನೀರು ನೀರನ್ನೇ ಕಟ್ಟಿತಂದಿತು. ಬಿಸಿಲುಗುದುರೆಯನ್ನೇ ಹರಿಯುವ ನೀರೆಂದು ನಂಬಿ ನಾವು ಆಚರಿಸುತ್ತೇವೆ. ಮಾನವನ ಜೀವನವೆಂದರೆ ಅಸಂಬದ್ಧ ವಿಷಯಗಳ ಅಡ್ಡಾದಿಡ್ಡಿಯಾಗಿ ತುಂಬಿದ ಗಂಟು. ಬೇಯಿಸಲು ಉಪಯುಕ್ತವಾದ ಪಾತ್ರೆಯನ್ನೇ ತಿನ್ನುವುದು ಹಾಗೂ ಬೆಂದ ಅನ್ನವನ್ನು ಹೊರಚೆಲ್ಲುವದು ನಡೆದಿದೆ. (ಅಸಾರ ಸಂಸಾರದ ಸೇವನೆ ಹಾಗೂ ಸಾರ ತತ್ತ್ವವಾದ ಪರಮಾತ್ಮನ ಉಚ್ಚಾಟನೆ). ಕುರಿಯ ಎದುರು ದೇವನನ್ನೇ ಕೊಂದರು. ಬ್ರಹ್ಮಾರ್ಪಣ ಭಾವ ಹೋಗಿ ದೇಹಸುಖಕ್ಕಾಗಿ ಎಲ್ಲವನ್ನೂ ಮಾಡಿದ್ದಾಗಿದೆ. ಗೋಡೆಯ ಮೇಲೆ ನಿಂತ ನೀರು ಕೆಳಗೆ ಬೀಳದೆ

ಭಾವಾರ್ಥ: ತಾಯಿ ಎಂದರೆ ಹರಿಮಾಯೆ, ತಂದೆ ಎಂದರೆ ಪರತತ್ತ್ವ. ಇವೆರಡನ್ನು ಎಂದರೆ ಪ್ರಪಂಚ ಪರಮಾರ್ಥವನ್ನು ನಾನೇ ಮಾಡುವೆನೆಂಬ ಜೀವಭಾವವು, ಎಂದರೆ ಅಹಂಕಾರವನ್ನು ಜೀವಂತ ಕೊಲ್ಲಬೇಕು. ಎಲ್ಲ ಕರ್ತೃತ್ವವು ಪರಮೇಶ್ವರನಿಗೆ ಇದ್ದುದರಿಂದ ಎಲ್ಲ ಮಾಡುವವನು ನಾನೇ ಎಂಬ ವೃಥಾ ಅಭಿಮಾನವು ಅಳಿಯಬೇಕು. ಒಟ್ಟಿನಲ್ಲಿ ಮಾಯಾ, ಮೋಹ ಹಾಗೂ ಅಹಂಕಾರ ಮಮಕಾರಗಳಿಗೆ ತಿಲಾಂಜಲಿ ಕೊಡಬೇಕು. ಏಕತತ್ತ್ವವಾದ ಪರಮೇಶ್ವರನಿಗೆ ಶರಣುಹೋಗಿ ವಂದಿಸಬೇಕು. ಜೀವಭಾವವನ್ನು ನಾಶಗೊಳಿಸಬೇಕು. ಆಲಸ್ಯವನ್ನು ಪೂರ್ಣವಾಗಿ ಬಿಡಬೇಕು. ಬೆಳಗಿನಲ್ಲಿ ಗಾಢ ನಿದ್ರೆ ಮಾಡದೇ ಪರಮಾತ್ಮನ ಭಜನೆ ಮಾಡಬೇಕು. (ಪ್ರಕೃತಿ-ಪುರುಷರು ಪರಬ್ರಹ್ಮಸಂಭೂತರು. ಆದ್ದರಿಂದ ಅವರಿಬ್ಬರೂ ಅಣ್ಣ-ತಂಗಿ ಇದ್ದಂತೆ. ತಂಗಿಯೆಂದರೆ ಪ್ರಕೃತಿತತ್ತ್ವ. ಅವಳ ಲಗ್ನವನ್ನು, ಪುರುಷತತ್ತ್ವದೊಡನೆ ಎಂದರೆ ಅಣ್ಣನೊಡನೆ ಮಾಡಬೇಕು. ದೇಹಭಾವವನ್ನು ಶಿವಭಾವದೊಡನೆ ಜೋಡಿಸಬೇಕು). ಅದರಿಂದ ಬ್ರಾಹ್ಮೀಸ್ಥಿತಿಯು ಪ್ರಾಪ್ತವಾಗುತ್ತದೆ. ತುಕಾರಾಮಮಹಾರಾಜರು ಹೇಳುವದೇನೆಂದರೆ, ನನ್ನಲ್ಲಿ ಪರಮಾರ್ಥ ಸಾಧನೆಯ ಪುಣ್ಯ ಸಂಚಯವಿದ್ದರೇನೇ ಈ ದಿವ್ಯದೃಷ್ಟಿಯು ನನಗೆ ಬರುತ್ತದೆ.

೩

ನಾಹೀ ಕೇಲೇ ಮಾತ್ರಾಗಮನ। ಜಳೋ ತ್ಯಾಚೇ ಸಂತಪಣ ॥ ೧ ॥
ನಾಹೀ ಕೇಲೇ ಪರದ್ವಾರ। ವ್ಯರ್ಥ ತ್ಯಾಚಾ ಹಾ ಸಂಸಾರ ॥ ೨ ॥

ಪರವಸ್ತೂಚಾ ಅಭಿಲಾಷ। ತೋಚಿ ಜಾಣಾ ವಿಷ್ಣುದಾಸ ॥ ೩ ॥
ಐಸಾ ಜ್ಯಾಚಾ ಹಾ ನಿರ್ಧಾರ। ನಿವೃತ್ತಿ ಲೋಳೇ ಚರಣಾವರ ॥ ೪ ॥

ಭಾವಾರ್ಥ: ಜೀವನ್ಮುಕ್ತನು ಮಾಯಾ ಪ್ರಪಂಚದಲ್ಲಿದ್ದರೂ ಅದರಲ್ಲಿ ನಿಜವಾಗಿಯೂ ನಿಂತವನಲ್ಲ (ಅದರಲ್ಲಿ ಎಂದೂ ಆಸಕ್ತನಾಗಿಲ್ಲ). ಸಾಂಸಾರಿಕ ಬಂಧನ ಅವನಿಗಿಲ್ಲ. ಅವನು ಅಕರ್ತವ್ಯನು. ಅವನ ಲಕ್ಷ್ಯವೆಲ್ಲ ಪರಾತ್ಪರ-ವಸ್ತುವಿನಲ್ಲಿ ನಟ್ಟಿರುವದರಿಂದ ಅವನು ಸಂಸಾರಪಾಶರಹಿತನು. ಹೀಗಿದ್ದರೂ ಅವನ ಜೀವನ ವ್ಯರ್ಥವೆಂದು ಪ್ರಪಂಚದಲ್ಲಿ ಆಸಕ್ತಿಯಿದ್ದವರು ತಿಳಿಯುತ್ತಾರೆ. ಆದರೆ ಅವನ ಸ್ಥಿತಿ ಎಂದರೆ ಪ್ರಪಂಚದಲ್ಲಿ ಉದಾಸ, ಪರಮಾರ್ಥದಲ್ಲಿ ಉಲ್ಲಾಸ. ಅವನ ತೀವ್ರ ಇಚ್ಛೆ ಪರಬ್ರಹ್ಮಪ್ರಾಪ್ತಿಗಾಗಿಯೇ ಇದೆ. ಅವನು ಭಗವತ್ಸ್ವರೂಪದಲ್ಲಿಯೇ ತಲ್ಲೀನನಾಗಿರುತ್ತಾನೆ. ಇಂಥ ಮಹಾತ್ಮನಿಗೆ ವಿಷ್ಣುದಾಸ ಎಂದರೆ ನಿಜಭಕ್ತ ಎನ್ನಬೇಕು. ಹೀಗೆ ಯಾವನ ದೃಢನಿಶ್ಚಯವೋ ಆ ಪರಮ ಪುರುಷನ ಪಾದಾರವಿಂದಗಳಲ್ಲಿ ನಿವೃತ್ತಿನಾಥರು ಉರುಳಾಡುತ್ತಾರೆ.

೪

ಜಯ ನಿರ್ಗುಣ ನಿರಾಕಾರ ಪ್ರಭೋ- ಮೊದಲು ರೇವಣಸಿದ್ಧ ಅವತಾರನಾಗಿ- ರೇಣಾಗಿರಿಪರ್ವತದಲ್ಲಿ ಕ್ರೀಡೆಯನ್ನಾಡಿ- ಆಮೇಲೆ ಕಾಡಸಿದ್ಧೇಶ್ವರ

## ಮುಂಡಿಗೆಗಳು

ಅವತಾರನಾಗಿ- ಅತಿವೇಗದಿಂದ ಸಿದ್ಧಗಿರಿಗೆ ಬಂದು- ಆ ಸಿದ್ಧಗಿರಿಯ ಕೊಳ್ಳದಲ್ಲಿ ಐಕ್ಯನಾಗಿ ಗುರುಲಿಂಗ ಜಂಗಮ ಅವತಾರ ತೊಡಲು- ಆಮೇಲೆ ನಾರಾಯಣ ರೂಪ ತಾಳಿ- ನಿಂಬರಗಿಯಲ್ಲಿ ಅವತಾರ ತೊಡಲು- ಆಮೇಲೆ ರಘುನಾಥಪ್ರಿಯರೆಂಬುವರು ಬಂದು- ಸಾಧುಎಂದು ಬಿರುದ ಸಾರಲಾಗಿ- ಸಂಭವಾಮಿ ಯುಗೇ ಯುಗೇ ಸಗುಣರೂಪಾಗಿ- ಪುಣ್ಯಪರಮ ಪವಿತ್ರ ಇಂಚಗೇರಿಸ್ಥಾನದಲ್ಲಿ- ಕುರುಹು ಇಡಲಾಗಿ- ಕಾಡಸಿದ್ಧೇಶ್ವರ ಸಗುಣರೂಪಕ್ಕೆ ಬಂದು- ಚಿಮ್ಮಡ ಸ್ಥಾನದಲ್ಲಿ ಸಗುಣರೂಪಕ್ಕೆ ಬಂದು- ಯುಗೇ ಯುಗೇ ಅವತಾರ ತೊಡಲಾಗಿ ಯೋಗನಿಷ್ಠಾವಂತನೆನಿಸಲಾಗಿ- ಅಸಂಖ್ಯ ಎಷ್ಟೋ ಭವರೋಗ ಹೋಗಲಾಗಿ- ವಿಶ್ವ ಬ್ರಹ್ಮರೂಪ ಮಾಡಲಾಗಿ- ಎಷ್ಟೋ ವ್ಯಾಧಿ ಬಾಧೆ ದೂರ ಮಾಡಲಾಗಿ- ಏನಾದರೂ ಸಗುಣರೂಪದಲ್ಲಿ ನಿರ್ಗುಣ ಆಗಲಾಗಿ- ದೇವರೂಪಕ್ಕೆ ಕುರುಹು ಆಗುವ- ನರಕರಣೀ ಮಾಡಲಾಗಿ ನಾರಾಯಣ ರೂಪ ಆಗುವದು.

೫

ಪ್ರಶ್ನೆ : ಕಾ ರೇ ಮಹಾರಾ ಮದನಮಸ್ತಾ?

ಉತ್ತರ : ಕಾ ಹೋ ಬ್ರಾಹ್ಮಣಬುವಾ ಭಲತೇ ಭಲತೇಚ ಬೋಲತಾ?

ಪ್ರಶ್ನೆ : ತುಝ್ಯಾ ಬಾಪಾಚೇ ಭಯ ಕಾಯ?

ಉತ್ತರ : ತುಮಚೇ ಆಮಚೇ ಮಾಯಬಾಪ ಏಕಚ.

ಪ್ರಶ್ನ : ಏಕಚ ಅಸೇ ಬೋಲೂ ನಕೋ.

ಉತ್ತರ : ನಿರ್ಗುಣಾಪಾಸೂನ ಅವಘೇ ಝಾಲೋ.

ಪ್ರಶ್ನ : ನಿರ್ಗುಣ ತುಲಾ ಕಾಯ ಠಾವೇ ರೇ.

ಉತ್ತರ : ಆತ್ಮಸ್ವರೂಪ ಶೋಧೂನಿ ಪಹಾವೇ.

ಪ್ರಶ್ನ : ಆತ್ಮಸ್ವರೂಪ ಆಮ್ಹಾ ಕಳೇನಾ.

ಉತ್ತರ : ನಾಹೀ ತರೀ ಸಂತಾಂಸಿ ಶರಣ ಜಾ ನಾ.

ಪ್ರಶ್ನ : ಸಂತಾಂಸಿ ಶರಣ ಗೇಲ್ಯಾನೇ ಕಾಯ ಹೋತೇ?

ಉತ್ತರ : ಚೌರ್‍ಯಾಂಶೀಂಚಾ ಫೇರಾ ಚುಕತೋ.

ಪ್ರಶ್ನ : ಹೇ ಜ್ಞಾನ ತುಲಾ ಕೋಠೂನ ಪ್ರಾಪ್ತ ಝಾಲೇ?

ಉತ್ತರ : ನಿವೃತ್ತಿಪ್ರಸಾದೇ ಕಳೋ ಆಲೇ.

ವಿಠ್ಠಲ, ವಿಠ್ಠಲ, ವಿಠ್ಠಲ ವಿಠ್ಠಲ।
ಪುಂಡಲೀಕವರದಾ ಹರಿ ವಿಠ್ಠಲ।

ಭಾವಾರ್ಥ:

ಪ್ರಶ್ನೆ : ಏನಪ್ಪಾ, ಕಾಮಾಂಧನಾದ ಹರಿಜನನೇ?

ಉತ್ತರ : ಏನಪ್ಪಾ ಬ್ರಾಹ್ಮಣನೇ, ಸಿಕ್ಕಸಿಕ್ಕ ಹಾಗೆ ಮಾತಾಡ್ತಿಯಲ್ಲಾ?

## ಮುಂಡಿಗೆಗಳು

ಪ್ರಶ್ನೆ : ನಿಮ್ಮಪ್ಪನ ಹೆದರಿಕೆ ಏನು?

ಉತ್ತರ : ನಿಮ್ಮ, ನಮ್ಮ, ಅವ್ವ ಅಪ್ಪ, ಒಂದೇ.

ಪ್ರಶ್ನೆ : ಒಬ್ಬರೇ ಎಂದು ಹೇಳಬೇಡ.

ಉತ್ತರ : ನಿರ್ಗುಣದಿಂದಲೇ ಎಲ್ಲರೂ ಬಂದೆವು.

ಪ್ರಶ್ನೆ : ನಿರ್ಗುಣವೆಂಬುದು ನಿನಗೇನು ಗೊತ್ತು?

ಉತ್ತರ : ಆತ್ಮಸ್ವರೂಪವನ್ನು ಶೋಧಿಸಿ ನೋಡು.

ಪ್ರಶ್ನೆ : ಆತ್ಮಸ್ವರೂಪವು ನಮಗೆ ತಿಳಿಯದು.

ಉತ್ತರ : ಇಲ್ಲದಿದ್ದರೆ ಸಂತರಿಗೆ ಶರಣುಹೋಗು.

ಪ್ರಶ್ನೆ : ಸಂತರಿಗೆ ಶರಣು ಹೋಗುವುದರಿಂದ ಏನಾಗುವುದು?

ಉತ್ತರ : ಎಂಬತ್ತುನಾಲ್ಕು ಲಕ್ಷ ಯೋನಿಗಳಲ್ಲಿಯ ಪ್ರದಕ್ಷಿಣೆ ತಪ್ಪುವುದು.

ಪ್ರಶ್ನೆ : ಈ ಜ್ಞಾನ ನಿನಗೆ ಹೇಗೆ ದೊರಕಿತು?

ಉತ್ತರ : ನಿವೃತ್ತಿಪ್ರಸಾದದಿಂದ ತಿಳಿದು ಬಂತು.

ವಿಠ್ಠಲ, ವಿಠ್ಠಲ, ವಿಠ್ಠಲ, ವಿಠ್ಠಲ.
ಪುಂಡಲೀಕವರದಾ ಹರಿ-ವಿಠ್ಠಲ.

## ೬

## ಗುರುಶಿಷ್ಯ ಸಂವಾದ

ಶಿಷ್ಯ : ಶರಣು ಶರಣು ಪೂರ್ಣಾನಂದ ಸತ್ಪುರುಷರೇ ನಮೋ ನಮೋ.

ಗುರು : ಸದಾನಂದ ವಿವೇಕೀ ಇದ್ದಕ್ಕಿದ್ದಾಂಗೇ ಆಶೀರ್ವಾದವು.

ಶಿಷ್ಯ : ತಮ್ಮಾ ನೀನ್ಯಾರು? ನಿನ್ನ ಹೆಸರೇನು?

ಗುರು : ಜೀಯಾ, ಹೆಸರಿಟ್ಟು ಹೇಳಲಾರದ ವಸ್ತುವೇ ನಾನು.

ಶಿಷ್ಯ : ಆ ವಸ್ತು ಯಾವ ಸ್ವರೂಪದಿಂದ ಇರುತ್ತದಣ್ಣಾ?

ಗುರು : ಮನಸ್ಸಿಗಗೋಚರವಾಗಿರುತ್ತದೆ ಜಾಣಾ.

ಶಿಷ್ಯ : ಯಾರಲ್ಲಿ ಪ್ರಾಪ್ತವಾಗುತ್ತದೀಗ?

ಗುರು : ಶ್ರೇಷ್ಠ ಗುರುಗಳಲ್ಲಿ ಪ್ರಾಪ್ತವಾಗುತ್ತದೆ ಬೇಗ.

ಶಿಷ್ಯ : ಅವರು ನಮಗೆ ಹ್ಯಾಗೆ ದೊರೆಯುತ್ತಾರಣ್ಣಾ?

ಗುರು : ಸೇವಾ ಮಾಡುವುದರಿಂದ ಒಲೆಯುತ್ತಾರೆ ಜಾಣಾ.

ಶಿಷ್ಯ : ಸೇವಾ ಅಂದರೇನು ನಮಗೆ ತಿಳಿಯುವುದಿಲ್ಲ.

ಗುರು : ಸೇವಾ ಅಂದರೆ ಎಲ್ಲ ರೀತಿಯಿಂದ ಗುರುವಿಗೆ ಸಂತೋಷ ಕೊಡಬೇಕಲ್ಲ.

## ಮುಂಡಿಗೆಗಳು

ಶಿಷ್ಯ : ಸೇವಾ ಮಾಡುವ ಸಾಧಕನು ಹ್ಯಾಗಿರಬೇಕು?

ಗುರು : ದುಃಖಮಯ ಪ್ರಪಂಚದಲ್ಲಿ ನಿರಾಶನಾಗಿರಬೇಕು.

ಶಿಷ್ಯ : ಆಶೆ ಇದ್ದರೇನು ಮಾಡುತ್ತದಯ್ಯಾ?

ಗುರು : ಜನ್ಮಜನ್ಮಾಂತರಕ್ಕೆ ಎಳೆದೊಯ್ಯುತ್ತದೆ ಮಾಯಾ.

ಶಿಷ್ಯ : ಯಾರ್‍ಯಾರನ್ನು ಎಳೆದೊಯ್ಯುತ್ತ ಬಂದದೀಗ?

ಗುರು : ಹೆಣ್ಣು, ಹೊನ್ನು, ಮಣ್ಣು ಮೆಚ್ಚಿದವರನ್ನೆಲ್ಲ ಎಳೆದೊಯ್ಯುತ್ತ ಬಂದದೀಗ.

ಶಿಷ್ಯ : ಸಣ್ಣವನಾಗಿ ಕಾಣಿಸುತ್ತೀ? ಎಂಥ ಮಾತು ಮಾತಾಡುತ್ತೀ ಸ್ವಚ್ಛ?

ಗುರು : ನಾನು ಸಣ್ಣವನಾದರೆ ಗುರುವಿನ ಕೃಪಾ ಸಣ್ಣದೇನೋ ಹುಚ್ಚಾ?

ಶಿಷ್ಯ : ಕೃಪಾ ಆಗಬೇಕಾದರೆ ಏನು ಮಾಡಬೇಕರಿ?

ಗುರು : ಹಗಲಿರುಳು ದೇವರ ಧ್ಯಾನಾನೇ ಮಾಡುತ್ತಿರಬೇಕರಿ.

ಶಿಷ್ಯ : (ಮುದುಕ) ದೊಡ್ಡವನಾದಮೇಲೆ ಮಾಡುತ್ತೇನೋ ಹುಡುಗಾ.

ಗುರು : ಆಯುಷ್ಯ ನಿನ್ನದೇನೋ ಕೋಡಗಾ?

ಶಿಷ್ಯ : ಮಾಡಬೇಕೆಂದರೂ ಮರೆವು ಯಾಕೆ ಬರುತ್ತದೆ ತಮ್ಮಾ?

ಗುರು : ಪಾಪ ಹೆಚ್ಚು ಮಾಡಿದ್ದರಿಂದೋ ಹುಮ್ಮಾ.

ಶಿಷ್ಯ : ಪಾಪವು ಹ್ಯಾಗಾದರೆ ಹೋಗುತ್ತದೆ ತಂದೆ?

ಗುರು : ಸಂತರ ಸಂಗ ಮಾಡುವದರಿಂದ ಒಂದೇ.

ಶಿಷ್ಯ : ಸಂತರು ಎಲ್ಲಿದ್ದಾರೋ ಸಗುಣಾ?

ಗುರು : ಜಗತ್ತು ತುಂಬಿ ಇದ್ದಾರೋ ಜಾಣಾ.

ಶಿಷ್ಯ : ನನಗೆ ಯಾರೂ ಕಾಣುವುದಿಲ್ಲೋ ಸುಜ್ಞಾನಿ?

ಗುರು : ನಿನ್ನ ಕಣ್ಣು ಕಾಣುವುದಿಲ್ಲೋ ಅಜ್ಞಾನಿ.

ಶಿಷ್ಯ : ಈ ಜಾಣತನ ನಿನಗೆ ಹ್ಯಾಗೆ ಬಂತಲ್ಲಾ?

ಗುರು : ಸಂಸಾರದ ತೊಡಕನ್ನು ಬಿಡಿಸಿಕೊಂಡದ್ದರಿಂದಲ್ಲಾ.

ಶಿಷ್ಯ : ಸಂಸಾರ ಯಾರ್ಯಾರನ್ನು ತೊಡಗಿಸಿದೆ ಕುಶಲಾ?

ಗುರು : ಜನ್ಮಜನ್ಮಾಂತರಕ್ಕೆ ನಿನ್ನನ್ನೇ ಬರಿಸಿದೆ ಮುಸಲಾ.

ಶಿಷ್ಯ : ನಿನಗ್ಯಾಕೆ ಜನ್ಮ ಬಂದದಣ್ಣಾ?

ಗುರು : ನಾನು ಜನ್ಮಕ್ಕೆ ಬಂದೇ ಇಲ್ಲೋ ಜಾಣಾ.

## ಮುಂಡಿಗೆಗಳು

ಶಿಷ್ಯ : ನನ್ನ ಕಣ್ಣಿಗೆ ಹ್ಯಾಗೆ ಕಾಣಿಸುತ್ತೀಯಲ್ಲೋ ಹುಚ್ಚಾ?

ಗುರು : ನಿನ್ನ ಕಣ್ಣಿಗೆ ಹ್ಯಾಗೆ ಕಾಣಿಸುತ್ತೇನೋ ನೀಚಾ?

ಶಿಷ್ಯ : ಇಂಥ ಪೂರ್ಣ ಜ್ಞಾನ ನಿನಗೆ ಹ್ಯಾಗೆ ಬಂತು?

ಗುರು : ಅನಂತ ಜನ್ಮವಾಗಿ ತಪಸ್ಸು ಮಾಡೋಣದರಿಂದ ಬಂತು.

ಶಿಷ್ಯ : ತಪಸ್ಸು ಅಂದರೇನು ಮಾಡಬೇಕು ಶಾಂತಾ?

ಗುರು : ಈಶ್ವರನಲ್ಲಿ ಶರೀರ ಆಹುತಿ ಕೊಡಬೇಕು ಭ್ರಾಂತಾ.

ಶಿಷ್ಯ : ಅಹಾ, ನಾನು ಧನ್ಯನಾದೆನಲ್ಲ ಈಗ!

ಗುರು : ಧನ್ಯನಾದರೆ ಸಿದ್ಧನಾಗುತ್ತೀಯೋ ಬೇಗ.

ಶಿಷ್ಯ : ನಿನ್ನ ಉಪಕಾರ ಎಷ್ಟಂತ ಹೇಳಲಿ ಗೆಳೆಯಾ.

ಗುರು : ನಿನ್ನ ಸೇವಾ ಎಷ್ಟಂತ ಹೇಳಲಿ ಗೆಳೆಯಾ.

ಶಿಷ್ಯ : ಒಳ್ಳೇ ಗೆಳೆತನ ಕೂಡಿತು ಕೂಸ.

ಗುರು : ಜಯ ಜಯ ಮಂಗಲವಾಗಲಿ ಹಂಸ.

ಶಿಷ್ಯ : ಆನಂದಾಶೀರ್ವಾದ ಮಾಡು ಗುರುವೇ.

ಗುರು : ಪೂರ್ಣಬ್ರಹ್ಮಾನಂದವಾಗಲಿ ಅರುವೇ.

## ನಿತ್ಯನೇಮಾವಳಿ

ಶಿಷ್ಯ : ಬ್ರಹ್ಮನಾಗುವ ಕೀಲ ನಮಗೆ ಹ್ಯಾಗೆ ತಿಳಿಯಬೇಕೋ ದೇವಾ?

ಗುರು : ಶ್ರೀಗುರುಲಿಂಗಜಂಗಮ ಮಹಾರಾಜರಲ್ಲಿ ಶರಣು ಹೋಗಬೇಕೋ ಜೀವಾ.

೭

ಸಾವಧಾನ ಸಾವಧಾನ। ವಾಚೇ ಬೋಲಾ ರಾಮ ರಾಮ ॥ ಧೃ ॥ ದಹಾವರ್ಷೇ ಬಾಲಪಣ ವೀಸ ವರ್ಷೇ ತಾರುಣ್ಯ। ಅಂಗೀ ಚಢಲೇ ಮದನಬಾಣ। ತೇಥೇ ಕೈಚೇ ಸಾವಧಾನ ॥ ೧ ॥ ತಿಸಾಚೇ ಹೋಯ ಭರತೀ। ದಾರಾ-ಪುತ್ರಾ-ಲಾಗೀ ಪ್ರೀತಿ। ತ್ಯಾಂಚೇಚ ಉಪಜೇ ಭ್ರಾಂತೀ। ತೇಥೇ ಕೈಚೇ ರಾಮಪ್ರಾಪ್ತಿ ॥ ೨ ॥ ಚಾಳೀಸ ವರ್ಷೇ ಝಾಲೀ। ಡೋಳಾ ಚಾಳಿಸೀ ಆಲೀ। ನೇತ್ರಾಸೀ ಭೂಲ ಪಡಲೀ। ಅಸತಾ ನ ದಿಸೇ ಜವಳೀ ॥ ೩ ॥ ಪನ್ನಾಸ ವರ್ಷೇ ಹೋತೀ। ಹಾಲತೀ ದಾತಾಂಚ್ಯಾ ಪಂಕ್ತೀ। ಶ್ಯಾಮ ಕೇಸ ಶುಭ್ರ ಹೋತಿ। ತ್ಯಾಲಾ ಮ್ಹಾತಾರಾ ಮ್ಹಣತೀ ॥ ೪ ॥ ಸಾಠೀಚಿ ಬುದ್ಧಿ ನಾಠೀ। ಹಾತೀ ಘೇವುನಿಯಾ ಕಾಠೀ। ವಸವಸಾ ಲಾಗೇ ಪಾಠೀ। ತ್ಯಾಲಾ ಹಾಸತೀ ಪೋರಟೀ ॥ ೫ ॥ ಸತ್ತರಾಚೇ ಆಲೀ ರಚನಾ। ಬಸಲೇ ತೇ ಉಠವೇನಾ। ಉಠಲೇ ತೇ ಚಾಲವೇನಾ। ಐಸೀ ಫಜೇತೀಚೇ ಯಾತನಾ ॥ ೬ ॥ ಚಾರ ವೀಸಾ ಮಿಳೋನೀ ಐಶೀ। ಪರಿ ತೋ ಝಾಲಾ ಅಪೇಶೀ। ಉದಕಾವೀಣ ಮಾಸೋಳೀ ಜೈಸೀ। ಜೀವ ಹೋತೋ ಕಾಸಾವೀಸೀ ॥ ೭ ॥ ವರ್ಷೇ ಝಾಲೇ ನವ್ವದ।

ಬೋಲವೇನಾ ಏಕ ಶಬ್ದ।। ದಾರಾಪುತ್ರ ಮ್ಹಣತೀ ಪ್ರಸಿದ್ಧ। ದೇವಾ ಯಾಚಾ ತೋಡೀ ಸಂಬಂಧ ।। ೮ ।। ಶತಮಾನ ಪುರುಷ ಝಾಲಾ। ಪರಿ ತೋ ವಾಯಾ ಗೇಲಾ। ರಾಮದಾಸಾಚೇ ಬೋಲಾ। ಅಂತೀ ಸಾವಧಾನ ಝಾಲಾ ।। ೯ ।।

ಭಾವಾರ್ಥ: ಎಚ್ಚರಾಗಿರಿ, ಎಚ್ಚರಾಗಿರಿ, ರಾಮ, ರಾಮ, ಎನ್ನಿರಿ. ಹತ್ತು ವರ್ಷ ಬಾಲ್ಯದಲ್ಲಿ, ಇಪ್ಪತ್ತು ವರ್ಷ ತಾರುಣ್ಯದಲ್ಲಿ, ಕಳೆಯುತ್ತದೆ. ಆಗ ಕಾಮನಬಾಣ ಮೈಯೆಲ್ಲ ಆವರಿಸಿರುವದು. ಆದ್ದರಿಂದ ಆಗ ಸಮಾಧಾನತೆ ಎಲ್ಲಿ? ಮೂವತ್ತು ವರ್ಷವೆಲ್ಲ ಹೆಂಡತಿಮಕ್ಕಳಿಗಾಗಿ ಪ್ರೀತಿ. ಅವರ ಭ್ರಾಂತಿ(ಮೋಹ)ಯಲ್ಲಿ ರಾಮನ ಪ್ರೀತಿ-ಪ್ರಾಪ್ತಿ ಹೇಗಾಗುವುದು? ನಾಲ್ವತ್ತು ವರ್ಷವಾದಾಗ ಕಣ್ಣಿಗೆ ಕನ್ನಡಕ ಬಂತು. ಹತ್ತಿರವಿದ್ದರೂ ಕಣ್ಣಿಗೆ ಕಾಣಿಸುವುದಿಲ್ಲ. ಐವತ್ತು ವರ್ಷವಾಯಿತು. ಹಲ್ಲುಗಳು ಅಲುಗಾಡ ಹತ್ತಿದವು. ಕರೀ ಕೂದಲು ಬೆಳ್ಳಗಾಗಹತ್ತಿದವು. ಆಗ ಮುಪ್ಪು ಬಾಂದಂತಾಯಿತು. ಅರವತ್ತರ ಬುದ್ಧಿ ಅರಳು-ಮರಳು. ಕೈಯಲ್ಲಿ ಬಡಿಗೆಹಿಡಿದು ಹೋಗುತ್ತಿರುವಾಗ ತಾಳ್ಮೆಯಿಲ್ಲದೆ ಜನರ ಮೇಲೆ ರೇಗಾಡುತ್ತಾನೆ. ಅದನ್ನು ನೋಡಿ ಹುಡುಗರು ನಗುತ್ತಾರೆ. ಎಪ್ಪತ್ತರ ವಯಸ್ಸು ಆದಾಗ್ಗ ಕುಳಿತರೆ ಏಳಲಿಕ್ಕಾಗದು, ಎದ್ದರೆ ನಡೆಯಲಾಗದು. ಹೀಗೆ ದುರವಸ್ಥೆಯ ಯಾತನೆಯಾಗುವದು. ನಾಲ್ಕು-ಇಪ್ಪತ್ತು ಎಂದರೆ ಎಂಬತ್ತು ವಯಸ್ಸಾದಾಗ, ನೀರಿನಿಂದ ಹೊರತೆಗೆದ ಮೀನಿನಂತೆ, ಜೀವ ಕಸಿವಿಸಿಗೊಳ್ಳುತ್ತದೆ. ತೊಂಬತ್ತು ಆಯಿತು ಎಂದರೆ ಒಂದು ಶಬ್ದ ಸಹ ಮಾತನಾಡಲಿಕ್ಕಾಗದು. ದೇವರೇ, ಇವನ ಸಂಬಂಧ ಬೇಗನೇ ಬಿಡಿಸು ಎಂದು

ಹೆಂಡತಿ-ಮಕ್ಕಳೂ ಹೇಳುತ್ತಾರೆ. ನೂರು ವರ್ಷ ಆದಾಗ ಎಲ್ಲವೂ ವ್ಯರ್ಥವಾದ ಜೀವನವಾಯಿತು. ರಾಮದಾಸರ ಉಪದೇಶದಂತೆ ಕೊನೆಗೆ ಸಾವಧಾನನಾಗುತ್ತಾನೆ.

೮

## ದಶಾವತಾರ ಭಾರುಡ

(ನಜರ ರಖೋ ಮೆಹರಬಾನ, ದಾಸ ಖಡಾ, ಚರಣ ಜುಡಾ, ಪೆಹರಾ ಕಲಿಜುಗಕಾ, ಭಾಲದಾರ ನಿರ್ಗುಣ ನಿರಾಕಾರಕಾ ಲೋಗೋ, ದಿಲ ಮೇ ಹೋಶಿಯಾರ ರಹೋ।)

ಪಾಟೀಲ : ತುಮ ಕೌನ ಹೋ?

ಭಾಲದಾರ : ಹಮ ತೋ ಭಾಲದಾರ ಹೈ।

ಪಾಟೀಲ : ತುಮ ಕಹಾँ ಕೇ ರಹನೇವಾಲೇ?

ಭಾಲದಾರ : ಹಮ ತೋ ವೈಕುಂಠ ಕೇ ರಹನೇವಾಲೇ।

ಪಾಟೀಲ : ಯಹಾँ ಕ್ಯೊಂ ಆಯೇ?

ಭಾಲದಾರ : ಯಹಾँ ಜೋ ಗಲಬಲಾ ಹೋತಾ ಹೈ ವಹ ಸುನಕರ ಇಧರ ಆಯೇ ಹೈ। ಇಧರ ಕ್ಯಾ ಹೋತಾ ಹೈ?

ಮುಂಡಿಗೆಗಳು

ಪಾಟೀಲ : ಮಹಾರಾಜ ಕಾ ಉತ್ಸವ।

ಭಾಲದಾರ : ಕೌನ ಸೇ ಮಹಾರಾಜ ಕಾ?

ಪಾಟೀಲ : ರಾಜಾಧಿರಾಜ ಶ್ರೀ ಗುರುಲಿಂಗಜಂಗಮಮಹಾರಾಜಕಾ।

ಭಾಲದಾರ : ಮಹಾರಾಜ ಕೇ ದರಬಾರ ಮೇ ಕೋಯೀ ನೌಕರ ಚಾಕರ ನಹೀ ಹೈ? ಇಧರ ಸಬ ಗಲಬಲಾ ಮಚಾ ಹೈ।

ಪಾಟೀಲ : ಜಹಾ ದೇವದ್ವಾರ ಹೋತಾ ಹೈ ವಹಾ ಗಲಬಲಾ ಹೋತಾ ಹೈ। ತುಮ ಕಿಸ ಕೀ ನೌಕರೀ ಕರತೇ ಹೋ?

ಭಾಲದಾರ : ಹಮ ತೋ ದಶಾವತಾರ ಕೀ ನೌಕರೀ ಕರತೇ ಹೈ।

ಪಾಟೀಲ : ಕೌನ ಸೇ ದಶಾವತಾರ?

ಭಾಲದಾರ : ಮತ್ಸ್ಯ, ಕಚ್ಛ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬೌದ್ಧ, ಕಲಂಕೀ ಇನ ದಶಾವತಾರೋಂ ಕೀ ನೌಕರೀ ಕರತೇ ಹೈ।

ಪಾಟೀಲ : ಮತ್ಸ್ಯ ಅವತಾರ ಮೇ ಕೈಸೀ ನೌಕರೀ ಕೀ?

ಭಾಲದಾರ : ಶಂಖಾಸುರ ನೇ ಬ್ರಹ್ಮಾಜೀ ಕೇ ವೇದ ಚುರಾ ಲಿಯೇ ಔರ ಸಮುದ್ರ ಮೇ ಛಿಪ್‌ಕರ ಬೈಠಾ। ಉಸ ಸಮಯ ಬ್ರಹ್ಮಾಜೀ ನೇ ಪ್ರಭೂಕೀ ಪ್ರಾರ್ಥನಾ ಕರತೇ ಹೀ ಭಗವಾನ ನೇ

ಮತ್ಸ್ಯರೂಪ ಧಾರಣ ಕರ ಕೇ ಶಂಖಾಸುರಕಾ ವಧ ಕಿಯಾ ಔರ ವೇದ ಬ್ರಹ್ಮಾಜೀ ಕೋ ಸೌಂಪ ದಿಯೇ। ವಹಾಁ ಪ್ರಭೂ ಕೇ ಸನ್ನಿಧ ರಹಕರ ಸೇವಾ ಕೀ।

ಪಾಟೀಲ : ಕಚ್ಛ ಅವತಾರ ಮೇ ಕೈಸೀ ನೌಕರೀ ಕೀ?

ಭಾಲದಾರ : ದೇವ ಔರ ದೈತ್ಯೋಂನೇ ಮಿಲಕರ ಸಾಗರ ಕಾ ಮಂಥನ ಕಿಯಾ। ಪೃಥ್ವಿ ರಸಾತಲ ಕೋ ಜಾನೇ ಲಗೀ। ಸಬ ದೇವತಾವೋಂಕೋ ಚಿಂತಾ ಪಡೀ। ತಬ ಭಗವಾನ ನೇ ಕಚ್ಛ ಕಾ ರೂಪ ಧಾರಣ ಕರ ಕೇ ಅಪನೇ ಪೃಷ್ಠಸೇ ಪೃಥ್ವಿಕೋ ಟೇಕಾ ದಿಯಾ। ಫಿರ ಕಚ್ಛ ಅವತಾರ ಖಲಾಸ ಕಿಯಾ।

ಪಾಟೀಲ : ವರಾಹ ಅವತಾರ ಮೇ ಕೈಸೀ ನೌಕರೀ ಕೀ

ಭಾಲದಾರ : ವರಾಹ ಅವತಾರ ಮೇ ಐಸೀ ನೌಕರೀ ಕೀ। ಜಬ ಪೃಥ್ವೀ ದೂಸರೀ ಬಾರ ರಸಾತಲ ಕೋ ಜಾನೇ ಲಗೀ ತಬ ಭಗವಾನ ನೇ ವರಾಹ ಕಾ ರೂಫ಼ ಧರ ಕೇ ಅಪನೇ ದಾತೋಂ ಪರ ಧರಿತ್ರೀ ಧಾರಣ ಕೀ। ಫಿರ ವಹಾ ಕೀ ನೌಕರೀ ಛೋಡ ಚಲೇ ಆಯೇ।

ಪಾಟೀಲ : ನರಸಿಂಹ ಅವತಾರ ಮೇ ಕಿಸ್ ಪ್ರಕಾರ ಸೇವಾ ಕೀ?

ಭಾಲದಾರ : ಹಿರಣ್ಯಕಶ್ಯಪು ಅಪನೇ ಪುತ್ರ ಪ್ರಲ್ಹಾದ ಕೋ ಬಹುತ ಸತಾನೇ ಲಗಾ। ಭಗವಾನ ನೇ ನರಸಿಂಹ ಅವತಾರ ಧಾರಣ ಕರ ಕೇ ಹಿರಣ್ಯಕಶ್ಯಪು ಕಾ ವಧ ಕಿಯಾ ಔರ ಅಪನಾ ಅವತಾರ ಸಮಾಪ್ತ ಕಿಯಾ। ಉಸ ಸಮಯ ವಹಾँ ಕೀ ನೌಕರೀ ಛೋಡಕರ ಚಲೇ ಆಯೇ।

ಪಾಟೀಲ : ವಾಮನ ಅವತಾರ ಮೇ ಕೈಸೀ ನೌಕರೀ ಕೀ ?

ಭಾಲದಾರ : ಭಗವಾನ ನೇ ವಾಮನ ಕಾ ರೂಪ ಧರ ಕೇ ರಾಜಾ ಬಲೀ ಕಾ ಗರ್ವ ಹರಣ ಕಿಯಾ। ಫಿರ ವಾಮನ ಅವತಾರ ಖಲಾಸ ಕಿಯಾ। ವಹಾँ ಕೀ ನೌಕರೀ ಛೋಡ ಚಲೇ ಆಯೇ।

ಪಾಟೀಲ : ಪರಶುರಾಮ ಅವತಾರ ಮೇ ಕೈಸೀ ನೌಕರೀ ಕೀ ?

ಭಾಲದಾರ : ಭಗವಾನ ನೇ ಪರಶುರಾಮ ಅವತಾರ ಲೇ ಕರ ಸಹಸ್ರಾರ್ಜುನ ಕೋ ಮಾರ ಡಾಲಾ। ತಬ ಪರಶುರಾಮ ಅವತಾರ ಖಲಾಸ ಕಿಯಾ। ವಹಾँ ಕೀ ನೌಕರೀ ಛೋಡ ಚಲೇ ಆಯೇ।

ಪಾಟೀಲ : ರಾಮ ಅವತಾರ ಮೇ ಕೈಸೀ ನೌಕರೀ ಕೀ ?

ಭಾಲದಾರ : ಭಗವಾನ ನೇ ರಾಮರೂಪ ಧರಕೇ ರಾವಣ ತಥಾ ಕುಂಭಕರ್ಣ ಕಾ ವಧ ಕಿಯಾ। ತೈಂತೀಸ ಕೋಟಿ

ದೇವೋಂ ಕೇ ಬಂಧನ ತೋಡ ಕರ ಅಯೋಧ್ಯಾ ಮೇ ಆಯೇ। ಔರ ಅಪನಾ ಅವತಾರ ಖಲಾಸ ಕಿಯಾ। ವಹಾँ ಕೀ ನೌಕರೀ ಛೋಡಕರ ಚಲೇ ಆಯೇ।

ಪಾಟೀಲ : ಕೃಷ್ಣ ಅವತಾರ ಮೇ ಕೈಸೀ ನೌಕರೀ ಕೀ ?

ಭಾಲದಾರ : ಕೃಷ್ಣರೂಪ ಧಾರಣ ಕರಿನೇ ಕಂಸ ಅನೆ ಚಾಣೂರ ರಾಕ್ಷಸ ನೆ ಮಾರೀ ನಾಖ್ಯೋ। ಅನೆ ರಾಜ್ಯ ಉಗ್ರಸೇನ ನೇ ಮಳೀ ಗಯೋ ಪಛೀ ಕೃಷ್ಣ ಅವತಾರ ಖಲಾಸ ಥಯೋ।

ಪಾಟೀಲ : ಬೌದ್ಧ ಅವತಾರ ಮೇ ಕೈಸೀ ನೌಕರೀ ಕೀ ?

ಭಾಲದಾರ : ಭಗವಾನ ಬೌದ್ಧರೂಪ ಧರ ಕೇ ಪಂಢರಪುರ ಮೇ ಈಟಪರ ಖಡೇ ರಹೇ। ಉನಕೇ ಚರಣೋಂಕೇ ಪಾಸ ಹಮ ನೌಕರೀ ಕರತೇ ಹೈ।

ಪಾಟೀಲ : ಕಲಂಕೀ ಅವತಾರ ಮೇ ಕೈಸೀ ನೌಕರೀ ಕರೋಗೇ ?

ಬಾಲಧಾರ : ಭಗವಾನ ಕಲಂಕೀ ರೂಪ ಧಾರಣ ಕರ ಕೇ ಸ್ವಧರ್ಮ ಕೀ ಸ್ಥಾಪನಾ ಕರೇಂಗೇ। ಯಹ ತೋ ಆಗೇ ಹೋನೇವಾಲಾ ಹೈ।

ಪಾಟೀಲ : ತುಮ ಯಹಾँ ನೌಕರೀ ಕರೋಗೇ ?

ಭಾಲದಾರ : ಲೇನಾ ದೇನಾ ಐವಜ ಕ್ಯಾ ಹೈ ?

ಪಾಟೀಲ : ಬಡಾ ಐವಜ ಹೈ।

ಭಾಲದಾರ : ಕೌನ ಸಾ ಐವಜ?

ಪಾಟೀಲ : ಋದ್ಧಿ।

ಭಾಲದಾರ : ಋದ್ಧಿ ಕೋ ಹಮ ಜಾನತೇ ನಹೀ।

ಪಾಟೀಲ : ಸಿದ್ಧಿ।

ಭಾಲದಾರ : ಸಿದ್ಧಿ ಕೋ ಹಮ ಪಹಚಾನತೇ ನಹೀ।

ಪಾಟೀಲ : ಮುಕ್ತಿ।

ಭಾಲದಾರ : ಅಹ! ಅಹ! ಋದ್ಧಿ, ಸಿದ್ಧಿ ಔರ ಮುಕ್ತಿ ಯೇ ಸಬ ದಾಸಿಯಾಁ ಹಮಾರೇ ಪಾಸ ಸೇವಾ ಕರತೀ ಹೈ।

ಪಾಟೀಲ : ಅಢಳ ಪದ।

ಭಾಲದಾರ : ಅಢಳ ಪದ ಕೋ ಹಮ ತುಚ್ಛ ಮಾನತೇ ಹೈ। ಭಗವಾನ ನೇ ಉದಾರ ಹೋಕರ ಬಡೋಬಡೋಂ ಕೋ ದೇನ ದೀ ಹೈ।

ಪಾಟೀಲ : ಕಿನ ಕಿನಕೋ ದೀ ಹೈ?

ಭಾಲದಾರ : ಧ್ರುವ, ತುಕಾರಾಮ, ನಾಮಾ ದರಜೀ ಇನಕೋ ದೀ ಹೈ।

ಪಾಟೀಲ : ಧ್ರುವ ನೇ ಕೈಸೀ ಭಕ್ತಿ ಕೀ?

ಭಾಲದಾರ : ಉತ್ತಾನಪಾದರಾಜಾ ಕಾ ಪಾಂಚ ಬರಸ ಕಾ ಲಡಕಾ ಅಪನಾ ತನ ಮನ ಧನ ಭಗವಾನ ಕೇ ಚರಣ ಕೇ ಪಾಸ ಧರ ದಿಯೇ। ಭಗವಾನ ನೇ ಉದಾರ ಹೋ ಕೇ ಉಸಕೋ ಅಢಳ ಪದ ದಿಯಾ। ಹಮ ಇಸ ಅಢಳ ಪದ ಕೋ ತುಬ್ಬ ಮಾನತೇ ಹೈ।

ಪಾಟೀಲ : ಔರ ನಾಮಾ ದರಜೀ ಕಹಾँ ಕಾ ರಹನೇವಾಲಾ?

ಭಾಲದಾರ : ದೇಖೋ ಪಾಟೀಲ, ಪಂಢರಪುರ ಕಾ।

ಪಾಟೀಲ : ಉನಕೇ ಘರಮೇ ಕಿತನೇ ಆದಮೀ ಥೆ?

ಭಾಲದಾರ : ಉನಕೇ ಘರಮೇ ಚೌದಹ ಆದಮೀ ಥೆ।

ಪಾಟೀಲ : ನಾಮಾ ದರಜೀ ನೇ ಕೈಸೀ ಭಕ್ತಿ ಕೀ?

ಭಾಲದಾರ : ಅಪನಾ ತನ ಮನ ಭಗವಾನ ಕೇ ಚರಣ ಪರ ಅರ್ಪಣ ಕಿಯಾ। ಬಡೇ ಉದಾರ। ಕುಛ ದೇನಾ ನಹೀ ಕುಛ ಲೇನಾ ನಹೀ। ಉನಕೇ ಪಾँವ ಕೇ ಪಾಸ ಮುಕ್ತ ಹೋಕರ ಜ್ಯೋತ ಮೇ ಜ್ಯೋತ ಮಿಲಾಯಾ।

ಪಾಟೀಲ : ಔರ ತುಕಾರಾಮ ಬನಿಯಾ ಕಹಾँ ಕಾ ರಹನೇವಾಲಾ?

ಮುಂಡಿಗೆಗಳು

ಭಾಲದಾರ : ದೇಖೋ ಪಾಟೀಲ, ದೇಹೂ ಕಾ।

ಪಾಟೀಲ : ತುಕಾರಾಮ ಬನಿಯಾ ನೇ ಕೈಸೀ ಭಕ್ತಿ ಕೀ?

ಭಾಲದಾರ : ಅಪನಾ ತನ ಮನ ಭಗವಾನ ಕೇ ಚರಣೋಂ ಪರ ಚಢಾ ದಿಯಾ। ತಬ ಭಗವಾನ ಉದಾರ ಹೋಕರ ಉಸಕೋ ವೈಕುಂಠ ಲೇ ಗಯೇ।

ಪಾಟೀಲ : ಉದಾರ ಕೈಸೇ?

ಭಾಲದಾರ : ದಾತಾವೋಂ ಕೋ ತೋ ಬಂಧನ ಪಡೇ, ಭಿಕಾರಿಯೋಂ ಕೋ ದೌಲತ ಚಢೇ, ಚೋರೋಂ ಕೋ ಇಮಾರತ ಬಡೇ, ದುಷ್ಮನ ಕೋ ಮುಕ್ತಿ-ಸಿದ್ಧಿ, ಸೇವಕ ಕೇ ಗಾಂಡ ಚಿಂಧೀ, ಪತಿವ್ರತಾ ಕೀ ವಿಪತ ಬಡೀ, ಛಿನಾಲ ಜಾ ವೈಕುಂಠ ಚಢೀ, ತಾತ್ಯಾಜೀ ಕೀ ಐಸೀ ಬಾನೀ ಹೈ, ಅಂದಾಧುಂದ ಸರಕಾರ ಹೈ। ರಾಜಾಧಿರಾಜ ಸದ್ಗುರುನಾಥ ದಾಸ ಕಾ ಪ್ರತಿಪಾಲ ಕರೇ, ಧ್ರುವ, ಪ್ರಲ್ಹಾದ, ವಿಭೀಷಣ, ಸಾರೇ, ಐಸೇ ಭಕ್ತವತ್ಸಲ ಮಹಾರಾಜ ಹೈ। ನಜರ ರಖೋ ಮೆಹರಬಾನ, ಕಿಸ ಸೇ ಕುಛ ಲೇನಾ ನಹೀ ಔರ ಕುಛ ದೇನಾ ನಹೀ। ಭಗವಾನ ಕೇ ಚರಣೋಂ ಪಾಸ ಹಮ ನೌಕರೀ ಕರತೇ ಹೈ।

## ದಶಾವತಾರ ಭಾರುಡ

ಭಾವಾರ್ಥ: (ಮಹನೀಯರೇ, ಲಕ್ಷವಿಡಿರಿ. ಪಾದಸೇವಕನಾದ ನಿಮ್ಮ ದಾಸನು ನಿಮ್ಮ ಎದುರಿಗೆ ನಿಂತಿದ್ದಾನೆ. ಈಗ ಕಲಿಯುಗದ ಕಾಲವಿದೆ. ನಿರ್ಗುಣ-ನಿರಾಕಾರದ ಬಗ್ಗೆ ಸಾವಧಾನವಾಗಿರಿ.)

ಪಾಟೀಲ : ನೀವು ಯಾರು?

ಸೇವಕ : ನಾವು ಸೇವಕರು.

ಪಾಟೀಲ : ನಿಮ್ಮ ವಾಸಸ್ಥಳವಾವುದು?

ಸೇವಕ : ನಾವು ವೈಕುಂಠದಲ್ಲಿ ಇರುವವರು.

ಪಾಟೀಲ : ಇಲ್ಲಿ ಏಕೆ ಬಂದಿದ್ದೀರಿ?

ಸೇವಕ : ಇಲ್ಲಿ ಆಗುವ ಗದ್ದಲ, ಗಡಿಬಿಡಿಗಳನ್ನು ಕೇಳಿ, ಇತ್ತ ಬಂದೆವು. ಇಲ್ಲಿ ಏನು ನಡೆದಿದೆ?

ಪಾಟೀಲ : ಮಹಾರಾಜರ ಉತ್ಸವ ಇಲ್ಲಿ ನಡೆದಿದೆ.

ಸೇವಕ : ಯಾವ ಮಹಾರಾಜರ ಉತ್ಸವ?

ಪಾಟೀಲ : ರಾಜಾಧಿರಾಜ ಶ್ರೀ ಗುರುಲಿಂಗಜಂಗಮಮಹಾರಾಜರದು.

ಮುಂಡಿಗೆಗಳು

ಸೇವಕ : ಮಹಾರಾಜರ ದರ್ಬಾರದಲ್ಲಿ ಸೇವಕರು ಯಾರೂ ಇಲ್ಲವೇನು? ಇಲ್ಲಿ ಇಷ್ಟೊಂದು ಗಲಾಟೆ ನಡೆದಿದೆ.

ಪಾಟೀಲ : ದೇವರ ದ್ವಾರದಲ್ಲಿ ಗಲಾಟೆ ಇದ್ದದ್ದೇ, ನೀನು ಯಾರ ಸೇವೆ ಮಾಡುತ್ತೀ?

ಸೇವಕ : ನಾನು ದಶಾವತಾರದ ಸೇವೆ ಮಾಡುತ್ತೇನೆ.

ಪಾಟೀಲ : ಯಾವ ದಶಾವತಾರ?

ಸೇವಕ : ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬೌದ್ಧ, ಕಲ್ಕಿ ಈ ಹತ್ತು ಅವತಾರಗಳ ಸೇವೆ ಮಾಡುತ್ತೇನೆ.

ಪಾಟೀಲ : ಮತ್ಸ್ಯಾವತಾರದಲ್ಲಿ ಏನು ಸೇವೆ ಮಾಡಿದೆ?

ಸೇವಕ : ಶಂಖಾಸುರನು ಬ್ರಹ್ಮನ ವೇದವನ್ನು ಕಳವು ಮಾಡಿದನು ಮತ್ತು ಅದನ್ನು ಸಮುದ್ರದಲ್ಲಿ ಮುಚ್ಚಿಟ್ಟನು. ಆಗ ಬ್ರಹ್ಮನು ದೇವರ ಪ್ರಾರ್ಥನೆ ಮಾಡಿದನು. ಆಗ ಭಗವಂತನು ಮತ್ಸ್ಯರೂಪ ತಾಳಿ, ಶಂಖಾಸುರನನ್ನು ಸಂಹರಿಸಿ ವೇದವನ್ನು ಬ್ರಹ್ಮನಿಗೆ ಕೊಟ್ಟನು. ಆಗ ದೇವರ ಹತ್ತಿರವಿದ್ದು ಸೇವೆ ಮಾಡಿದೆನು.

ಪಾಟೀಲ : ಕೂರ್ಮಾವತಾರದಲ್ಲಿ ಏನು ಮಾಡಿದೆ?

ಸೇವಕ : ದೇವರೂ ದೈತ್ಯರೂ ಕೂಡಿ ಸಮುದ್ರ ಮಂಥನ ಮಾಡಿದರು. ಆಗ ಭೂಮಿ . ರಸಾತಳಕ್ಕೆ ಹೋಗಹತ್ತಿತು. ದೇವತೆಗಳಿಗೆ ಚಿಂತೆಯಾಯಿತು. ಆಗ ಭಗವಂತನು ಕೂರ್ಮನ ರೂಪ ತಾಳಿ ಪೃಥ್ವಿಯನ್ನು ತನ್ನ ಬೆನ್ನಮೇಲೆ ಹೊತ್ತುಕೊಂಡನು. ಕೂರ್ಮಾವತಾರ ಮುಗಿಯಿತು.

ಪಾಟೀಲ : ವರಾಹಾವತಾರದಲ್ಲಿ ಯಾವ ಸೇವೆ ಮಾಡಿದೆ?

ಸೇವಕ : ಪೃಥ್ವಿ ಎರಡನೆಯ ಸಲ ರಸಾತಳಕ್ಕೆ ಹೋಗಹತ್ತಿತು. ಆಗ ಭಗವಂತನು ವರಾಹರೂಪ ತಾಳಿ, ತನ್ನ ಕೋರೆಗಳಿಂದ ಪೃಥ್ವಿಯನ್ನು ಎತ್ತಿ ಹಿಡಿದನು. ಮತ್ತೆ ಅಲ್ಲಿಯ ಸೇವೆ ಬಿಟ್ಟು ಬಂದೆ.

ಪಾಟೀಲ : ನರಸಿಂಹಾವತಾರದಲ್ಲಿ ಯಾವ ಸೇವೆ ಮಾಡಿದೆ?

ಸೇವಕ : ಹಿರಣ್ಯಕಶ್ಯಪು ತನ್ನ ಮಗ ಪ್ರಲ್ಹಾದನಿಗೆ ಬಹಳ ವೇದನೆಯನ್ನು ಕೊಡತೊಡಗಿದ. ಭಗವಂತನು ನರಸಿಂಹನರೂಪ ಧಾರಣ ಮಾಡಿ ಹಿರಣ್ಯಕಶ್ಯಪುನನ್ನು ಸಂಹಾರ ಮಾಡಿದನು. ಮತ್ತು ತನ್ನ ಅವತಾರ ಮುಗಿಸಿದನು. ಆಗ ಅಲ್ಲಿಯ ಸೇವೆ ಬಿಟ್ಟು ಬಂದೆ.

ಪಾಟೀಲ : ವಾಮನಾವತಾರದಲ್ಲಿ ಏನು ಮಾಡಿದೆ?

ಮುಂಡಿಗೆಗಳು

ಸೇವಕ : ಭಗವಂತನು ವಾಮನರೂಪ ಧಾರಣ ಮಾಡಿ, ಬಲಿಯ ಗರ್ವಭಂಗ ಮಾಡಿದನು. ವಾಮನಾವತಾರ ಮುಗಿಯಿತು. ಅಲ್ಲಿಯ ಸೇವೆ ಬಿಟ್ಟು ಬಂದೆ.

ಪಾಟೀಲ : ಪರಶುರಾಮಾವತಾರದಲ್ಲಿ ಏನು ಮಾಡಿದೆ?

ಸೇವಕ : ಭಗವಂತನು ಪರಶುರಾಮನ ಅವತಾರ ತಳೆದು ಸಹಸ್ರಾರ್ಜುನನನ್ನು ಸಂಹರಿಸಿದನು. ಆಗ ಆ ಅವತಾರ ಮುಗಿಯಿತು. ಆಗ ಅಲ್ಲಿಯ ಸೇವೆ ಬಿಟ್ಟು ಬಂದೆ.

ಪಾಟೀಲ : ರಾಮಾವತಾರದಲ್ಲಿ ಯಾವ ಸೇವೆ ಮಾಡಿದೆ?

ಸೇವಕ : ಭಗವಂತನು ರಾಮನರೂಪ ಧರಿಸಿ, ರಾವಣನ ಹಾಗೂ ಕುಂಭಕರ್ಣನ ವಧೆ ಮಾಡಿದನು. ಮೂವತ್ಮೂರು ಕೋಟಿ ದೇವತೆಗಳನ್ನು ಬಂಧಮುಕ್ತ ಮಾಡಿದನು. ಆಗ ಅವತಾರ ಮುಗಿಯಿತು. ಅಲ್ಲಿಂದ ಬಂದು ಬಿಟ್ಟೆ.

ಪಾಟೀಲ : ಕೃಷ್ಣಾವತಾರದಲ್ಲಿ ಯಾವ ಸೇವೆ ಮಾಡಿದೆ?

ಸೇವಕ : ಭಗವಂತನು ಕೃಷ್ಣರೂಪ ಧಾರಣಮಾಡಿ, ಕಂಸ ಮತ್ತು ಚಾಣೂರರನ್ನು ಸಂಹರಿಸಿದನು. ಮತ್ತು ರಾಜ್ಯವನ್ನು ಉಗ್ರಸೇನನಿಗೆ ಕೊಡಿಸಿದನು. ಕೃಷ್ಣಾವತಾರ ಮುಗಿಯಿತು.

ಪಾಟೀಲ : ಬೌದ್ಧಾವತಾರದಲ್ಲಿ ಯಾವ ಸೇವೆ ಮಾಡಿದೆ?

ಸೇವಕ : ಭಗವಂತನು ಬೌದ್ಧರೂಪ ತಾಳಿ ಪಂಢರಪುರದಲ್ಲಿ ಇಟ್ಟಿಗೆಯ ಮೇಲೆ ನಿಂತನು. ಅವನ ಚರಣದಡಿಯಲ್ಲಿ ಇದ್ದು ಸೇವೆ ಮಾಡುತ್ತಿದ್ದೇನೆ.

ಪಾಟೀಲ : ಕಲ್ಕಿಯ ಅವತಾರದಲ್ಲಿ ಯಾವ ಸೇವೆ ಮಾಡುತ್ತೀ?

ಸೇವಕ : ಭಗವಂತನು ಕಲ್ಕಿಯ ಅವತಾರ ತಾಳಿ ಸ್ವಧರ್ಮಸ್ಥಾಪನೆ ಮಾಡುವನು. ಇದು ಮುಂದೆ ಆಗತಕ್ಕದ್ದು.

ಪಾಟೀಲ : ಈ ಅವತಾರದಲ್ಲಿ ನೀನು ಸೇವೆ ಮಾಡುತ್ತೀಯಾ?

ಸೇವಕ : ಕೊಡುವದು, ತೆಗೆದುಕೊಳ್ಳುವುದು. ಸಂಬಳ ಏನು?

ಪಾಟೀಲ : ಬಹಳ ದೊಡ್ಡ ಸಂಬಳ ಇದೆ.

ಸೇವಕ : ಯಾವ ಸಂಬಳ?

ಪಾಟೀಲ : ಋದ್ಧಿ.

ಸೇವಕ : ಋದ್ಧಿ ಎಂದರೆ ನನಗೆ ತಿಳಿಯದು.

ಪಾಟೀಲ : ಸಿದ್ಧಿ.

ಸೇವಕ : ಸಿದ್ಧಿಯೂ ನನಗೆ ಗೊತ್ತಿಲ್ಲ.

ಪಾಟೀಲ : ಮುಕ್ತಿ.

ಸೇವಕ : ಆಹಾ! ಅಹಾ! ಋದ್ಧಿ, ಸಿದ್ಧಿ, ಮುಕ್ತಿ, ಈ ಎಲ್ಲ ದಾಸಿಯರು ನಮ್ಮ ಬಳಿ ಸೇವೆ ಮಾಡುತ್ತಾರೆ.

ಪಾಟೀಲ : ಶಾಶ್ವತ ಸ್ಥಾನ.

ಸೇವಕ : ಈ ಸ್ಥಾನವನ್ನು ನಾವು ತುಚ್ಛವೆಂದು ಭಾವಿಸುತ್ತೇವೆ. ಭಗವಂತನು ತನ್ನ ಔದಾರ್ಯದಿಂದ ಮಹಾನುಭಾವರಿಗೆ ವರದಾನ ಮಾಡಿದ್ದಾನೆ.

ಪಾಟೀಲ : ಯಾರ್‍ಯಾರಿಗೆ ಕೊಟ್ಟಿದ್ದಾನೆ?

ಸೇವಕ : ಧ್ರುವ, ತುಕಾರಾಮ, ನಾಮಾ ದರ್ಜೀ ಇವರಿಗೆ ಕೊಟ್ಟಿದ್ದಾನೆ.

ಪಾಟೀಲ : ಧ್ರುವನ ಭಕ್ತಿ ಎಂಥದು?

ಸೇವಕ : ಉತ್ತಾನಪಾದ ರಾಜನ ಐದು ವರ್ಷದ ಮಗನು ತನ್ನ ದೇಹ, ಮನಸ್ಸು, ವೈಭವ, ಎಲ್ಲವನ್ನೂ ದೇವರ ಚರಣದಲ್ಲಿ ಅರ್ಪಿಸಿದನು. ಭಗವಂತನು ಅವನಿಗೆ ಅವಿಚಲಿತ ಸ್ಥಾನವನ್ನು ಕೊಟ್ಟನು. ನಾವು ಇದನ್ನು ತುಚ್ಛವೆಂದು ಭಾವಿಸುತ್ತೇವೆ.

ಪಾಟೀಲ : ನಾಮಾ ದರ್ಜೀ ಎಲ್ಲಿಯವನು?

ಸೇವಕ : ನೋಡು, ಅವನು ಪಂಢರಪುರದವನು.

ಪಾಟೀಲ : ಅವನ ಮನೆಯಲ್ಲಿ ಎಷ್ಟು ಜನರಿದ್ದರು?

ಸೇವಕ : ಹದಿನಾಲ್ಕು ಮಂದಿ ಇದ್ದರು.

ಪಾಟೀಲ : ನಾಮಾ ದರ್ಜಿಯ ಭಕ್ತಿ ಎಂಥದು?

ಸೇವಕ : ಅವನು ತನ್ನ ತನು-ಮನವನ್ನು ದೇವರಿಗೆ ಅರ್ಪಿಸಿದನು. ಅವನು ಬಹಳ ಉದಾರನು. ಏನನ್ನೂ ತೆಗೆದುಕೊಳ್ಳುವಂತಿಲ್ಲ, ಏನನ್ನೂ ಕೊಡುವಂತಿಲ್ಲ. ದೇವರ ಅಡಿದಾವರೆಯಲ್ಲಿ ಮುಕ್ತನಾಗಿ, ಜ್ಯೋತಿಯೊಂದಿಗೆ ಜ್ಯೋತಿಯಾಗಿ ಬೆಳಗಿದನು.

ಪಾಟೀಲ : ವ್ಯಾಪಾರಿಯಾದ ತುಕಾರಾಮ ಎಲ್ಲಿಯವನು?

ಸೇವಕ : ಅವನು ದೇಹೂ ಊರಿನವನು.

ಪಾಟೀಲ : ಅವನ ಭಕ್ತಿ ಎಂಥದು?

ಸೇವಕ : ಅವನೂ ತನ್ನ ತನುಮನವನ್ನು ದೇವರಚರಣಕ್ಕೆ ಅರ್ಪಿಸಿದನು. ಆಗ ಭಗವಂತನು ಅವನನ್ನು ಔದಾರ್ಯದಿಂದ ವೈಕುಂಠಕ್ಕೆ ಕರೆದೊಯ್ದನು.

ಪಾಟೀಲ : ಔದಾರ್ಯವೇನು ಬಂತು ಇದರಲ್ಲಿ?

ಸೇವಕ : ದಾನಿಗಳಿಗೆ ಬಂಧನವಾಯ್ತು, ಭಿಕ್ಷುಕರಿಗೆ ಐಶ್ವರ್ಯ ಬಂತು, ಕಳ್ಳರಿಗೆ ದೊಡ್ಡ ಮನೆಗಳಾದವು, ಶತ್ರುಗಳಿಗೆ ಮುಕ್ತಿಸಿದ್ಧಿ, ಸೇವಕರಿಗೆ ಹರಕು ಚಿಂದಿ, ಪತಿವ್ರತೆಗೆ ದೊಡ್ಡ ಆಪತ್ತು, ದುರ್ವರ್ತನೆಯ ಹೆಂಗಸಿಗೆ ಸುಖೋಪಭೋಗ, ತಾತ್ಯಾಜೀ ಹೀಗೆ ಹೇಳುತ್ತಾರೆ, "ಅಂದಾಧುಂದ ಸರಕಾರ ಬಂದಿದೆ." ಇಂಥ

ಪರಿಸ್ಥಿತಿಯಲ್ಲಿ ರಾಜಾಧಿರಾಜ ಸದ್ಗುರುನಾಥ, ದಾಸನ ಪ್ರತಿಪಾಲನೆ ಮಾಡಬೇಕು. ಧ್ರುವ, ಪ್ರಲ್ಹಾದ, ವಿಭೀಷಣರನ್ನು ರಕ್ಷಿಸಿದವನು. ಇಂಥ ಭಕ್ತವತ್ಸಲ ಮಹಾರಾಜರಿದ್ದಾರೆ. ಎಚ್ಚರದಿಂದ ಇರು ಮಹನೀಯನೇ, ಯಾರಿಂದಲೂ ಏನೂ ತೆಗೆದುಕೊಳ್ಳುವುದಿಲ್ಲ, ಯಾರಿಗೂ ಏನೂ ಕೊಡುವುದಿಲ್ಲ. ಭಗವಂತನ ಚರಣಸೇವೆ ಮಾಡುತ್ತೇವೆ.

೯

ವಿಂಚೂ ಚಾವಲಾ ವೃಶ್ಚಿಕ ಚಾವಲಾ।। ಕಾಮಕ್ರೋಧ ವಿಂಚೂ ಚಾವಲಾ।। ತಮ ಘಾಮ ಅಂಗಾಸಿ ಆಲಾ ।। ಧೃ ।। ಪಂಚಪ್ರಾಣ ವ್ಯಾಕುಲ ಝಾಲಾ। ತ್ಯಾನೇ ಮಾಝಾ ಪ್ರಾಣ ಚಾಲಲಾ। ಸರ್ವಾಂಗಾಚಾ ದಾಹ ಝಾಲಾ। ವಿಂಚೂ ಚಾವಲಾ ।। ೧ ।। ಮನುಷ್ಯ ಇಂಗಳೀ ಅತಿ ದಾರುಣ। ಮಜ ನಾಂಗಾ ಮಾರಿಲಾ ತಿನೇ। ಸರ್ವಾಂಗೀ ವೇದನಾ ಜಾಣ। ತ್ಯಾ ಇಂಗಳೀಚೀ ।। ೨ ।। ಯಾ ವಿಂಚವಾಲಾ ಉತಾರಾ। ತಮೋಗುಣ ಮಾಗೇ ಸಾರಾ। ಸತ್ತ್ವಗುಣ ಲಾವಾ ಅಂಗಾರಾ। ವಿಂಚೂ ಇಂಗಳೀ ಉತರೇ ಝರಝರಾ।। ।। ೩ ।। ಸತ್ತ್ವ ಉತಾರಾ ಘೇವೂನ। ಅವಘಾ ಸಾರಿಲಾ ತಮೋಗುಣ। ಕಿಂಚಿತ್ ರಾಹಿಲೀ ಫುಣಫುಣ। ತೀಹೀ ಶಾಂತ ಕೇಲೀ ಜನಾರ್ದನೇ ।। ೪ ।।

ಭಾವಾರ್ಥ: ಚೇಳು ಕಚ್ಚಿತು, ಚೇಳು ಕಚ್ಚಿತು, ಕಾಮ-ಕ್ರೋಧವೆಂಬ ಚೇಳು ಕಚ್ಚಿತು. ಮೈಯಲ್ಲಿ ತಮೋಗುಣದ ಬೆವರು ಬಿಟ್ಟಿತು. ಪಂಚಪ್ರಾಣಕ್ಕೆ

ಕಸಿವಿಸಿಯಾಯಿತು. ಆದರಿಂದ ಪ್ರಾಣ ಹೊರಟಿತು. ಅಗಾಂಗಗಳಲ್ಲೆಲ್ಲ ಉರಿವುಂಟಾಯಿತು. ಚೇಳು ಕಚ್ಚಿತು. ಭಯಂಕರವಾದ ವಿಷಕಾರಿ ಚೇಳು ನನಗೆ ತನ್ನ ವಿಷವ ಕೊಂಡಿಯಿಂದ ಹೊಡೆಯಿತು. ಆ ವಿಷದಿಂದ ಸರ್ವಾಂಗದಲ್ಲೆಲ್ಲ ವೇದನೆಯಾಯಿತು. ಭಯಂಕರವಾದ ಈ ಚೇಳಿನ ವಿಷ ಇಳಿಸಬೇಕಾದರೆ ತಮೋಗುಣ ನಾಶವಾಗಬೇಕು. ಸತ್ವ-ಗುಣದ ವಿಭೂತಿಯನ್ನು ಹಚ್ಚಬೇಕು. ಆಗ ವಿಷವು ಸರ್ರನೆ ಇಳಿಯುವುದು. ಸತ್ವಗುಣದ ಪಥ್ಯದಿಂದ ತಮೋಗುಣವಳಿಯಿತು. ಕಿಂಚಿತ್ ಉಳಿದದ್ದನ್ನು ಜನಾರ್ದನನು ಶಾಂತ ಮಾಡಿದನು.

೧೦

ಆಗಲಿ ನಾ ಇರಲಾರೇ। ನಿನ್ನಗಲಿ ನಾ ಇರಲಾರೇ। ಬಗೆ ಬಗೆ ರೂಪವ ತೋರಿದ ಗುರುವೇ। ನಿನ್ನಗಲಿ ನಾ ಇರಲಾರೇ ॥ ಪ ॥ ಇಮ್ಮನ ಗೋದಿಯ। ಸುಮ್ಮನೇ ಬೀಸೇನು। ಉಮ್ಮಾಯದಿಂದ ಮಹಾಗುರುವೇ॥ ನಿನ್ನಗಲಿ ॥ ೧ ॥ ಬೀಸುವ ಕಲ್ಲಿಗೇ। ಲೇಸವು ಬರಲೆಂದು। ಆಶಿಟ್ಟು ಹರ್ಷದಿ ಹಾಡೇನೇ ಗುರುವೇ॥ ನಿನ್ನಗಲಿ ॥ ೨ ॥ ಸತ್ತು ಸತ್ತು ಹುಟ್ಟಿ। ಮತ್ತೇ ಭವದೊಳು ಬಂದೇ। ಗೊತ್ತಿಗೇ ಹಚ್ಚಿದಿ ಗುರುರಾಯಾ॥ ನಿನ್ನಗಲಿ ॥ ೩ ॥ ಕಡಲೊಳು ತೇಲುತ್ತ। ಮಡದೊಳು ಮುಳುಗಿದ್ದೆ। ಹಿಡಿದೆನ್ನಕೈಯ್ಯ ಬಿಡಲಿಲ್ಲ ಗುರುವೇ॥ ನಿನ್ನಗಲಿ ॥ ೪ ॥ ವಮ್ಮನ ಹಳ್ಳಿಯೊಳ್। ನೇಮದಿ ಇರುತಲೇ। ಪ್ರೇಮದಿ ಭಕ್ತರ ಸಲಹಿದಿ ಗುರುವೇ॥ ನಿನ್ನಗಲಿ ॥ ೫ ॥

# ಐದು ಸಮಾಸಗಳು

ಶ್ರೀ ಗಣೇಶನಿಗೆ ನಮಸ್ಕಾರ. ಶ್ರೀ ಸರಸ್ವತಿಗೆ ನಮಸ್ಕಾರ. ಶ್ರೀ ಗುರುವಿಗೆ ನಮಸ್ಕಾರ. ಶ್ರೀ ರಾಮ ಸಮರ್ಥ. ಯಾರಿಂದ ನಾನಾ ಕಲೆಗಳೂ, ವಿದ್ಯೆಗಳೂ ಹುಟ್ಟಿವೆಯೋ, ಯಾರು ಸಕಲ ವಿದ್ಯೆಗಳಲ್ಲಿ ಶ್ರೇಷ್ಠನಾದವನೋ ಅಂಥ ಗಣೇಶನಿಗೆ ಮೊದಲು ವಂದನೆಗಳು. ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನಾದವನೂ, ಎಲ್ಲರನ್ನೂ ಹಗಲು-ರಾತ್ರಿ ನಿರಂತರವಾಗಿ ರಕ್ಷಿಸುವವನೂ ಮಂಗಲಮೂರ್ತಿಯೂ ಆದ ಗಣೇಶನಿಗೆ ವಂದನೆಗಳು. ಯಾರ ವಿದ್ಯೆಯ ಪ್ರಭಾವದಿಂದ ಮಾನವ ಪ್ರಾಣಿಗಳು ಜ್ಞಾನ-ಅಜ್ಞಾನವನ್ನು ಕರ್ಮಾನುಸಾರವಾಗಿ ಪಡೆಯುತ್ತಾರೆಯೋ, ಅಂಥ ವೇದಜನನಿಗೆ ನಮಸ್ಕಾರಗಳು. ಯಾರಿಗೆ ಶ್ರವಣ ಮಾಡುವ ಅಧಿಕಾರವಿರುವುದೋ, ಯಾರು ತಮ್ಮ ಅನುಭವಕ್ಕನುಗುಣವಾಗಿ ರಹಸ್ಯವನ್ನು ತಿಳಿದುಕೊಳ್ಳಬಲ್ಲರೋ, ಅಂಥ ಶ್ರೋತೃಗಳಿಗೆ ಪ್ರಾರ್ಥನೆ. ಯಾರು ಕ್ಷಣಮಾತ್ರದಲ್ಲಿ ಭವಸಾಗರವನ್ನು ದಾಟಿಸುತ್ತಾರೋ, ಅಂಥ ಸದ್ಗುರುವಿಗೆ ಭಕ್ತಿಭಾವಪೂರ್ಣ ಸಾಷ್ಟಾಂಗ ನಮಸ್ಕಾರ. ಜಯಜಯ ಸದ್ಗುರುನಾಥಾ, ನಿನ್ನ ಚರಣದಡಿಯಲ್ಲಿ ನನ್ನ ಮಸ್ತಕವನ್ನಿಡುವೆ. ದೀನನಾದ ನನ್ನನ್ನು ಅನುಗ್ರಹಿಸಿರಿ. ಸಿದ್ಧರಲ್ಲಿ ಮಹಾಸಿದ್ಧನಾದ ರೇವಣಸಿದ್ಧರಿಗೆ ಜಯಜಯಕಾರ. ಕಾರುಣ್ಯಮಯಿ ಮಹಾಶಂಭೋ, ನನಗೆ

ಬುದ್ಧಿಯನ್ನು ದಯಪಾಲಿಸು. ಕರವೀರ (ಕೊಲ್ಹಾಪುರ) ಕ್ಷೇತ್ರದಲ್ಲಿರುವ ಯೋಗೇಶ್ವರ ಕಾಡಸಿದ್ಧರಿಗೆ ಯಾರು ನಮಿಸುವರೋ ಅವರು ಪಾವನರಾಗುತ್ತಾರೆ. ವೇದಗಳನ್ನು ಓದಿದವರಿಗೇ ನಿನ್ನ ಮಹಿಮೆಯು ತಿಳಿಯದಿರುವಾಗ ನನ್ನಂಥ ಪಾಮರನ ಗತಿಯೇನು? ಅಂಥಹ ಗುರುಲಿಂಗಜಂಗಮರಿಗೆ ಪ್ರೇಮಪೂರ್ವಕ ವಂದನೆಗಳು. ಯುಗಯುಗಗಳಿಂದ ಅವತಾರತಾಳಿ ಜನರಿಗೆ ಭಕ್ತಿಮಾರ್ಗವನ್ನು ತೋರಿಸಿ, ಉಪದೇಶವನ್ನಿತ್ತು ಮೋಕ್ಷಮಾರ್ಗದಲ್ಲಿ ನಡೆಸಿದ್ದೀರಿ.

ದ್ವಾಪರಯುಗದಲ್ಲಿ ರೇವಣಸಿದ್ಧರು ರೇಣಾಗಿರಿಯಲ್ಲಿ ಸಿದ್ಧಿ ಪಡೆದರು. ಅವರಿಂದ ಅನುಗ್ರಹೀತರಾದ ಕಾಡಸಿದ್ಧರು ಸಿದ್ಧಗಿರಿಗೆ ಬಂದು ಕೆಲದಿನಗಳಾದ ನಂತರ ನಿರ್ಲಿಪ್ತರಾದರು. ಹಾಗೂ ಮಾಯೆಯ ಮರ್ದನ ಮಾಡಿದರು. ನಂತರ ಮರುಳಸಿದ್ಧರ ಅವತಾರವಾಯಿತು. ಅವರಿಂದ ಅನುಗ್ರಹೀತರಾದವರು ಏಕೋರಾಮಸಿದ್ಧರು. ಅವರ ನಂತರ ಪಂಡಿತಾರಾಧ್ಯ ಸಿದ್ಧರು. ಹೀಗೆ ಒಬ್ಬರ ನಂತರ ಇನ್ನೊಬ್ಬರಂತೆ ಐದು ಮಂದಿ ಸಿದ್ಧರಾಗಿ ಹೋದರು. ಉಪದೇಶಮಾಡಿ ಪ್ರಪಂಚದಲ್ಲಿ ಸಿಕ್ಕುಬಿದ್ದ ಬದ್ಧಜನರನ್ನು ಮೋಕ್ಷಮಾರ್ಗಕ್ಕೆ ಒಯ್ದರು. ಸಿದ್ಧಾವತಾರಿಗಳಾದ ಗುರುಲಿಂಗಜಂಗಮರಿಗೆ ಅನುಗ್ರಹವು ಆಯಿತು. ಆ ಕಥಾಭಾಗವನ್ನು ಮೊದಲು ನಿರೂಪಿಸುತ್ತೇನೆ.

ನಿಂಬರಗಿ ಎಂಬ ಹಳ್ಳಿಯಲ್ಲಿರುವ ನಾರಾಯಣರಾವ ಎಂಬ ಗುರುಮಹಾರಾಜರ ಚರಿತ್ರೆಯನ್ನು ಸ್ವಲ್ಪದರಲ್ಲಿ ವಿವರಿಸುವೆ. ಮಹಾರಾಜರು

## ಐದು ಸಮಾಸಗಳು

ಸಣ್ಣವರಿದ್ದಾಗ ಫಾಲ್ಗುಣ ಮಾಸದ ಹಬ್ಬ ಬಂದಿತು. ಮಹಾರಾಜರು ಬಹಳ ಹೊತ್ತು ಆಟವಾಡಿ ಮನೆಗೆ ಬರಲು ತಂದೆಯವರು ಸಿಟ್ಟು ಮಾಡಿದರು. ಮಹಾರಾಜರು ಸಿಟ್ಟಿನ ಭರದಲ್ಲಿ ಪಂಢರಪುರಕ್ಕೆ ಹೋಗಿ ವಿಠ್ಠಲನ ದರ್ಶನ ಪಡೆದರು. ಯಾವ ಪ್ರಕಾರ ರಾಮದಾಸರು ಅಡವಿಗೆ ತೆರಳಿದರೋ ಹಾಗೆ ಮಹಾರಾಜರು ವಿಠ್ಠಲಮಂದಿರದ ಹತ್ತಿರ ಏಕಾಗ್ರಚಿತ್ತದಿಂದ ಧ್ಯಾನಮಾಡುತ್ತ ಕುಳಿತರು. ಹೀಗೆ ಏಳು ದಿವಸಗಳು ಕಳೆಯಲಾಗಿ ಸ್ವಪ್ನದಲ್ಲಿ ಯಾರೋ ಬಂದು "ಸಿದ್ಧಗಿರಿಗೆ ಹೋಗು" ಎಂದು ಆಜ್ಞಾಪಿಸಿದಂತಾಯಿತು. ಕೂಡಲೇ ಸಿದ್ಧಗಿರಿಗೆ ಬಂದು ಅಲ್ಲಿ ನಡೆದಿರುವ ಪುರಾಣವನ್ನು ಕೇಳುವದರಲ್ಲಿ ಹರ್ಷನಿರ್ಭರರಾದರು. ಅದನ್ನು ನೋಡಿದ ಜಂಗಮರೂಪದಲ್ಲಿದ್ದ ಕಾಡಸಿದ್ಧರು ಹತ್ತಿರ ಬರುವಂತೆ ಸನ್ನೆಮಾಡಿ ಕರೆದು ಉಪದೇಶವನ್ನಿತ್ತರು. ಅದರಲ್ಲಿ ತಲ್ಲೀನರಾಗಿ ಗುರ್ವಾಜ್ಞೆ ಪಡೆದು ನಿಂಬರಗಿ ಗ್ರಾಮಕ್ಕೆ ಹಿಂತಿರುಗಿದರು. ಬಹಳ ವೇಳೆಯನ್ನು ಅರಣ್ಯದಲ್ಲಿ ಕಳೆದು ಗುಹ್ಯಾರ್ಥವನ್ನು ತಿಳಿದುಕೊಂಡರು ಸಮರ್ಥರಂತೆ. ಪ್ರಪಂಚ ಮತ್ತು ಪರಮಾರ್ಥ ಎರಡನ್ನೂ ಸಾಧಿಸಿದರು. ಹೀಗೆ ಮೂವತ್ತಾರು ವರ್ಷ ಸಾಧನೆಮಾಡಿ ಸಿದ್ಧರಾದರು. ಜನರಿಗೆ ಉಪದೇಶ ನೀಡಿ ಭಕ್ತಿಮಾರ್ಗಕ್ಕೆ ಹಚ್ಚಿ ನೂರಾರು ಜನರನ್ನು ಉದ್ಧರಿಸಿದರು.

ಆಗ ಒಬ್ಬ ಬ್ರಹ್ಮಚಾರಿಯು ಕಾಶೀಯಾತ್ರೆ ಮಾಡಿ ಪಂಢರಪುರಕ್ಕೆ ಹೋಗುವಾಗ ನಿಂಬರಗಿ ಹತ್ತಿರವಿರುವ ಸೊನಗಿ ಗ್ರಾಮಕ್ಕೆ ಬಂದರು. ಬ್ರಹ್ಮಚಾರಿಯ ಭೆಟ್ಟಿಗೆಂದು ಜನರು ಧಾವಿಸಿದರು. ಮಹಾರಾಜರೂ ಅವರ

ಭೆಟ್ಟಿಗೆಂದು ಅಲ್ಲಿಗೆ ಬಂದರು. ನಿರ್ಗುಣಭಕ್ತರಾದ ಮಹಾರಾಜರಿಗೂ ಸಗುಣಭಕ್ತ ಬ್ರಹ್ಮಚಾರಿಗೂ ಸ್ವಲ್ಪ ಕಾಲದವರೆಗೆ ವಾದವಿವಾದ ನಡೆಯಿತು. ಸಮರ್ಥರ ಗುಹ್ಯಜ್ಞಾನವನ್ನು ಅರಿತುಕೊಂಡು ಬ್ರಹ್ಮಚಾರಿಗಳು ಅವರ ಕಾಲಿಗೆ ಬಿದ್ದು ಉದ್ಧರಿಸಬೇಕೆಂದು ದುಃಖದಿಂದ ಕೇಳಿಕೊಂಡರು. ಮಹಾರಾಜರು ಅವರಿಗೆ ಉಪದೇಶ ಮಾಡಿದಾಗ ಅವರ ಮನಸ್ಸು ಶಾಂತವಾಯಿತು. ಅವರು ಉಮದಿ ಗ್ರಾಮದಲ್ಲಿದ್ದು ಹನ್ನೆರಡು ವರ್ಷ ಸಾಧನೆಮಾಡಿ ಸಾಧುತ್ವವನ್ನು ತತ್ವಶಃ ಪಡೆದರು. ಆಗ ಮಹಾರಾಜರು ಇತರರಿಗೆ ಉಪದೇಶ ಮಾಡಲಿಕ್ಕೆ ಆದೇಶ ನೀಡಿದರು. ಆಗ ಜನರಿಗೆ ಉಪದೇಶನೀಡಿ ಅವರನ್ನು ಭಕ್ತಿಮಾರ್ಗದಿಂದ ಮೋಕ್ಷಮಾರ್ಗಕ್ಕೆ ಒಯ್ದರು. ಭಜನೆ, ಗಾಯನ ಮತ್ತು ನಾನಾ ಉಪಾಯಗಳಿಂದ ಮಹಾರಾಜರ ಚರಣಗಳನ್ನು ಸ್ಮರಿಸುತ್ತ ರಘುನಾಥ ಪ್ರಿಯ ಎಂಬ ಹೆಸರನ್ನು ಪಡೆದರು.

ಉಮದೀಕರ ದೇಶಪಾಂಡೆ ಎಂಬ ಹದಿನಾರು ವರ್ಷದ ಬಾಲಕನು ಅವರ ಶಿಷ್ಯನಾದನು. ಸಣ್ಣವನಿದ್ದರೂ ಸಾತ್ವಿಕವೃತ್ತಿಯವನೂ, ಸಂಭಾವಿತನೂ, ಏಕನಿಷ್ಠೆಯುಳ್ಳವನೂ, ಭಾವಿಕನೂ, ತಪವನ್ನಾಚರಿಸುವ ಮನೋಭಾವನೆಯವನೂ, ದೇವಾಂಶಸಂಭೂತನೂ ಆಗಿದ್ದನು. ವೈರಾಗ್ಯವನ್ನು ಮೈಗೂಡಿಸಿಕೊಂಡು ಗುರುಚರಣವನ್ನು ದೃಢವಾಗಿ ಹಿಡಿದುಕೊಂಡು ಸಾಧನೆ ಮಾಡತೊಡಗಿದನು. ತನ್ನಲ್ಲಿ ಪ್ರಾಣವಿರುವವರೆಗೂ ಶನಿವಾರ ಗುರುಗಳಿಗೆ ಭೆಟ್ಟಿಯಾಗಿ ಅವರ ಸೇವೆ ಮಾಡದ ಹೊರತು ಊಟ ಮಾಡುತ್ತಿರಲಿಲ್ಲ. ಹೀಗೆ

## ಐದು ಸಮಾಸಗಳು

ಒಂದು ದಿನವೂ ತಪ್ಪದೆ ನಾಲ್ವತ್ತೆರಡು ವರ್ಷ ಸಾಧನೆ ಮಾಡಿದಾಗ ಅಂತರಂಗದಲ್ಲಿ ಭಕ್ತಿ ವಿಷಯದಲ್ಲಿ ಆನಂದ ಉದಿಸಿತು. ಎಂಥ ಅಡಚಣೆಯ ಪ್ರಸಂಗ ಬಂದರೂ ಆನಂದದಲ್ಲಿ ಕಾಲ ಕಳೆಯುತ್ತಿದ್ದರೂ ಸಾಧನೆಯನ್ನು ಬಿಡಲಿಲ್ಲ. ಅವರ ಕಥೆಯನ್ನು ಮುಂದಿನ ಸಮಾಸದಲ್ಲಿ ಹೇಳುತ್ತೇನೆ. ಶ್ರೋತೃಗಳಾದ ನೀವು ವಿಚಲಿತರಾಗದೆ ಕೇಳಿರಿ. ಇಂಥ ಸಮರ್ಥರ ಚರಿತ್ರೆಯು ಗಹನದಲ್ಲಿ ಗಹನವಾದದ್ದು. ಮಂದಮತಿಯಾದ ನಾನು ಅಲ್ಪಮಾತ್ರ ಬರೆದು ಇಟ್ಟಿರುವೆನು. ಶುದ್ಧವಾವುದು, ಅಶುದ್ಧವಾವುದು ನನಗೆ ತಿಳಿಯದು. ನಾನು ಎಲ್ಲರಿಗಿಂತ ದಡ್ಡನು. ಯಾವುದು ಮಾತನಾಡಲು ಅಸಾಧ್ಯವೋ ಅದನ್ನು ಆಡಿದೆನು. ಯಾವುದು ಹೇಳಲಸಾಧ್ಯವೋ ಅದನ್ನು ಹೇಳಿದೆನು. ಶ್ರೋತೃಗಳು ನನ್ನ ನ್ಯೂನತೆಯನ್ನು ಕ್ಷಮಿಸಬೇಕು. ಯಾರ ಮಹಿಮೆಯು ಅಗಾಧ ವಾಗಿರುವುದೋ ಅಂಥ ಸಮರ್ಥರ ಚರಿತ್ರೆಯನ್ನು ಮಂದಮತಿಯಾದರೂ ನಾನು ಹೇಳಿ ಸಮಾಸ ಪೂರ್ತಿ ಮಾಡಿದ್ದೇನೆ. ಹೀಗೆ ಶ್ರೀ ಗುರುಪರಂಪರಾ ನಿರೂಪಣೆಯೆಂಬ ಮೊದಲನೆಯ ಸಮಾಸ ಮುಗಿಯಿತು.

### ಸಮಾಸ-೨

ಶ್ರೀ ಗಣೇಶಾಯ ನಮಃ. ಶ್ರೀ ಗುರುಭ್ಯೋ ನಮಃ. ಶ್ರೀರಾಮ ಸಮರ್ಥ. ಶ್ರೀಪತಿಯೇ, ನಿನ್ನ ಮಹಿಮೆಯನ್ನು ಶ್ರುತಿಶಾಸ್ತ್ರಗಳು ಅರಿಯದೆ, ನಿನ್ನ

ಅಂತಪಾರವನ್ನು ತಿಳಿಯದೆ ಕೊನೆಗೆ "ನೇತಿ" "ನೇತಿ" ಎನ್ನುತ್ತವೆ. ರೂಪವಿಲ್ಲದ, ನಾಮವಿಲ್ಲದ, ತ್ರಿಗುಣರಹಿತ, ನಿರಾವಯವನಾದ, ನೀನು ಭಕ್ತರ ಮೇಲಿನ ಪ್ರೇಮದಿಂದ ಸಗುಣರೂಪವನ್ನು ತೋರಿಸಿದಿ. ನಾನಾ ವಿಧದ ಅವತಾರಗಳನ್ನು ಧಾರಣಮಾಡಿ ಭಕ್ತರನ್ನು ಬಹುವಿಧವಾಗಿ ರಕ್ಷಿಸಿದ್ದೀಯಾ. ಚರಾಚರ ಸೃಷ್ಟಿಯಲ್ಲಿ ಸತ್ಕೀರ್ತಿಯನ್ನು ಪ್ರಕಟಿಸಿದ್ದೀಯಾ. ಇದನ್ನು ವ್ಯಾಸರು ಪುರಾಣದಲ್ಲಿ ಹೇಳಿದ್ದಾರೆ.

ಈ ಕಲಿಯುಗದಲ್ಲಿ ಅವತರಿಸಿದ ಮಹಾಪುರುಷರಾದ ಉಮದೀಮಹಾರಾಜರಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳು. ಹಿಂದೆ ಸಾಧುಸಂತರು ಆಗಿಹೋಗಿದ್ದಾರೆ. ಜಗತ್ತಿನಲ್ಲಿ ಪ್ರಸಿದ್ಧಿ ಪಡೆದಿದ್ದಾರೆ. ಅದರಂತೆಯೇ ಉಮದೀಮಹಾರಾಜರು ನಿಂಬರಗೀಮಹಾರಾಜರ ಉಪದೇಶದಂತೆ ತಮ್ಮ ಪ್ರಾಣವನ್ನು ಪರಮಾರ್ಥಕ್ಕಾಗಿ ತೇಯ್ದಿದ್ದಾರೆ. ಅವರ ಹೆಸರು ಭಾವೂರಾವ. ಗುರುಸೇವೆಯಲ್ಲಿ ಬಹಳ ನಿಷ್ಠಾವಂತರು. ಹೀಗಾಗಿ ಜಗತ್ತಿನಲ್ಲಿ ಪ್ರಸಿದ್ಧಿ ಪಡೆದರು. 'ಭಾ' ಎಂದರೆ ದೃಶ್ಯಭಾಸ. ಅದರಲ್ಲಿರುವ ಸದ್ವಸ್ತುವಿನ ಅನುಭೂತಿಯಲ್ಲಿ ಯಾವಾಗಲೂ ತಲ್ಲೀನರಾಗಿರುತ್ತಿದ್ದರು. 'ಊ' ಎಂದರೆ ಉಪಾಧಿಯು. ಇದು ನಷ್ಟವಾದ ಮೇಲೆ ಪರಮಾರ್ಥವು ಸಾಧ್ಯವಾಗುತ್ತದೆ. ಆಮೇಲೆ ಷಡ್ವಿಕಾರಗಳು ತಮ್ಮಿಂದ ತಾವೇ ಶುದ್ಧವಾಗುತ್ತಿವೆ. 'ರಾ' ಎಂದರೆ ನೆನಪು. ಪ್ರಪಂಚದಲ್ಲಿದ್ದರೂ ಇಲ್ಲದಂತೆ ಇರುವುದು. 'ಯ' ಎಂದರೆ ಇಹಲೋಕದ ದೇವರು. ಸಾಕಾರದಂತೆ ಅವಯವವಿದ್ದರೂ ನಿರಾಕಾರ

ವೃತ್ತಿಯುಳ್ಳವರು ಎಂಬ ಭಾವ ಇರುತ್ತದೆ. ದೇಶಪಾಂಡೆ ಮನೆತನದಲ್ಲಿ, ವಿಧಿಯು ಹಣೆಯಲ್ಲಿ ಬರೆದಂತೆ ಅವರ ಜನ್ಮವಾಯಿತು. ಮುಂದೆ ಗುರು ಅನುಗ್ರಹದಿಂದ ಆ ರೇಷೆಯು ಅಳಿಸಿ ಹೋಯಿತು. ಅನಂತ ಜನ್ಮದ ಪುಣ್ಯವು ಫಲಿಸಿ ಆತ್ಮದರ್ಶನ ಲಭಿಸಿತು. ಸ್ವರೂಪದರ್ಶನ ಲಾಭದಿಂದ ಬಂಧನ ಹರಿದು ಹೋಯಿತು. ಇರಲಿ, ಇದೆಲ್ಲ ಮುಂದಿನ ವಿಷಯ. ಬಾಲ್ಯದಲ್ಲಿ ಹೇಗಿದ್ದರು? ಮತ್ತು ಸಾಧನೆಯನ್ನು ಹೇಗೆ ಮಾಡಿದರು? ಅದನ್ನು ಹೇಳುತ್ತೇನೆ.

ಇವರ ಅಣ್ಣಂದಿರಾದ ನಾನಾಸಾಹೇಬ ಹಾಗೂ ದಾಜೀಬಾ ಇವರು ರಘುನಾಥಪ್ರಿಯರ ಕೃಪೆಯಿಂದ ಅನುಗ್ರಹೀತರಾಗಿದ್ದರು. ಬಾಲ್ಯದಲ್ಲಿ ಭಾವೂರಾಯರು ನಿರ್ಗುಣ (ಬ್ರಹ್ಮ) ಜ್ಞಾನವು ವ್ಯರ್ಥವೆಂದು ಭಾವಿಸುತ್ತಿದ್ದರು. ದಾಜೀಬಾ ಇವರ ಗುರುಸೇವೆಯು ನಿರುಪಯುಕ್ತವೆನ್ನುತ್ತಿದ್ದರು. ಆದರೂ ಸಗುಣೋಪಾಸನೆಯನ್ನು ಮಾಡುತ್ತಿದ್ದರು. ದಿನಾಲೂ ಮಾರುತೀ ಪೂಜೆಯನ್ನು ಮಾಡುತ್ತಿದ್ದರು. ಅಲ್ಲಿ ರಘುನಾಥಪ್ರಿಯರು ದಿನಾಲೂ ಭೆಟ್ಟಿಯಾಗುತ್ತಿದ್ದರು. ರಘುನಾಥಪ್ರಿಯರೇ ಅವರಿಗೆ ನಮಸ್ಕಾರಮಾಡಿ ಅವರ ಅಂತರಂಗವನ್ನು ಭಕ್ತಿಮಾರ್ಗದ ಕಡೆಗೆ ಸೆಳೆಯುತ್ತಿದ್ದರು. ನಿಂಬರಗಿಮಹಾರಾಜರಿಗೆ ಶರಣು ಹೋಗಲು ಉಪದೇಶ ಮಾಡಿ ಸ್ವತಃ ಅವರನ್ನು ಕರೆದುಕೊಂಡು ನಿಂಬರಗಿಗೆ ಹೋದರು. ಧೀರ, ಉದಾರ, ಗಂಭೀರರಾದ ಮಹಾರಾಜರು ದೂರದೃಷ್ಟಿಯಿಂದ ತಿಳಿದು, ನೀವೇ ಅನುಗ್ರಹಮಾಡಿರೆಂದು ರಘುನಾಥಪ್ರಿಯರಿಗೆ ಆದೇಶ ನೀಡಿದರು. ಆದರಂತೆ ರಘುನಾಥಪ್ರಿಯರು

ಅವರಿಗೆ ಉಪದೇಶ ನೀಡಿದರು. ಅವರ ಅನುಗ್ರಹ ಪಡೆದು. ಉಮದಿ ಹಳ್ಳಿಯಲ್ಲಿ ತ್ರಿಕಾಲ ಸಾಧನೆ ಮಾಡುತ್ತ ಪ್ರಪಂಚ ಪರಮಾರ್ಥ ಎರಡನ್ನೂ ಸಾಧಿಸಿದರು. ಪರಮಾರ್ಥವನ್ನೇ ಸ್ವಾರ್ಥವೆಂದು ಮನ್ನಿಸಿ, ಕುಲದ ವ್ಯವಸಾಯವನ್ನು ಮಾಡುತ್ತ ಜನರನ್ನು ಸಂತೋಷ ಪಡಿಸುತ್ತಿದ್ದರು. ಇದರಿಂದ ಅವರಿಗೆ ಜನರ ಮಿತಿಮೀರಿದ ಪ್ರೀತಿ ಲಭಿಸಿತು. ಜನರಿಗೆ ಉಪಕಾರ ಮಾಡಿದಂತೆ ಜನಸಮೂಹವು ಹೆಚ್ಚಾಗಿ, ಉಪಕಾರವೇ ಅಪಕಾರವಾಗಿ ತೊಂದರೆಯಾಗತೊಡಗಿತು. ಪ್ರಾಪಂಚಿಕರು ಬಂದು ತಮ್ಮ ತೊಂದರೆಗಳನ್ನು ಹೇಳುವುದರಿಂದ ವೇಳೆಯ ಅಪವ್ಯಯವಾಗಹತ್ತಿತು. ಅವರನ್ನು ತಪ್ಪಿಸುವುದಕ್ಕಾಗಿ ಭಾವೂರಾಯರು ವನಕ್ಕೆ ಹೋಗಿ ಸಾಧನೆ ಮಾಡತೊಡಗಿದರು. ಮಧ್ಯಾಹ್ನ ಪುರಾಣ ಓದುವುದರಲ್ಲಿ ಹಾಗೂ ಶ್ರವಣ, ಮನನ, ಧ್ಯಾನದಲ್ಲಿ ಮಗ್ನರಾಗುತ್ತಿದುದರಿಂದ ಜನರ ತೊಂದರೆ ಕಡಿಮೆಯಾಯಿತು. ರಾತ್ರಿ ಜನರಿಗೆ ಭೆಟ್ಟಿಕೊಟ್ಟು ಶೀಘ್ರವಾಗಿ ಕೆಲಸ ಮುಗಿಸುವುದರಿಂದ ಪ್ರಪಂಚದಲ್ಲಿ ಹೆಚ್ಚು ವೇಳೆ ಕಳೆದು ಪರಮಾರ್ಥ ಬುದ್ಧಿಯನ್ನು ಮಲಿನಗೊಳಿಸುವುದು ನಿಂತಿತು. ಅನುಭವ ವೃದ್ಧಿಯಾದಂತೆ ವಿವೇಕ, ವೈರಾಗ್ಯಗಳು ನೆಲೆಗೊಂಡವು. ದೃಢವಾದ ವೈರಾಗ್ಯವು ಹುಟ್ಟಿದ್ದರಿಂದ ಪ್ರಪಂಚವು ಹುರುಳಿಲ್ಲದ್ದು ಎಂದು ಅನಿಸಿ, ಮಾಮಲೇದಾರ ನೌಕರಿಯನ್ನು ನಿರಾಕರಿಸಿದರು. ಪರಮಾರ್ಥ ಸಾಧನೆಯಲ್ಲಿ ಸ್ವತಂತ್ರವಾಗಿರತೊಡಗಿದರು. ಇವರ ಗುರುಗಳು ಲಿಂಗಾಯತರೆಂದು ಜನರು ಇವರನ್ನು ಟೀಕಿಸುತ್ತಿದ್ದರು.

## ಐದು ಸಮಾಸಗಳು

ಕೆಲವರು ಗುರುವು ಮಾಯಾಮಂತ್ರವನ್ನು ಮಾಡಿರುವನು ಎಂದು ಅನ್ನುತ್ತಿದ್ದರು. ಅವರ ಮಾವನವರಿಂದಲೂ ಸಾಕಷ್ಟು ತ್ರಾಸಾಯಿತು. ಉಳಿದ ಬಳಗದವರೂ ಕೂಡ ಇವರಲ್ಲಿ ಅವಿಶ್ವಾಸ ತೋರಿಸಹತ್ತಿದರು. ಇವರ ಪರಮಾರ್ಥವೆಲ್ಲ ಡಂಭಾಚಾರ ಎಂದು ಅವರಿಗೆ ತೊಂದರೆ ಕೊಡಹತ್ತಿದರು. ಅಜ್ಞರಿಗೆ ಈ ಆತ್ಮಜ್ಞಾನದ ವಿಚಾರ ಹೇಗೆ ತಿಳಿಯಬೇಕು? ನಿಜವಾದ ಬ್ರಾಹ್ಮಣರು ಯಾರು? ಎಂಬುದು ಅವರಲ್ಲಿ ಯಾರಿಗೆ ಗೊತ್ತು? ವರ್ಣದ ಗುರು ಬ್ರಾಹ್ಮಣ ಎಂಬ ವಚನವು ಸತ್ಯ. ಆದರೆ ಬ್ರಹ್ಮನನ್ನು ತಿಳಿದವನು ಬ್ರಾಹ್ಮಣ. ಯಾರು ಸಂಪೂರ್ಣವಾಗಿ ಆತ್ಮಜ್ಞಾನವನ್ನು ಪಡೆದಿದ್ದಾರೋ ಅವರೇ ಬ್ರಾಹ್ಮಣರು. ಈ ದೃಷ್ಟಿಯಿಂದ ತುಕಾರಾಮನೂ ಬ್ರಾಹ್ಮಣ. ಚೋಖಾಮೇಳಾನೂ ಬ್ರಾಹ್ಮಣ. ಬ್ರಹ್ಮನನ್ನು ತಿಳಿಯದ ಬ್ರಾಹ್ಮಣನು ಕತ್ತೆಯೆಂದೇ ತಿಳಿಯಬೇಕು. ಇರಲಿ, ಹೀಗೆ ಜನ ನಿಂದಿಸಿದರೂ, ಧೈರ್ಯಗೆಡದೆ ಇದ್ದವನೇ ದೇವಪುರುಷನು. ಸಾಧನ, ವೈರಾಗ್ಯವನ್ನು ಮೈಗೂಡಿಸಿಕೊಂಡಿದ್ದರಿಂದ ದೇಹಸಾಮರ್ಥ್ಯವು ಹೆಚ್ಚಾಯಿತು. ಒಮ್ಮೆ ಗುರುಸಾನ್ನಿಧ್ಯದಲ್ಲಿದ್ದು ಸಾಧನೆಯಲ್ಲಿದ್ದಾಗ ಗುಂಗೀಹುಳವು ತೊಡೆಯನ್ನು ಕೊರೆದರೂ ಅಣುಮಾತ್ರವೂ ಅಲುಗಾಡಲಿಲ್ಲ. ಅಡವಿಯಲ್ಲಿದ್ದಾಗ ಮೈಮೇಲೆ ಚೇಳು, ಹಾವುಗಳು ಹರಿದಾಡಿದರೂ ಭಯಪಡುತ್ತಿರಲಿಲ್ಲ. ಮಳೆಯಿಂದ ನೆನೆದರೂ, ಬಿಸಿಲಿನಿಂದ ಬೆಂದರೂ, ಚಳಿಯಿಂದ ಮೈ ಕೊರೆದರೂ ನಿಶ್ಚಲರಾಗಿರುತ್ತಿದ್ದರು. ನಿದ್ರೆಯನ್ನು ಗೆದ್ದು ಹದಿನೆಂಟು ವರ್ಷ ಎದ್ದುನಿಂತು ತಪಸ್ಸುಮಾಡಿ ಜಗತ್ತಿಗೇ ಪಾವನರೆನಿಸಿಕೊಂಡರು.

ಅವರ ಸಾಧನೆಯ ಕ್ರಮವು ಹೀಗಿತ್ತು. ಶನಿವಾರ ಗುರುಗಳಿಗೆ ಭೆಟ್ಟಿಯಾಗಿ ಅವರ ಸೇವೆ ಮಾಡುತ್ತಿದ್ದರು. ಗುರುಗಳ ಮೇಲಿನ ನಿಸ್ಸೀಮ ಭಕ್ತಿಯಿಂದ ಅವರ ಪಾದರಕ್ಷೆಗಳನ್ನು ಎತ್ತಿಹಿಡಿಯುತ್ತಿದ್ದರು. ಯಾವ ಕೆಲಸವನ್ನೂ ನಿಂದ್ಯವೆಂದು ಭಾವಿಸುತ್ತಿದ್ದಿಲ್ಲ. ಅವರ ಗುರುಬಂಧುಗಳಾದ ರಾಮಭಾವೂ ಚಿಮ್ಮಡದಲ್ಲಿರುತ್ತಿದ್ದರು. ಅವರೂ ನಿಶ್ಚಲವಾಗಿ ಸಾಧನೆ ಮಾಡಿದರು. ಇಬ್ಬರೂ ಪರಿಪೂರ್ಣವಾದ ನಿಷ್ಠೆಯುಳ್ಳವರು. ಸದ್ಗುರುವಿನ ವಚನದಲ್ಲಿ ದೃಢನಿಷ್ಠೆಯುಳ್ಳವರು. ಅದನ್ನು ಬಿಟ್ಟು ಅವರು ಯಾವ ಪ್ರಮಾಣವನ್ನು ಮನ್ನಿಸಲಿಲ್ಲ. ರಾಮಭಾವೂ ಅವರು ಚಿಮ್ಮಡ ಪಂಥವನ್ನು ಆರಂಭಿಸಿದರು. ಇವರೂ ಗುರುವಿನ ಆಜ್ಞೆ ಪಡೆದು, ಪರಮಾರ್ಥವನ್ನು ಬೆಳೆಸಿ ಗುರುಗಳ ಹೆಸರನ್ನು ಪ್ರಸಿದ್ಧಿಗೆ ತಂದರು. ಗುರುಗಳ ದೇಹಾಂತಸಮಯದಲ್ಲಿ ಅವರ ಹತ್ತಿರದಲ್ಲಿಯೇ ಇದ್ದ ಭಾವೂರಾಯರು ತಾವು ಪಾರಮಾರ್ಥವನ್ನು ಬೆಳೆಸಬೇಕೆಂದು ಆದೇಶ ಪಡೆದರು. ಗುರುಗಳ ದೇಹಾಂತವಾದ ಮೇಲೆ ಅವರಿಗೆ ಅಪಾರ ದುಃಖವಾಯಿತು. ಶೋಕಸಾಗರದಲ್ಲಿ ಮುಳುಗಿದರು. ಅವರ ದುಃಖಕ್ಕೆ ಉಪಮೆಯೇ ಇಲ್ಲ. ನಂತರ ವಿಚಾರ ಮಾಡಿ ಪಾರಮಾರ್ಥವನ್ನು ಬೆಳೆಸುವ ಉದ್ದೇಶದಿಂದ ಹಗಲು-ರಾತ್ರಿ ಸಾಧನೆ ಮಾಡಲಾಗಿ ಗುರುಕೃಪೆಯಿಂದ ಭಾಗ್ಯವು ತೆರೆಯಿತು. ಸಮೂಲವಾಗಿ ಮಾಯಾಜಾಲವು ನಾಶವಾಗಿ ಅದ್ವೈತ ಸ್ಥಿತಿಯು ಮನದಲ್ಲಿ ದೃಢವಾಗಿ ಬಿಂಬಿಸಿತು. ಗುರುಗಳ ಕೀರ್ತಿಯನ್ನು ಬೆಳೆಸಬೇಕೆಂಬ ಉದಾತ್ತ ವಿಚಾರದಿಂದ ದೇವಾಲಯ ಕಟ್ಟಿಸಿ

ಮೂರ್ತಿಸ್ಥಾಪನೆ ಮಾಡಬೇಕೆಂದೆನಿಸಿತು. ಭಕ್ತಿಮಾರ್ಗ ಪ್ರಚಾರಮಾಡುವ ತಮ್ಮ ಇಚ್ಛೆ ಫಲಿಸಿದರೆ, ಪಂಢರಪುರಕ್ಕೆ ಬಂದು 'ನಿಮ್ಮೆದುರು ಉರುಳುಸೇವೆ' ಮಾಡುವೆನೆಂದು ವಿಠ್ಠಲನಿಗೆ ಹರಕೆ ಹೊತ್ತರು. ಸದ್ಗುರುವಿನ ಸಂಪೂರ್ಣ ಕೃಪೆಯಿಂದ ಮತ್ತು ವಿಶ್ವಾಸದಿಂದ ಸಾಧನೆ ಮಾಡುತ್ತಿರಲಾಗಿ ಯಾವ ನ್ಯೂನತೆ ಇರುವುದು ಶಕ್ಯವು? ಹೀಗೆ ಕರ್ನಾಟಕದ ತುಂಬ ಅಲೆದಾಡಿ ಜನಸಮುದಾಯವನ್ನು ಬೆಳೆಸಿ ಭಕ್ತಮಾರ್ಗ ಪ್ರಚಾರ ಮಾಡಿದರು. ಲೋಕೋದ್ಧಾರಕ್ಕಾಗಿ ಅವತರಿಸಿದರು; ಭಕ್ತಿಮಾರ್ಗ ಬೆಳೆಸಿ ಭೂಮಂಡಲದಲ್ಲಿ ಖ್ಯಾತಿವೆತ್ತರು. ಹಳ್ಳಿಹಳ್ಳಿಗೆ ಹೋಗಿ ಭಜನೆ-ಸಾಧನೆ ಮಾಡುತ್ತ ನಾನಾಪ್ರಕಾರವಾಗಿ ಜನರನ್ನು ಸಂತುಷ್ಟಗೊಳಿಸಿದರು. ಅವರ ಪ್ರೇಮದ ಭಕ್ತ, ಅಂಬೂರಾವ ಎಂಬ ವಿರಕ್ತ ಮನುಷ್ಯನು ಅಲ್ಲಿ ಬಂದು ಸ್ವಸ್ಥಚಿತ್ತದಿಂದ ಸಾಧನೆ ಮಾಡುತ್ತಿದ್ದನು. ಯಾವತ್ತೂ ವೇಳೆಯಲ್ಲಿ ದೇಶದ ತುಂಬ ಸುತ್ತುತ್ತ, ಸಪ್ತಾಹದ ಸಮಯದಲ್ಲಿ ಮಹಾರಾಜರು ಇಂಚಗೇರಿಗೆ ಬಂದು ಭಜನೆಯನ್ನು ಹಚ್ಚುತ್ತಿದ್ದರು. ಕೀಳ ಜಾತಿಯವರೇ ಇರಲಿ, ಸಂಸ್ಥಾನಿಕರೇ ಇರಲಿ, ಅವರು ಕರೆದರೆ ಆವರವರ ಭಾವ ಅರಿತು ಅವರ ಮನೆಗೆ ಹೋಗುತ್ತಿದ್ದರು. ಪಾರಮಾರ್ಥದಲ್ಲಿ ಸಣ್ಣವರು ದೊಡ್ಡವರು ಇಲ್ಲ; ಆದರಂತೆ ವಿದ್ಯೆ-ಧನ-ವರ್ಣ ವಿಚಾರಗಳೂ ಇಲ್ಲ. ಒಟ್ಟಿನಲ್ಲಿ ಪ್ರಪಂಚದಲ್ಲಿ ಭೇದವಿದ್ದರೂ ಪರಮಾರ್ಥದಲ್ಲಿ ದೃಷ್ಟಿಯುಳ್ಳವರು ಏಕತೆಯನ್ನು ಕಾಣುತ್ತಾರೆ. ಆದರೂ ಪ್ರಪಂಚದಲ್ಲಿ ಮಾತ್ರ ಈ ಭೇದವಿಚಾರ ಅವರವರ ಯೋಗ್ಯತೆಯಂತೆ ಇಡುತ್ತಿದ್ದರು ಮಹಾರಾಜರು.

ಭಾವೂರಾಯರು ಹರಿಜನ ಗುರು-ಬಂಧುಗಳಿಗೂ ಸಹ ಪ್ರೇಮದಿಂದ ಸಾಷ್ಟಾಂಗ ನಮಸ್ಕರಿಸುತ್ತಿದ್ದರು. ವಾದವಿವಾದಕ್ಕೆ ಆಸ್ಪದ ಕೊಡುತ್ತಿರಲಿಲ್ಲ. ವಾಚಾಳಿಗಳಿಗೂ ನಮಸ್ಕರಿಸುತ್ತಿದ್ದರು. ನಿಯಮಿತವಾಗಿ ಸಾಧನೆ ಮಾಡುವವರಿಗೂ, ಅನನ್ಯವಾಗಿ ಶರಣು ಬಂದವರಿಗೂ, ಪಾರಮಾರ್ಥಿಕ ಅನುಭವಗಳನ್ನು ಹೇಳುತ್ತಿದ್ದರು. ಅನುಭವದ ಮುಂದೆ ಶಬ್ದಜ್ಞಾನವು ಗೌಣವೆನಿಸುತ್ತದೆ. ಎರಡನೆಯವರ ಮೇಲೆ ಯಾವ ಭಾರ ಹಾಕುತ್ತಿರಲಿಲ್ಲ. ಶಿಷ್ಯರಿಂದ ಏನನ್ನೂ ಅಪೇಕ್ಷಿಸುತ್ತಿದ್ದಿಲ್ಲ. ವರ್ಣರಂಜಿತ, ಬಗೆಬಗೆಯ ರೂಪಗಳಿಂದ ಮೋಹಗೊಳಿಸುವ ವಸ್ತುಗಳೆಡೆಗೆ (ಮಾಯೆದೆಡೆಗ) ಅವರು ಗಮನ ಕೊಡುತ್ತಿದ್ದಿಲ್ಲ. ಸಂಕಟ ಬಂದಾಗ ಶಿಷ್ಯರಿಗೆ ಉಪಾಯ ಹೇಳಿ ಅವರ ತೊಂದರೆ ದೂರ ಮಾಡುತ್ತಿದ್ದರು. ನಾಮರೂಪೀ ಔಷಧಿಗಳಿಂದ ವ್ಯಾಧಿಗಳನ್ನು ಗುಣಪಡಿಸುತ್ತಿದ್ದರು. ತ್ರಿಕಾಲದಲ್ಲಿ ನಡೆಯುವ ಸಾಧನೆ, ಪುರಾಣ, ಭಜನೆಗಳನ್ನು ಎಂದಿಗೂ ತಪ್ಪಿಸುತ್ತಿದ್ದಿಲ್ಲ. ಆಗಾಗ್ಗೆ ಆನಂದದಲ್ಲಿ ಮಗ್ನರಾಗಿ ಕುಳಿತಿರುತ್ತಿದ್ದರು. ಎಷ್ಟೋ ಶ್ರೋತೃಗಳು ಬಂದು ಭಜನೆ-ಪ್ರವಚನಗಳನ್ನು ಕೇಳುತ್ತಿದ್ದರು. ಆದರೆ ಸಾಧಕನ ಯೋಗ್ಯತೆಯ ಅರಿವು ನಾಮಧಾರಕರಿಗಿರುವಂತೆ ಅವರಿಗಿರುವುದಿಲ್ಲ. ಪುರಾಣ ಭಜನೆಯೆಂದರೆ ಶಬ್ದಜ್ಞಾನವು. ಸಾಧನೆ ಮಾತ್ರ ನಿಃಶಬ್ದಜ್ಞಾನದ ಕುರುಹು. ಮೇಲೆ ಮೇಲೆ ನೋಡುವವರಿಗೆ ಇದು ಹೇಗೆ ತಿಳಿದೀತು? ನನ್ನಿಂದ ಈ ಮಹತ್ಕಾರ್ಯವಾಯಿತೆಂಬ ಭಾವನೆ ಮಹಾರಾಜರಲ್ಲಿರಲಿಲ್ಲ. ಆದರೂ

ಚಮತ್ಕಾರಗಳು ತಾವಾಗಿಯೇ ಆಗುತ್ತಿದ್ದವು. ಇದಕ್ಕೆ ಕಾರಣವೆಂದರೆ ಅವರು ನಡೆಯುವ ಪುಣ್ಯಮಾರ್ಗ. ಜ್ಞಾನವು ಸಿದ್ಧಿಯಿಂದ ದೂರವಿರುತ್ತದೆ ಎಂದು ಅನ್ನುತ್ತಾರೆ. ಕೃಪಾಳುವಾದ ದೇವರೇ ಭಕ್ತರ ಕೆಲಸವನ್ನು ಮಾಡುತ್ತಾನೆ. ಆದರೂ ಸಾಧನೆಯಿಂದ ಎಲ್ಲವೂ ಸಾಧ್ಯವಾಯಿತು. ಸಾಧಕರಿಗೆ ಸಾಧನೆಮಾಡಲು ಉತ್ಸಾಹ ಬರಲು ಉಪಾಯಗಳನ್ನು ಹೇಳುತ್ತಿದ್ದರು. ಸಂದೇಹಗಳು ನಿರಸನವಾದವು. ಭಯವು ದೂರಾಯಿತು. ಅವರ್ಣನೀಯ ಸುಖವು ಸಾಧನಮಾರ್ಗದಲ್ಲಿ ಪ್ರಾಪ್ತವಾಯಿತು. ಇರಲಿ; ಸಾಧುಗಳ ಲಕ್ಷಣಗಳನ್ನು ಹೇಳುವಾಗ ಶಬ್ದಗಳ ಕೊರತೆ ಬೀಳುತ್ತದೆ. ಏಕೆಂದರೆ ನಾನು ಮಂದಮತಿಯು. ನಾನಾ ಕಲೆಗಳನ್ನು ಬಲ್ಲವನಲ್ಲ. ಸಮರ್ಥರ ವರ್ಣನೆಯನ್ನು ನಾನೇನು ಮಾಡಬಲ್ಲೆ? ಅವರ ಅನುಗ್ರಹದಿಂದಲೇ ಇಷ್ಟಾದರೂ ಹೇಳಿದ್ದೇನೆ. ಅವರ ಕೃಪೆಯಾದರೆ ಮುಂದುವರಿಸಬಲ್ಲೆ. ಇಲ್ಲವಾದರೆ ಪಾಮರನಿಂದ ಇಷ್ಟೇ ಸಾಕು. ಹೀಗೆ ಸಮರ್ಥ ಭಾವೂರಾವಮಹಾರಾಜರ ಚರಿತ್ರನಿರೂಪಣೆಯೆಂಬ ಎರಡನೆಯ ಸಮಾಸವು ಮುಗಿಯಿತು.

## ಸಮಾಸ-೩

ಶ್ರೀ ಗಣೇಶಾಯ ನಮಃ. ಶ್ರೀ ಗುರುಭ್ಯೋ ನಮಃ. ಶ್ರೀರಾಮ ಸಮರ್ಥ. ಅನನ್ಯ ಭಕ್ತಿಯ ಫಲವಾಗಿರುವ, ವೈರಾಗ್ಯದ ಮೂಲವಾಗಿರುವ, ಜ್ಞಾನದ ಅಧಿಷ್ಠಾನವಾಗಿರುವ ಪ್ರಾಂಜಲ ಸತ್ಕಥೆಯು ಇದು. ಸಂಸಾರ ತಪ್ತರಾದ ಭಕ್ತಜನರಿಗೆ ಈ ಸಮರ್ಥರ ಕಥೆಯು ಶೀತಳ ಆನಂದಸಾಗರದಂತೆ ಇದೆ.

ಇವರ ಚರಿತ್ರೆಯು ಅತ್ಯಂತ ರಸಭರಿತವಾಗಿದೆ. ಸಕಲ ಸಜ್ಜನರು ಕಥೆಯನ್ನು ಕೇಳಿದರು. ಶ್ರೀ ಸಮರ್ಥರು ವನದಲ್ಲಿ ಮಠವನ್ನು ಕಟ್ಟಿಸಿದ್ದುದು ಮಹತ್ಕಾರ್ಯವಿದೆ. ಅಲ್ಲಿಯ ಕಾರ್ಯಕ್ರಮದ ವರ್ಣನೆಯನ್ನು ಸಾವಧಾನವಾಗಿ ಕೇಳಿರಿ. ಯೋಗಿರಾಜರೂ ಮಹಾಸಮರ್ಥರೂ ಆದ ಭಾವೂರಾಯರು ಬಹಳ ಕಷ್ಟಪಟ್ಟು ಪಾರಮಾರ್ಥವನ್ನು ಸಾಧಿಸಿದರು. ಪಾರಮಾರ್ಥವೇ ಅವರ ದೃಷ್ಟಿಯಲ್ಲಿ ಮುಖ್ಯ ಸಂಪತ್ತು ಆಗಿತ್ತು. ಸಮರ್ಥರು ಹೋದಹೋದಲ್ಲೆಲ್ಲ ಸರ್ವವೂ ಅರ್ಥಪೂರ್ಣವಾಗಿರುತ್ತಿತ್ತು. ಅರ್ಥವಿದ್ದಲ್ಲಿ ಅನರ್ಥವಿರಲು ಹೇಗೆ ಸಾಧ್ಯ? ಕಾಡಿ-ಬೇಡಿ ತೆಗೆದುಕೊಳ್ಳುವುದು ಒಂದು ವಿಧವಾದರೆ, ಏನೂ ಬೇಡದೇ ತಾನೇ ಸಿಗುವುದು ಇನ್ನೊಂದು ರೀತಿ. ನಿಷ್ಕಾಮಭಕ್ತಿಯಲ್ಲಿ ದೇವರು ಯಾವ ಕೊರತೆಯನ್ನೂ ಮಾಡುವುದಿಲ್ಲ. ಸಮರ್ಥರು ಹೋದಲ್ಲೆಲ್ಲ ಜನರು ಧಾವಿಸಿ ಬರುತ್ತಿದ್ದರು. ಬಂದವರ ಮನಸ್ಸನ್ನು ಸಮರ್ಥರು ಸಂತುಷ್ಟಗೊಳಿಸುತ್ತಿದ್ದರು. ಇವರ ಭಕ್ತಿಯಮಹಿಮೆ ಬಹುದೂರದವರೆಗೆ ಪಸರಿಸಿತು. ಭಕ್ತಮಂಡಳಿ ಇಂಚಗೇರಿಗೆ ಬಂದು ಸಕಾಲದಲ್ಲಿ ಆನಂದದಿಂದ ಸಪ್ತಾಹವನ್ನಾಚರಿಸುತ್ತಿದ್ದರು. ಮಾರ್ಗಶೀರ್ಷ, ಚೈತ್ರ ಹಾಗೂ ಮಾಘ ಮಾಸಗಳಲ್ಲಿ ಸಪ್ತಾಹಗಳ ಉತ್ಸವ ಆಚರಿಸುತ್ತಿದ್ದರು. ಶ್ರಾವಣ ಮಾಸದಲ್ಲಿ ಸಾಧನೆಯನ್ನು ಹೆಚ್ಚಿಗೆ ಬೆಳೆಸುತ್ತಿದ್ದರು. ಅಲ್ಲಿ ನಡೆಯುವ ಚಮತ್ಕಾರಗಳನ್ನು ಕುರಿತು ವಿಚಾರವಂತರು ವಿಚಾರ ಮಾಡಬೇಕು. ವಿಚಾರ ಎಂದರೆ 'ಇಚ್ಛಾಹಾರ'. ಎಂದರೆ ಯಾರನ್ನೂ ಏನನ್ನೂ ಕೇಳದೆ ಇದ್ದರೂ ಎಲ್ಲ ಪ್ರಕಾರದ

ತೊಂದರೆಗಳೂ ಅನಾಯಾಸವಾಗಿ ಪರಿಹಾರವಾಗುತ್ತಿದ್ದವು. ಇದು ಆ ಸ್ಥಳದ ಮಹಿಮೆಯೇ ಎಂದು ಹೇಳಬಹುದು. ರತ್ನ ಮತ್ತು ಕವಡಿ ಒಂದೇ ಹೇಗೆ ಆದಾವು? ಆ ಮಠದಲ್ಲಿ ಸುಂದರವಾದ ಮೂರ್ತಿಯ ಎರಡು ಮುಖಗಳು ಇದ್ದವು. ಆ ಮೂರ್ತಿಯ ಸೌಂದರ್ಯವನ್ನು ನೋಡಿಯೇ ತಿಳಿಯಬೇಕು. ಒಂದು ಬೆಳ್ಳಿಯದು ಇನ್ನೊಂದು ತಾಮ್ರದ್ದು. ಮೃದಂಗದ ಗಂಭೀರ ನಾದವು, ಹೂಗಳ ಸುವಾಸನೆಯು ಜನರನ್ನು ಅಚ್ಚರಿಗೊಳಿಸುತ್ತಿದ್ದವು. ಭಕ್ತರು ಇರಲಿಕ್ಕೆ ಸುತ್ತಲೂ ಕೋಣೆಗಳನ್ನು ಕಟ್ಟಿಸಿದರು. ಆ ಭೂಮಿಗೆ ಸರಿಯಾದದ್ದು ಯಾವುದೂ ಇಲ್ಲ. ಭಕ್ತರು ಮೂರೂ ಹೊತ್ತು ಭಜನೆ ಮಾಡುತ್ತಿದ್ದರು. ಕರ್ಪೂರ, ಸಾಂಬ್ರಾಣಿಯ ಆರತಿ ಬೆಳಗುತ್ತಿದ್ದರು. ಜಯಜಯಕಾರ ಮಾಡುತ್ತಾ ಭಕ್ತಿಪೂರ್ವಕ ತಾಳ ಬಾರಿಸುತ್ತಿದ್ದರು. ಸಪ್ತಾಹದ ಸಮಯದಲ್ಲಿ ಎರಡು ಬೆಳ್ಳಿಯ ಬೆತ್ತಗಳನ್ನು ದೇವರ ಮುಂದೆ ಇಡುತ್ತಿದ್ದರು. ಅವು ಬಹಳ ಶೋಭಾಯಮಾನವಾಗಿ ಸಪ್ತಾಹದಲ್ಲಿ ಬೆಳಗುತ್ತಿದ್ದವು. ತಾಳ, ಮೃದಂಗ, ಜಾಗಟೆ, ಘಂಟೆಗಳ ನಾದದಿಂದ ಜನರು ಹರ್ಷಿತರಾಗುತ್ತಿದ್ದರು. ದಿಂಡೆ, ಪತಾಕೆ, ಹೂಗಳ ಗುಚ್ಛದಿಂದ ಶೋಭಿಸುವ ಮಂಟಪನೋಡಿ ಮನಸ್ಸು ಮುಗ್ಧವಾಗುತ್ತಿತ್ತು. ನಾಲ್ಕೂ ಕಡೆ ಪರ್ವತಗಳಿಂದ ಸುತ್ತುವರಿದು ಮಧ್ಯದಲ್ಲಿ ಇದ್ದ ಮಠಕ್ಕೆ ಜನರು ಶಾಂತಿಸುಖಕ್ಕಾಗಿ ಹೋಗುತ್ತಿದ್ದರು. ಹತ್ತಿರವಿದ್ದ ಎರಡೂ ತೀರ್ಥಗಳಲ್ಲಿ ಸ್ನಾನ ಮಾಡುತ್ತಿದ್ದರು. ವರ್ಷವೆಲ್ಲವೂ ಅಲ್ಲಿ ತಿಳಿನೀರು ತುಂಬಿರುತ್ತಿತ್ತು. ಗುರುಗಳ ಪಾದುಕೆಗಳನ್ನಿಟ್ಟು ಗುರುಲಿಂಗಜಂಗಮ ಎಂದು

ಘೋಷಿಸುತ್ತ ಬಾಗಿ ನಮಿಸುತ್ತಿದ್ದರು. ಶಿವಲಿಂಗದ ಹತ್ತಿರ ಗಣಪತಿ ಇರುವಂತೆ, ಬಲಭೀಮನ ಮೂರ್ತಿಯು ಇರುವುದರಿಂದ ಶೋಭೆಯು ಇಮ್ಮಡಿಸುತ್ತಿತ್ತು. ಎದುರಿಗೆ ನಗಾರಿ-ನೌಬತ್ತು ಬಾರಿಸುತ್ತಿದ್ದರು. ಮಹಡಿಯ ಮೇಲೆ ಸ್ತ್ರೀಯರು ಕುಳಿತಿರುತ್ತಿದ್ದರು. ಮೇಲೆ ದೊಡ್ಡ ಘಂಟೆಗಳನ್ನು ತೂಗುಹಾಕಿದ್ದರು. ಆಕಾಶವನ್ನು ವ್ಯಾಪಿಸುವಂತೆ ಅದರ ನಾದವಾಗುತ್ತಿತ್ತು. ಮೂರೂ ದಿವಸ ರಾತ್ರಿಯಲ್ಲಿ ಪಲ್ಲಕ್ಕಿ ಉತ್ಸವ ನಡೆಯುತ್ತಿತ್ತು. ಮುಂದೆ ಮುಂದೆ ಬಜಂತ್ರಿ ಊದುತ್ತ ನಾಮಘೋಷಣೆ ಮಾಡುತ್ತ ಹೋಗುತ್ತಿರುವಾಗ ಭೂಮಿ ನಡುಗುವಂತೆ ಕಾಣುತ್ತಿತ್ತು. ಗುರುಲಿಂಗಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ ಹನ್ನೆರಡು ಅಭಂಗಗಳನ್ನು ಹೇಳುತ್ತಿದ್ದರು. ನಾನಾ ಬಗೆಯ ವಾದ್ಯಗಳನ್ನು ಬಾರಿಸುತ್ತ ಕೆಲವರು ಪಲ್ಲಕ್ಕಿಯ ಮುಂದೆ ನೃತ್ಯ ಮಾಡುತ್ತಿದ್ದರು. ಕೆಲವರು ಭಜನೆ ಮಾಡುತ್ತ ಗುರುಲಿಂಗಜಂಗಮರ ಹೆಸರನ್ನು ಘೋಷಿಸುತ್ತ ಜಯಜಯಕಾರ ಮಾಡುತ್ತಿದ್ದರು. ಐದು ಪ್ರದಕ್ಷಿಣೆ ಹಾಕಿ ಮೂರ್ತಿಯನ್ನು ಮೊದಲಿನ ಸ್ಥಾನಕ್ಕೆ ತಂದು, ನಾನಾ ಬಗೆಯ ಆರತಿಗಳನ್ನು ಮಾಡುತ್ತಿದ್ದರು. ಏಳು ದಿನಗಳವರೆಗೆ ಅನ್ನಸಂತರ್ಪಣೆ ನಡೆಯುತ್ತಿತ್ತು. ನಂತರ ಭಕ್ತಜನರು ತಮ್ಮ ತಮ್ಮ ಊರಿಗೆ ಹೊರಡುತ್ತಿದ್ದರು. ಸಪ್ತಾಹದಲ್ಲಿಯ ಭಕ್ತರ ಉಲ್ಲಾಸವು ವರ್ಣನಾತೀತವಿರುತ್ತಿತ್ತು. ಇರಲಿ; ನಾನು ಅಜ್ಞಾನಿ, ಮಂದಮತಿ. ಮುಂದಿನ ಸಮಾಸದಲ್ಲಿ ಶಿಷ್ಯವರ್ಗದ ನಿರೂಪಣೆ ಮಾಡುವೆನು. ಸಾವಧಾನದಿಂದ ಕೇಳಿರಿ. ನನ್ನ ಬರಹ ಸಾಕಾರವಾದದ್ದು. ಸಮರ್ಥರು ನಿರಾಕಾರ. ಬರೆಯುವಾಗ

ಆಗುವ ದೋಷಗಳನ್ನು ಕ್ಷಮಿಸಬೇಕು. ಅದನ್ನೇ ಸಿಹಿಮಾಡಿಕೊಂಡು ಸವಿಯಬೇಕಾಗಿ ಪ್ರಾರ್ಥನೆ. ಅವಹೇಳನ ಮಾಡದೆ ಕ್ಷಮಿಸಬೇಕು. ನನಗೆ ಮರಾಠೀಭಾಷೆ ಬರುವುದಿಲ್ಲ. ಅರ್ಥ-ವ್ಯಾಕರಣದಲ್ಲಿ ಬುದ್ಧಿಹೀನನಾದ್ದರಿಂದ ವರ್ಣನೆ ಮಾಡಲಿಕ್ಕೆ ಬರುವುದಿಲ್ಲ. ನಾನು ಅಜ್ಞನಿದ್ದು ಸುಮ್ಮನೇ ಬರಹದಿಂದ ಪುಸ್ತಕ ತುಂಬುತ್ತಿದ್ದೇನೆ. ಕ್ಷಮಿಸಬೇಕಾಗಿ ಗುರುಗಳಲ್ಲಿ ಪ್ರಾರ್ಥನೆ. ಇಂಚಗೇರಿ ಕ್ಷೇತ್ರವು ನಿಜವಾಗಿಯೂ ಧನ್ಯ. ಅಲ್ಲಿಗೆ ಹೋಗುವವರು ಪುಣ್ಯವಂತರು. ತಮ್ಮ ಪವಿತ್ರದರ್ಶನದಿಂದ ಇತರರಿಗೂ ಪವಿತ್ರಮಾಡುತ್ತಾರೆ. ಹೀಗೆ ಶ್ರೀಇಂಚಗೇರಿವರ್ಣನೆ ಎಂಬ ಮೂರನೆಯ ಸಮಾಸವು ಮುಗಿಯಿತು.

## ಸಮಾಸ-೪

ಶ್ರೀ ಗಣೇಶನಿಗೆ ನಮಸ್ಕಾರ. ಶ್ರೀಗುರುವಿಗೆ ನಮಸ್ಕಾರ. ಶ್ರೀರಾಮ ಸಮರ್ಥ. ಬ್ರಹ್ಮಾನಂದಾ, ನೀವು ಸಕಲ ಸದ್ಗುಣಗಳ ತವರುಮನೆ. ನಿಮ್ಮ ಚರಿತ್ರೆಯ ನಿರೂಪಣೆಗೆ ಅನುಮತಿ ಕೊಡಿರಿ. ನಿಮ್ಮ ಆಜ್ಞೆಯನ್ನು ಶಿರಸಾವಹಿಸಿ, ಜಗದ್ವಂದ್ಯರಾವ ನಿಮ್ಮ ಚರಣಸ್ಮರಿಸಿ ಕಥೆ ಪ್ರಾರಂಭ ಮಾಡುತ್ತೇನೆ. ನೀವು ನಿರ್ಗುಣ ನಿರಾಕಾರರು. ಆದರೂ ಪ್ರಪಂಚದಲ್ಲಿ ಸಾಕಾರವಾಗಿ ಕಾಣುತ್ತೀರಿ. ಸಂಸಾರದ ಬಂಧನವಿಲ್ಲದ್ದರಿಂದ ಸಂಸಾರಾತೀತರು. ಮಹಾರಾಜರಿಗೆ ಅನೇಕ ಭಕ್ತರಿದ್ದರು. ಅವರಲ್ಲಿ ಯಾರು ಯಾರು ವಿರಕ್ತರಾದರೆಂಬ ಕಥೆಯನ್ನು ಹೇಳುತ್ತೇನೆ. ಸಾವಧಾನದಿಂದ ಕೇಳಿರಿ. ರಾಮದಾಸರ ಶಿಷ್ಯ ಕಲ್ಯಾಣರಿದ್ದಂತೆ, ಸುಜ್ಞಾನಿ ಮತ್ತು ಗುಣಸಂಪನ್ನರಾದ

ಅಂಬುರಾವ ಇವರು ಸಮರ್ಥರ ಭಕ್ತರು. ಕಲ್ಯಾಣರ ಉಪಮೆಯನ್ನು ಕೊಟ್ಟದ್ದೇಕೆಂದರೆ ಇವರೂ ಅವರಂತೆ ಬಹಳ ಸಾಧನೆ ಮಾಡಿ ಶಿಷ್ಯರಲ್ಲಿ ಪ್ರಮುಖರಾದರು. ಇಂಚಗೇರಿ ಕ್ಷೇತ್ರದಲ್ಲಿ ಮಠ ಕಟ್ಟಲು ಸ್ಥಳ ಕೊಟ್ಟು ಅಲ್ಲಿಯೇ ಇದ್ದು ಸಾಧನೆಯಲ್ಲಿ ನಿರತರಾದರು. ಅವರು ಸಾಧಕರು ಎಂದರೆ ಸಾಧನೆ ಮಾಡುವವರು, ಸಾತ್ವಿಕರು, ಸಂಭಾವಿತರು, ಭಕ್ತಿಭಾವಪೂರ್ಣರು, ಸರ್ವೋತ್ತಮರು ಇದ್ದರು. ಮಹಾರಾಜರು ಅವರ ಸದ್ಗುಣಗಳನ್ನು ಕಂಡು, ಉಪದೇಶ ಕೊಡುವ ಅಧಿಕಾರವನ್ನು ಇವರಿಗೆ ಕೊಟ್ಟರು. ಆದರೆ ಅವರು ಮಹಾರಾಜರಿಗೆ "ನಾನು ನಿಮ್ಮ ದಾಸಾನುದಾಸನು. ನೀವಿರುವಾಗ ಉಪದೇಶ ಕೊಡಲು ನಾನು ಹೇಗೆ ಅಧಿಕಾರಿಯಾದೇನು?" ಎಂದರು.

ರಾಮದಾಸರ ಶಿಷ್ಯರಲ್ಲಿ ವೇಣು ಅಕ್ಕಾ ಹೇಗೋ ಹಾಗೆ ಸಮರ್ಥರ ಶಿಷ್ಯರಲ್ಲಿ ಶಿವಲಿಂಗವ್ವನವರು. ಅವರು ಜತ್ತ ಸಂಸ್ಥಾನದವರು. ಚಿಕ್ಕಂದಿನಲ್ಲಿಯೇ ಉಪದೇಶ ತೆಗೆದುಕೊಂಡು ಏಕನಿಷ್ಠೆಯಿಂದ ಭಕ್ತಿಮಾಡಿ ಸದಾಸರ್ವದಾ ಸಾಧನೆ ಮಾಡುತ್ತ ಆತ್ಮಜ್ಞಾನವನ್ನೇ ತಮ್ಮ ದೃಷ್ಟಿಯಲ್ಲಿಟ್ಟುಕೊಂಡರು. ಅಂಥ ಮಹಿಮೆ ಸಂಪಾದಿಸಿದ ಅವರೇ ಧನ್ಯರು. ಅವರನ್ನು ಹೇಗೆ ವರ್ಣಿಸಲಿ? ಮಹಾರಾಜರ ಪ್ರಯತ್ನವಾದಿ ಶಿಷ್ಯರೆಂದರೆ ನಂದ್ಯಪ್ಪ ಮತ್ತು ತುಕಾರಾಮ. ಈ ಭಾವಿಕರ ಭಕ್ತಿಯು ಏಕನಿಷ್ಠವಾದದ್ದು. ನಂದ್ಯಪ್ಪನ ನಿವಾಸಸ್ಥಾನವು ಜಮಖಂಡಿ. ಲಿಂಗಾಯತ ಕುಲದಲ್ಲಿ ಹುಟ್ಟಿದರು. ಮಹಾರಾಜರಿಂದ ಅನುಗ್ರಹೀತರಾಗಿ ಉಪದೇಶದ ನಂತರ ಪರಮಾರ್ಥ ರಹಸ್ಯವನ್ನು ತಿಳಿದರು.

ಭಕ್ತಿಯ ಮೇಲೆ ಪ್ರೀತಿಯಿದ್ದ ಕಾರಣ, ನೇಮನಿಷ್ಠೆಯನ್ನು ಪಾಲಿಸುತ್ತ ಪ್ರತಿ ಸಪ್ತಾಹಕ್ಕೆ ಮಠಕ್ಕೆಬಂದು ಸರ್ವವಿಧದಿಂದ ಶೋಭೆಯನ್ನುಂಟು ಮಾಡುತ್ತಿದ್ದರು. ಇನ್ನೊಬ್ಬ ಶಿಷ್ಯರಾದ ತುಕಾರಾಮರ ನಿವಾಸಸ್ಥಾನ ವಿಜಾಪುರ. ಬೋಧನೆಯ ನಂತರ ಭ್ರಮೆಯು ದೂರಾದಮೇಲೆ ಗುರುಚರಣದಲ್ಲಿ ಲೀನರಾದರು. ಭಕ್ತಿಯನ್ನು ಬಿಟ್ಟರೆ ಬೇರಾವುದೂ ಅವರಿಗೆ ಸೇರುತ್ತಿರಲಿಲ್ಲ. ಸಪ್ತಾಹವನ್ನು ತಪ್ಪಿಸಬಾರದೆಂಬ ಆಶೆ ಅವರದು. ಪೂಜೆ, ಭಜನೆಗಳನ್ನು ಬಹು ಸಂಭ್ರಮದಿಂದ ಮಾಡುತ್ತಿದ್ದರು. ನಾನಾ ವಾದ್ಯಗಳನ್ನು ತರಿಸಿ ಪಲ್ಲಕ್ಕಿಯ ಮುಂದೆ ನೃತ್ಯ ಮಾಡುತ್ತಿದ್ದರು. ಚಿಮ್ಮಡದಲ್ಲಿ ಕಬೀರ ಮತ್ತು ಅಲ್ಲಪ್ಪ ಎಂಬ ಇಬ್ಬರು ಶಿಷ್ಯರಿದ್ದರು. ಇಬ್ಬರೂ ವಿರಕ್ತರೂ, ಭಾವಿಕರೂ, ಗುಹ್ಯಜ್ಞಾನಿಗಳೂ ಆಗಿದ್ದರು. ಅವರ ಬಗ್ಗೆ ಹೇಳುವ ಕಾರಣವೇನೆಂದರೆ, ಅವರದು ನಿಶ್ಚಲವಾದ ನಾಸಾಗ್ರದೃಷ್ಟಿ ಇತ್ತು. ಅವರು ತುಂಬಾ ವಿವೇಕ ಉಳ್ಳವರು. ಕಕಮರಿ ಎಂಬ ಗ್ರಾಮದಲ್ಲಿ ಶಂಕರಪ್ಪನೆಂಬ ಭಕ್ತನೋರ್ವನು ಭಕ್ತಿಯಲ್ಲಿ ಎಲ್ಲ ಶಿಷ್ಯರಲ್ಲಿ ಪ್ರಮುಖನು ಹಾಗೂ ವಿರಕ್ತನು. ಅಲ್ಲಿಯ ಭಕ್ತರು ಅವನನ್ನು ಗುರುವೆಂದು ಭಾವಿಸಿ ತ್ರಿಕಾಲದಲ್ಲಿ ಪ್ರೇಮದಿಂದ ವಂದಿಸುತ್ತಿದ್ದರು. ಅದರಂತೆ ತಿಕೋಟೇಕರ ರಾಮರಾವ ಇವರಿಗೆ ಸಂಸಾರದಲ್ಲಿ ಜಿಗುಪ್ಸೆ ಉಂಟಾಗಿತ್ತು. ಅದನ್ನು ಅರಿತುಕೊಂಡ ಸಮರ್ಥರು ಅವರನ್ನು ಸದಾಕಾಲ ತಮ್ಮ ಬಳಿ ಇಟ್ಟುಕೊಂಡಿದ್ದರು. ಅವರ ಅಡ್ಡ ಹೆಸರು ಘಡಣವೀಸ. ಅವರು ಬಾಲಬ್ರಹ್ಮಚಾರಿ, ಉದಾರ, ವಿರಕ್ತರಿದ್ದು ಯಾವಾಗಲೂ ಗುರ್ವಾಜ್ಞೆಯನ್ನು

ಪಾಲಿಸುತ್ತಿದ್ದರು. ಅದೇ ಊರಿನಲ್ಲಿ ಗಂಗಾಬಾಯಿ ಎಂಬ ಕವಿಯತ್ರಿ ಇದ್ದಳು. ಅವಳು ಭಾವಿಕಳಿದ್ದು ಭಕ್ತಿಪರವಶಳಾಗಿ ಸದಾಕಾಲ ಸಾಧನೆ ಮಾಡುತ್ತ ತನ್ನ ವಿಶ್ವಾಸಬಲದಿಂದ ಆತ್ಮಜ್ಞಾನದಲ್ಲಿ ನಿಷ್ಣಾತಳಾಗಿದ್ದಳು. ನಿಂಬರಗಿಯಲ್ಲೊಬ್ಬ ಪರಮಭಕ್ತ ನಾಗಪ್ಪನೆಂಬವನು, ವಾದ್ಯ-ಗಾಯನದಲ್ಲಿ ಗಂಧರ್ವನಂತೆ ನಿಷ್ಣಾತನಾಗಿದ್ದನು. ಇವನು ನಿಂಬರಗಿಮಹಾರಾಜರ ಮೊಮ್ಮಗ ಮತ್ತು ಸಮರ್ಥರ ಜೊತೆಗೆ ಹೋಗುತ್ತಿದ್ದನು. ಅವನು ಗುಣವಂತನೂ ಪವಿತ್ರನೂ ಆಗಿದ್ದನು. ಅದರಂತೆ ಸಮರ್ಥರ ಇನ್ನೊಬ್ಬ ಶಿಷ್ಯ ಎಂಟು ವರ್ಷದ ಹುಡುಗ, ಓದು-ಬರಹ ಬಾರದವನು; ಅವನು ಐದು ವರುಷದವನಿದ್ದಾಗಲೇ, ಅನುಗ್ರಹೀತನಾಗಿ ನಿತ್ಯಸಾಧನೆ ಮಾಡುತ್ತಿದ್ದನು. ಇನ್ನೊಬ್ಬ ಅತಿಭಾವಿಕ, ಸಾತ್ವಿಕ, ಭಜನೆಯಲ್ಲಿ ನಿಷ್ಣಾತನಾದ ಈರಪ್ಪನೆಂಬ ಹುಡುಗನಿದ್ದನು. ಮೂಗಿನ ತುದಿಯಲ್ಲಿ ದೃಷ್ಟಿಯನ್ನಿರಿಸಿ ಏಕಾಗ್ರಚಿತ್ತದಿಂದ ಕೆಲಸ ಮಾಡುತ್ತಿದ್ದನು. ಒಮ್ಮೆ ಕೇಳಿದ ಭಜನೆಯನ್ನು ಪ್ರಾಣಾಂತದವರೆಗೂ ಮರೆಯುತ್ತಿದ್ದಿಲ್ಲ. ಇಷ್ಟು ಸಣ್ಣ ವಯಸ್ಸಿನಲ್ಲಿ ಇಷ್ಟು ಭಾವಪೂರ್ಣ ಹೇಗಾದನೆಂದು ಜನರೆಲ್ಲ ಆಶ್ಚರ್ಯಪಡುತ್ತಿದ್ದರು.

ಹೀಗಿದ್ದ ಭಕ್ತರಲ್ಲಿ ಆತ್ಮಜ್ಞಾನ ಮಾಡಿಕೊಂಡ ಸ್ತ್ರೀಯರು ಕೂಡ ಇದ್ದರು. ನಿಜವಾಗಿಯೂ ಅವರು ಧನ್ಯರು. ಅವರನ್ನು ವರ್ಣಿಸುವುದು ಅಸಾಧ್ಯ. ಆಯೀಸಾಹೇಬ ಪಟವರ್ಧನ ಎಂಬವರು ಸಮರ್ಥರ ಕೀರ್ತಿಯನ್ನು ಕೇಳಿ, ಅವರಿಂದ ಅನುಗ್ರಹ ಪಡೆಯ ಉತ್ಸುಕತೆಯಿಂದ, ಭಕ್ತಿಯಲ್ಲಿ ಮನಸ್ಸಿಟ್ಟು

ಆತ್ಮಜ್ಞಾನವನ್ನು ಬೆಳೆಸಿಕೊಂಡರು. ಅವರನ್ನು ವರ್ಣಿಸಿದಷ್ಟೂ ಕಡಿಮೆಯೇ. ಇಂಚಗೇರಿಯಲ್ಲಿ ಮನೆ ಕಟ್ಟಿಸಿ ಜಮಖಂಡಿ ಗ್ರಾಮದ ಬಹಳಷ್ಟು ಜನರನ್ನು ಭಜನೆಗೆ ಹಚ್ಚಿ ಜನ್ಮಸಾರ್ಥಕವಾಗುವಂತೆ ಮಾಡಿದರು. ಸೊಲ್ಲಾಪುರದಲ್ಲಿ ಇರುತ್ತಿದ್ದ ಬಯಾಬಾಯಿ ಭಾವಿಕಳೂ ಉದಾರ ಹೃದಯದವಳೂ ಇದ್ದು ಪರರಿಗೆ ಉಪಕಾರ ಮಾಡುವಲ್ಲಿ ಸರ್ವಶ್ರೇಷ್ಠಳಾಗಿದ್ದಳು. ಬಹಳ ಸಡಗರದಿಂದ ಭಕ್ತಿ ಮಾಡುತ್ತಿದ್ದಳು. ಇಷ್ಟೇ ಅಲ್ಲ, ಇತರರನ್ನೂ ಭಕ್ತಿಮಾರ್ಗಕ್ಕೆ ಸೆಳೆದು ಅವರು ಸಹಜವಾಗಿ ಸಾಧನ-ಸ್ಥಿತಿಯನ್ನು ಮುಟ್ಟುವಂತೆ ಮಾಡಿ ಸಮರ್ಥರ ಖ್ಯಾತಿಯನ್ನು ಬೆಳಗಿಸಿದಳು.

ಶಿಷ್ಯರಲ್ಲಿ ಪರಮಜ್ಞಾನಿಯೆನಿಸಿದ ವಿಜಾಪುರದ ವಕೀಲರಾದ ನರಹರರಾವ ಇವರು, ವಿದ್ಯಾಪಾರಂಗತರೂ, ವೇದಾಂತಪಂಡಿತರೂ ಆಗಿದ್ದರು. ಅವರಿಗೆ ಭಕ್ತಿಮಾರ್ಗ ದೊರೆಯಿತು. ಆದರಿಂದ ಆತ್ಮಜ್ಞಾನ ಪಡೆಯಬೇಕೆಂದು ಪ್ರಯತ್ನ ಮಾಡಿದ ಅವರು ಧನ್ಯರು. ಅವರ ಮಹಿಮೆ ವರ್ಣನಾತೀತ. ಎಷ್ಟೋ ಜನರು ಶಬ್ದಜ್ಞಾನಿಗಳಿರುತ್ತಾರೆ. ಅವರಿಗೆ ಆತ್ಮಜ್ಞಾನ ಬೇಕಾಗಿರುವುದಿಲ್ಲ. ಇವರು ಶಬ್ದಜ್ಞಾನವನ್ನು ಬದಿಗೊತ್ತಿ ಪ್ರಯತ್ನಮಾಡಿದರು. ತೇರದಾಳದಲ್ಲಿ ಜೇರಮಲ ಎನ್ನುವವರು ಭಕ್ತಿ ಸಾಮರ್ಥ್ಯದಲ್ಲಿ ಮಲ್ಲರಿದ್ದಂತೆ. ಔದಾರ್ಯದಲ್ಲಿ ಅವರನ್ನು ಯಾರೂ ಸರಿಗಟ್ಟಲಾರರು. ಅವರು ಆತ್ಮಜ್ಞಾನ ಪಡೆದು ತಮ್ಮವರನ್ನು ಭಕ್ತಿಮಾರ್ಗಕ್ಕೆ ಹಚ್ಚಿ ಬಹಳ ಖ್ಯಾತಿಯನ್ನು ಪಡೆದರು. ಇಲ್ಲಿ ಎಲ್ಲ ಸಮಾಸಗಳ ಸಾರಾಂಶ ಕೊಡಲಿಕ್ಕೆ ಅವಕಾಶವಿಲ್ಲ.

ಪಂಚಭೂತಗಳಲ್ಲಿ ಆಕಾಶವು ಮುಖ್ಯವಿದ್ದಂತೆ ಮುಖ್ಯವಾದುದನ್ನು ಇಲ್ಲಿ ಹೇಳುತ್ತೇನೆ. ಹಿಂದೆ ಅಂಬುರಾವ ಮಹಾರಾಜರು ಯಾರು ಎಂದು ಹೇಳಿದ್ದೆ. ಅವರು ವಿಚಾರವಂತರು, ತೂಕದಿಂದ ನಡೆಯುವವರು, ಭಕ್ತ ತುಕಾರಾಮನಿಗೆ ಸಾಟಿಯಾದವರು. ಎಲ್ಲ ಶಿಷ್ಯರಲ್ಲಿ ಶ್ರೇಷ್ಠರು. ಎಲ್ಲರಿಗಿಂತ ಹೆಚ್ಚಿನ ಅಧಿಕಾರ ಅವರಿಗೆ. ಅವರದು ದೂರದೃಷ್ಟಿ, ಮನಸ್ಸು ಸ್ವಚ್ಛ. ಕೃಷ್ಣನು ಬೆರಳ ತುದಿಯಿಂದ ಪರ್ವತವನ್ನು ಎತ್ತಿ ಗೋಕುಳದ ಜನರನ್ನು ರಕ್ಷಿಸಿದಂತೆ, ನಂದ್ಯಪ್ಪನು ಭಕ್ತಿಮಾರ್ಗವನ್ನು ಎತ್ತಿಹಿಡಿದು ಜನರನ್ನು ರಕ್ಷಿಸಿದನು. ಅದರಿಂದ ಕೃಷ್ಣನ ಉಪಮ ಅವನಿಗೆ. ತನ್ನ ಜೀವನದ ಸಾರ್ಥಕ ಮಾಡಿಕೊಂಡನು; ಭಕ್ತಿಮಾರ್ಗ ಬೆಳೆಯಿಸಿದನು. ಶಂಕರಪ್ಪನ ವರ್ಣನೆ ಹಿಂದೆ ಬಂದಿದೆ. ಅವನ ಸರಳ ಸ್ವಭಾವಕ್ಕಾಗಿ ಅವನನ್ನು ಸಾಂಬಶಿವನಿಗೆ ಹೋಲಿಸಬಹುದು. ರಾಮರಾವ ಇವರು ಬ್ರಹ್ಮಚಾರಿ, ಭಾವುಕರಿದ್ದು ಅಂತರ್ಯದಲ್ಲಿ ವಿರಕ್ತರಾಗಿದ್ದರು. ಸದಾಕಾಲ ಗುರುಸೇವೆಯಲ್ಲಿದ್ದು ಕೆಲಸ ಮಾಡುತ್ತಿದ್ದುದರಿಂದ ಅವರಿಗೆ ಹನುಮಂತನ ಉಪಮೆ ಸಲ್ಲುವುದು. ಇನ್ನೂ ಎಷ್ಟೋ ಭಕ್ತರಿದ್ದಾರೆ. ಹೇಳುತ್ತ ಹೋದರೆ ಅಸಂಖ್ಯಾತರು ಇರುವರು. ನನಗೆ ಗೊತ್ತಿರುವಷ್ಟು ಭಕ್ತರನ್ನು ವರ್ಣಿಸಿದ್ದೇನೆ. ಮೂಢನಾದ ನಾನು ಮಂದಮತಿ, ಅಜ್ಞಾನಿ, ವಿವಿಧ ಕಲೆಗಳನ್ನು ನಾನು ಅರಿಯೆನು. ಹೇಳಿದುದನ್ನೇ ಶ್ರೋತೃಗಳು ಆನಂದದಿಂದ ಸ್ವೀಕರಿಸಬೇಕು. ಇರಲಿ, ಭಕ್ತಿಪಂಥವು ಸಾಗರದಂತೆ ಅಪಾರವಾಗಿ ಬೆಳೆಯಿತು. ನಾನೇನು ವರ್ಣಿಸಬಲ್ಲೆ?

ಹೀಗೆ ಶಿಷ್ಯವರ್ಗನಿರೂಪಣೆಯೆಂಬ ನಾಲ್ಕನೆಯ ಸಮಾಸವು ಮುಗಿಯಿತು.

## ಸಮಾಸ-೫

ಶ್ರೀ ಗಣೇಶಾಯ ನಮಃ. ಶ್ರೀ ಗುರುಭ್ಯೋ ನಮಃ. ಶ್ರೀರಾಮ ಸಮರ್ಥ. ಯಾವ ಸಾಧುಸಂತರಿಂದ ಮುಕ್ತಿಯು ಸುಲಭವಾಗಿ ದೊರೆಯುವುದೋ, ಎಲ್ಲಿ ಜಗದೀಶನು ಸಪ್ರೇಮದಿಂದ ಸ್ವತಃ ಬಂದು ನಿಲ್ಲುವನೋ, ಅಂಥ ಸಂತ ಸಭೆಗೆ ನಮಸ್ಕಾರ. ಸಂತ ಸಮುದಾಯವು ಬಹಳ ಹೆಚ್ಚಾಯಿತು. ಅದು ಮಿತಿಮೀರಿ ಬೆಳೆಯ ಹತ್ತಿತು. ಅದು ಲೆಕ್ಕಕ್ಕೂ ಹತ್ತದಂತಾಯಿತು. ಇರಲಿ, ಜ್ಞಾನ ಹೆಚ್ಚಾಯಿತು. ನನ್ನ ಮಂದಮತಿಯ ಬುದ್ಧಿಗೆ ಏನು ತಿಳಿಯಬೇಕು? ನೇತಿ, ನೇತಿ ಎಂದು ಹೇಳಿ ವೇದಗಳು ತಲ್ಲಣಿಸಿದವು. ಶಬ್ದಜ್ಞಾನವನ್ನು ವರ್ಣಿಸುವದು ಸಹಸ್ರಮುಖದ ಶೇಷನಿಗೇ ಆಗದಿದ್ದಾಗ ನಾನೇನು ವರ್ಣಿಸಬಲ್ಲೆ?

ದೇವರಲ್ಲಿ ಭಕ್ತಿಯಿಲ್ಲದೆ ಶಬ್ದಜ್ಞಾನದಲ್ಲಿ ಬಡಬಡಿಕೆಯೇ ಹೆಚ್ಚಾಗಿ ಮಾಯಾಜಾಲದಲ್ಲಿ ನನ್ನ ಆಯುಷ್ಯವು ವ್ಯರ್ಥವಾಗಿ ಹೋಯಿತು. ಮನಸ್ಸಿನಲ್ಲಿ ಏನಾದರೂ ಕಾಮನೆಯನ್ನಿಟ್ಟುಕೊಂಡು ಭಕ್ತಿಮಾಡುವ ಜನರೇ ಹೆಚ್ಚು. ಅವರಲ್ಲಿ ನಾನೂ ಒಬ್ಬನು. ನಿಷ್ಕಾಮಭಕ್ತಿಯಿಂದ ಮೋಕ್ಷಪ್ರಾಪ್ತಿಯಾದರೆ ಸಕಾಮಭಕ್ತಿಯಿಂದ ಜನ್ಮಪ್ರಾಪ್ತವಾಗುವುದು. ನಿಷ್ಕಾಮಭಕ್ತಿ ಎಂದರೇನು? ಅದರ ನಿರೂಪಣೆ ಮಾಡುವೆನು. ನಿಷ್ಕಾಮತ್ವವೆಂದರೆ ಕಾಮನೆ ಇಲ್ಲದೆ

ಇರುವುದು. ಜೀವ ಮತ್ತು ಶಿವ ಭೆಟ್ಟಿಯಾಗಿ ಜೀವವು ಶಿವನಲ್ಲಿ ಲೀನವಾಗುವುದು, ಮೋಕ್ಷ ದೊರೆಯುವುದು. ಹೀಗೆ ಬಿಡುಗಡೆ ಹೊಂದಿದ ಜೀವನು ದೇವಾಂಶಸಂಭೂತನಾಗಿ ಲೋಕವನ್ನು ಉದ್ಧರಿಸುವನು. ಜಗತ್ತಿನಲ್ಲಿ ಶಿವಸಮಾನನಾಗಿ (ಸಾಂಬನಾಗಿ) ಶಾಶ್ವತನಾಗಿ ಶೋಭಿಸುವನು. 'ಸಾ' ಎಂದರೆ ಷಡ್ಗುಣಗಳು, 'ಭ' ಎಂದರೆ ಭವಿಷ್ಯವನ್ನು ತಿಳಿಯುವುದು. ವಿಧಿಲಿಖಿತದ ರೇಷೆಯನ್ನು ತಿರುಗಿಸಿಬಿಟ್ಟರು. ವಿಧಿರೇಷೆಯು ಬದಲಾಗುವುದಕ್ಕೆ ಭಕ್ತಿಯೇ ಮುಖ್ಯ ಕಾರಣವು. ಅಂಥ ಭಕ್ತಿಯ ಸರಿಯಾದ ಅರ್ಥವನ್ನು ಸಾವಧಾನದಿಂದ ಕೇಳಿರಿ. 'ಭ' ಎಂದರೆ ಭವಿಷ್ಯ, 'ತೀ' ಎಂದರೆ ಹರಿಮಾಯೆ. ಹರಿಮಾಯೆಯು ಭವಿಷ್ಯದ ಅಂತ್ಯ ಮಾಡಿ ಪರಮಾರ್ಥ ಮತ್ತು ಪ್ರಪಂಚದಲ್ಲಿಯ ತನ್ನತನವನ್ನು ಹೋಗಲಾಡಿಸಿ ಭವಸಾಗರವನ್ನು ದಾಟಿಸುತ್ತದೆ. ಈ ಎರಡರ ಹೊರೆಯನ್ನು ದೇವರ ಮೇಲಿರಿಸಿ ತಮ್ಮಂತೆಯೇ ಸಾಧಕರನ್ನು ಸಾಧನೆಗೆ ಸದ್ಗುರುಗಳು ತೊಡಗಿಸುತ್ತಿದ್ದರು. ಮತ್ತು ಬದ್ಧ ಮುಮುಕ್ಷು ಜನರು ಬಂದರೆ ಅವರನ್ನೂ ಸಾಧುಗಳನ್ನಾಗಿ ತಕ್ಷಣದಲ್ಲಿ ಪರಿವರ್ತಿಸುತ್ತಿದ್ದರು. ತಮ್ಮಂತೆಯೇ ಅವರನ್ನು ಪರಿವರ್ತಿಸಲಿಕ್ಕೆ ಹೆಚ್ಚು ವೇಳೆ ಬೇಕಾಗಿಲ್ಲ. ಹೀಗೆ ನಡೆದಿರುವ ಯುಕ್ತಿಯನ್ನು ವರ್ಣಿಸಲು ಸಾಧ್ಯವಿಲ್ಲ. ದಾಸಬೋಧದಲ್ಲಿ ಹೇಳಿದ ದೃಷ್ಟಾಂತವನ್ನೂ ಕೇಳಿರಿ. (ದ ೧೫. ಸ ೨. ಶ್ಲೋ ೨೩) ಅಡವಿಯಲ್ಲಿಯ ಕಂದರದಲ್ಲಿ ಹೋಗುತ್ತಿದ್ದರು. ಗಿರಿಕಂದರಗಳಲ್ಲಿದ್ದು ಯಾರ ದೃಷ್ಟಿಗೂ ಬೀಳದಂತೆ ಸದಾಕಾಲದಲ್ಲಿ ಎಲ್ಲರ ಚಿಂತೆಯನ್ನೂ ಹೊತ್ತುಕೊಳ್ಳುತ್ತಿದ್ದರು. ಗಿರಿಕಂದರದಲ್ಲಿ ಇದ್ದು ಸಭೆಗಳನ್ನು

ವೈಭವದಿಂದ ನಡೆಸಿ ಜನರಿಗೆ ತಮ್ಮ ಪ್ರಚೀತಿ ತೋರಿಸಿ ಭಕ್ತಿಯನ್ನು ಬೆಳೆಸಿದರು. ಪ್ರಚೀತಿ ಎಂದರೆ ತನಗೆ ಬಂದ ಅನುಭವ, ಗುರು ಹೇಳಿದ ಅನುಭವ ಹಾಗೂ ಶಾಸ್ತ್ರದಲ್ಲಿ ಹೇಳಿದ ಅನುಭವ; ಇವುಗಳಲ್ಲಿ ಪ್ರತಿಯೊಂದನ್ನು ಸಾಕ್ಷಾತ್ಕಾರದಿಂದಲೇ ತಿಳಿಯಬೇಕು. ಸಾಕ್ಷಾತ್ಕಾರದಿಂದಲೇ ಎಂದರೆ, ಆರೂ ಗುಣಗಳ ಪರಿವರ್ತನೆಯಾದುದನ್ನು ಕಣ್ಣಿನಲ್ಲಿ ಕಾಣುವುದು. ಷಡ್ಗುಣಗಳನ್ನು ಹೇಗೆ ಪರಿವರ್ತಿಸಬೇಕು? ಕಾಮವನ್ನು ಭಕ್ತಿಯಲ್ಲಿ ಬೆಳೆಸಬೇಕು. ಕ್ರೋಧವನ್ನು ಮಾಯೆಯಲ್ಲಿ ಕೊಂದುಹಾಕಬೇಕು. ಎಂದರೆ ಸಾಕ್ಷಾತ್ಕಾರ ಸಾಧ್ಯ. ಸಂತ ತುಕಾರಾಮ, ಸಂತ ರಾಮದಾಸರು ಗದ್ಯ, ಪದ್ಯಗಳಲ್ಲಿ ಹೇಳಿರುವುದನ್ನು ಆಧಾರವಾಗಿಟ್ಟುಕೊಂಡು ಭಕ್ತಿಗೆ ಉತ್ತೇಜನ ಕೊಡುತ್ತಿದ್ದರು. ಸಗುಣ ಬ್ರಹ್ಮನ ಯೋಗದಿಂದ "ಯುಗಯುಗಗಳಲ್ಲಿ ಹುಟ್ಟಿ ಬರುತ್ತೇನೆ". ಹೀಗೆ ಆಶ್ವಾಸನವಿತ್ತ ಶ್ರೀ ಹರಿಯು ಅವತಾರಗಳನ್ನು ತಾಳಿ ನಿರ್ಗುಣನಾದನು. ಒಂದು ಮಹತ್ಕಾರ್ಯಕ್ಕಾಗಿ ಅವತಾರ ತಾಳುತ್ತಾನೆ. ಭಕ್ತಿಮಾರ್ಗವನ್ನು ಬೆಳೆಸುತ್ತಾನೆ. ಶರಣಾಗತರನ್ನು ರಕ್ಷಿಸುತ್ತಾನೆ (ದಾ.ಬೋ.ದ. ೭, ಸ. ೧೦, ಶ್ಲೋಕ ೪೦). ಯಾವನು ಶರಣಾಗತರ ಚಿಂತೆಯನ್ನು ಹೊತ್ತುಕೊಳ್ಳುವನೋ ಅವನೇ ಸದ್ಗುರು. ನಾನಾ ಯತ್ನಗಳಿಂದ ಮಾತೆಯು ಮಗುವನ್ನು ಹೇಗೆ ಬೆಳೆಸುವಳೋ, ಹಾಗೆ ಸದ್ಗುರುವು ಶರಣಾಗತರನ್ನು ರಕ್ಷಿಸುತ್ತಾನೆ. ನುಡಿದಂತೆ ನಡೆಯುವುದು ಭಕ್ತಿ ಬೆಳೆಯಲು ಕಾರಣ. ಸಮರ್ಥರ ಪ್ರತಿಜ್ಞೆಯನ್ನು ಕೇಳಿರಿ. ದಾಸಬೋಧದ ದಶಕ ೧೨, ಸಮಾಸ ೧೦, ೩೪ನೆಯ ಶ್ಲೋಕವು ಬೋಧಿಸಿದಂತೆ ಅವರ ಆಚರಣೆ

ಇತ್ತು. ಶಿಷ್ಯರಿಂದ ಏನೂ ಬೇಡಬಾರದು, ತಮ್ಮ ತರುವಾಯ ಜಗದೀಶನನ್ನೇ ಭಜಿಸಬೇಕೆಂದು ಅವರ ಆದೇಶವು ಇತ್ತು. ಆದ್ದರಿಂದ ಶಿಷ್ಯರ ಸಂಖ್ಯೆಯು ಬಹಳಷ್ಟು ಬೆಳೆಯಿತು. ಅಖಂಡ ನಾಮಸ್ಮರಣೆ ನಡೆಯಿತು. ತೋರಿಕೆಯ ಭಕ್ತಿಗೆ ಆತ್ಮಜ್ಞಾನವಾಗುವದು ಸಾಧ್ಯವಿಲ್ಲ. ಸಭೆಯಲ್ಲಿ ವೃದ್ಧರು, ತರುಣರು, ಬಾಲಕರು, ಪುರುಷರು, ಸ್ತ್ರೀಯರು ಎಲ್ಲರೂ ಒಂದಾಗಿ ಭಗವನ್ನಾಮ ಗರ್ಜನೆ ಮಾಡುತ್ತಿದ್ದರು. ಸಭೆಯಲ್ಲಿ ಪಂಚಾಕ್ಷರಿ, ಷಡಕ್ಷರಿ, ತ್ರಯೋದಶಾಕ್ಷರಿ, ದ್ವಯಕ್ಷರಿ, ತ್ರಯಕ್ಷರಿ ಮತ್ತು ಚತುರಕ್ಷರಿಗಳೂ ಇರುತ್ತಿದ್ದರು. ಸಮರ್ಥರನ್ನು ನಿಂದಿಸುತ್ತಿದ್ದವರೂ ಸಹ ಅವರ ಅನುಭವವನ್ನು ಕೇಳಿ ಸಾಷ್ಟಾಂಗವೆರಗುತ್ತಿದ್ದರು. ತಮ್ಮ ಮಾರ್ಗವನ್ನು ಬಿಟ್ಟು ಉಪದೇಶ ಪಡೆಯಲು ಜನರು ಸಮರ್ಥರ ಕಡೆಗೆ ಧಾವಿಸುತ್ತಿದ್ದರು; ಮತ್ತು ಸತ್ಯದ ಅನುಭವವನ್ನು ಪಡೆದು ಆನಂದ ಪಡುತ್ತಿದ್ದರು.

ದೂರದೂರದಿಂದ ಜನರು ದರ್ಶನಕ್ಕಾಗಿ ಬಂದು ಹೋಗುವುದರಿಂದ ದೇಶದ ನಾಲ್ಕೂ ಕಡೆಗೆ ಅವರ ಕೀರ್ತಿ ಪಸರಿಸಿತು. ಅವರಲ್ಲಿ ಸಾತಾರಾದವರು ಕೆಲವರು, ಕೊಲ್ಹಾಪುರದವರು ಕೆಲವರು, ಧಾರವಾಡ, ಹುಬ್ಬಳ್ಳಿಯ ಜನರ ಸಂಖ್ಯೆ ಎಷ್ಟೆಂದು ವರ್ಣಿಸಲಿ? ಮುಂಬೈ, ಪುಣೆ, ರತ್ನಾಗಿರಿಯಲ್ಲಿಯೂ ಅವರ ಕೀರ್ತಿ ಹರಡಿತ್ತು. ಕೊಂಕಣದಿಂದಲೂ ಜನರು ದರ್ಶನಕ್ಕಾಗಿ ಬಂದು ಹೋಗುತ್ತಿದ್ದರು. ಜಮಖಂಡಿ ಅವರ ಮುಖ್ಯ ಸ್ಥಾನ. ಬುದ್ಧಿವಂತ ಬ್ರಾಹ್ಮಣರು, ಲಿಂಗಾಯತರು ಎಲ್ಲರೂ ಅನುಗ್ರಹೀತರಾಗಿದ್ದರು. ಅದರಂತೆ

ಸೊಲ್ಲಾಪುರ, ಅದಕ್ಕಿಂತ ಹೆಚ್ಚಾಗಿ ವಿಜಾಪುರದಲ್ಲಿ ಅನುಗ್ರಹೀತರಾದವರು ಇದ್ದಾರೆ. ಅದರಂತೆ ಜತ್ತ ಸಂಸ್ಥಾನ, ಅದಕ್ಕಿಂತ ಹೆಚ್ಚಾಗಿ ಚಿಮ್ಮಡದಲ್ಲಿ ಭಾವಿಕ ಭಕ್ತರು ಹೆಚ್ಚಾಗಿದ್ದಾರೆ. ಇಂಥ ಸ್ಥಳಗಳು ಇನ್ನೂ ಬೇಕಾದಷ್ಟಿವೆ. ನನ್ನಂಥವನಿಗೆ ಏನು ತಿಳಿಯುವುದು? ಸಮರ್ಥರ ಯಶಸ್ಸು, ಕೀರ್ತಿ ಎಲ್ಲೆಡೆಗೆ ಮೊಳಗಲಿಕ್ಕೆ ಕಾರಣವೇನು ಎಂಬುದನ್ನು ವಿಸ್ತಾರವಾಗಿ ಹೇಳುವೆನು. ಸಂತರಿಂದಲೇ ಸ್ವಾನುಭವದ ಗುರುತು ಸಿಗುವುದು. ಯಶಸ್ಸು, ಕೀರ್ತಿಯ ಪ್ರತಾಪ ಹೇಳುವೆನು, ಕೇಳಿರಿ. 'ಯ' ಎಂದರೆ ಇಹಲೋಕ, 'ಶ' ಎಂದರೆ ಆಸೆಯನ್ನು ಬಿಡು. ಇವರು ಇಂಥ ಸಮರ್ಥರೆಂದು ನೋಡಲಿಕ್ಕೆ ಜನರು ಬಂದು ಹೋಗುತ್ತಿದ್ದರು. ಕೀರ್ತಿ ಎಂದರೆ ಭಗವಂತನ ಕೀರ್ತಿಯನ್ನು ತಾವು ಸ್ವತಃ ಯಾವಾಗಲೂ ಗುಣಗಾನ ಮಾಡುತ್ತಿದ್ದರು ಹಾಗೂ ಎಲ್ಲರಿಂದಲೂ ಮಾಡಿಸುತ್ತಿದ್ದರು. ಭಗವಂತನ ಕೀರ್ತಿ ಮೊಳಗಿದರೆ ಸಾಧು ಕೀರ್ತಿ ಮೊಳಗಿದಂತೆಯೇ ಎಂದು ಬೇರೆ ಹೇಳಬೇಕಾಗಿಲ್ಲ. ಪ್ರತಾಪ ಎಂದರೆ ಪರತಾಪ ಎಂದರೆ ಜನತಾಪ. ಆ ತಾಪವನ್ನು ತಾನು ಸಹಿಸಿದರೆ ಪ್ರತಾಪ ಬರುವುದು, ಇಲ್ಲವಾದರೆ ಬರಲಾರದು. ಈ ರೀತಿಯ ಕೀರ್ತಿಯು ಸಮರ್ಥರದಿತ್ತು. ಅವರ ಉಪದೇಶ ಪಾಲನೆ ಮಾಡಿದರೆ, ಎಂಬತ್ನಾಲ್ಕು ಲಕ್ಷ ಯೋನಿಗಳಲ್ಲಿ ಹುಟ್ಟುವ ಭವಚಕ್ರವನ್ನು ನಿಲ್ಲಿಸಲುಬಹುದು. ತುಕಾರಾಮರ ದೃಷ್ಟಾಂತವಾಣಿಯನ್ನು ಕೇಳಿರಿ. "ನರಜನ್ಮಕ್ಕೆ ಬಂದು ಹರಿದಾಸನಾಗಬೇಕು; ಹರಿದಾಸರಾಗಿ ಗರ್ಭವಾಸ ತಪ್ಪಿಸಬೇಕು." ಇದರಂತೆ ಸಮರ್ಥರು ಗೃಹಸ್ಥಾಶ್ರಮ ವಹಿಸಿದ್ದರು. ಎಲ್ಲ ಕರ್ತವ್ಯವನ್ನು

ಮಾಡಿದರು. ಸಮರ್ಥರು ನರಜನ್ಮಕ್ಕೆ ಬಂದರು. ನಿಜವಾದ ಬ್ರಾಹ್ಮಣನನ್ನು ಗುರುವೆಂದು ಮನ್ನಿಸಿದರು. ಇನ್ನು ಬ್ರಾಹ್ಮಣನೆಂದು ಯಾರಿಗೆ ಕರೆಯಬೇಕು? ಕೇಳಿರಿ. ಬ್ರಹ್ಮನನ್ನು ತಿಳಿದವ ಬ್ರಾಹ್ಮಣ. ಈ ರಹಸ್ಯವನ್ನು ಸಾಧು-ಸಂತರು ತಿಳಿದಿರುತ್ತಾರೆ. ಇತರರು ಇದನ್ನು ಹೇಗೆ ತಿಳಿಯಬಲ್ಲರು? ಕಣ್ಣಿಗೆ ಅಂಜನವನ್ನು ಹಚ್ಚಿಕೊಂಡವರಿಗೇ ಗುಪ್ತ ಧನವು ಎಲ್ಲಿದೆ ಎಂಬುದು ಗೊತ್ತಾಗುತ್ತದೆ. ನಿಂದಕನು ಕೂಡ ಶರಣು ಬಂದರೂ ಅವನಿಗೆ ಮಹಾರಾಜರು ಅನುಗ್ರಹ ಮಾಡುತ್ತಿದ್ದರು. ಗುಹ್ಯಾರ್ಥವನ್ನು ಬೋಧಿಸಿ, ಅವನನ್ನು ಸನ್ಮಾರ್ಗಕ್ಕೆ ಹಚ್ಚಿ, ಭವಚಕ್ರದಿಂದ ದೂರಮಾಡಿ, ಯಮನಗರವು ಅವನಿಗೆ ಕಾಣದಂತೆ ಮಾಡುತ್ತಿದ್ದರು. ತಾವು ಮುಕ್ತರಾಗಿ ಇತರರನ್ನೂ ಬಂಧನದಿಂದ ಪಾರುಮಾಡುತ್ತಿದ್ದರು. ಇಂಥ ಸಾಧುಗಳು ಧನ್ಯರು. ಜ್ಯೋತಿಯೊಡನೆ ಜ್ಯೋತಿ ಬೆರೆತುಹೋಗುವಂತೆ ಬ್ರಹ್ಮಪದದಲ್ಲಿ ಐಕ್ಯ ಹೊಂದುತ್ತಾರೆ. ಆಗ ಶರೀರವು ಭೂಮಿಯ ಮೇಲೆ ಬಿದ್ದು ಹೋಗುತ್ತದೆ. ಹೇಗೆ ಆತ್ಮಜ್ಞಾನವು ಜೀರ್ಣವಾಗುತ್ತದೋ ಹಾಗೇ ಅದರ ಮಾರ್ಗಗಳೂ ಜೀರ್ಣವಾಗುವವು. ಆದ್ದರಿಂದ "ಸಂಭವಾಮಿ ಯುಗೇ ಯುಗೇ" ಎನ್ನುವಂತೆ, ಹೊಸ ಹೊಸ ಅವತಾರಗಳು ಆಗುತ್ತವೆ. ನಿಂದಕನು ಪುಣ್ಯವಂತನಿದ್ದರೂ ಯಮನ ಬಾಧೆಯನ್ನು ತಪ್ಪಿಸಿಕೊಳ್ಳಲಾರ, ಎಂಬುದನ್ನು ಆಧಾರಸಹಿತವಾಗಿ ಹೇಳುತ್ತೇನೆ. ಈ ಮಾರ್ಗಗಳಿಂದ ನಡೆದವರು ಜನನ ಮರಣಗಳಿಂದ ಮುಕ್ತರಾದರು. ಸಾಮಾನ್ಯೇತರರೆಲ್ಲಾ ನಿಂದಿಸಿ ನಿಂದಿಸಿ ಭವದಲ್ಲಿ ಮುಳುಗಿದರು. ನಿಂದಕರ ವಿಷಯವನ್ನು ಈ ರೀತಿ ಹೇಳಬಾರದು.

ಆದರೂ ಸತ್ಯಾನ್ವೇಷಣೆಗಾಗಿ ಅವರ ಸಲುವಾಗಿ ಹೇಳಬೇಕಾಯಿತು. ಕೋಣವು ವೇದವನ್ನು ನುಡಿಯಿತು; ಗೋಡೆಯು ಚಲಿಸಿತು. ಇದು ಜ್ಞಾನದೇವನ ಮಹಿಮೆಯಿಂದ. ಈಗ ಇದರ ಮಹಿಮೆಯನ್ನು ಲಕ್ಷಕೊಟ್ಟು ಕೇಳಿ ತಿಳಿದುಕೊಳ್ಳಿರಿ. ಕೋಣ ಎಂಬ ಅಜ್ಞಾನಿಗಳಿಂದ ವೇದಪಠಣ ಮಾಡಿಸಿ ಶಬ್ದಜ್ಞಾನಿಗಳು ನಾಚಿಕೆಯಿಂದ ತಲೆತಗ್ಗಿಸುವಂತೆ ಮಾಡಿಸಿದರು. ಭಕ್ತಿಮಾರ್ಗದ ಕಡೆ ಅವರನ್ನು ಎಳೆದರು. 'ಭಿ' ಎಂದರೆ ಭೀತಿ. ಜಗತ್ತಿನಲ್ಲಿ ತ್ರಿಗುಣದ ಭೀತಿ ಯಾವಾಗಲೂ ಇರುತ್ತದೆ. 'ಮಹಿ' ಎಂದರೆ ಭೂಮಿಯ ಮೇಲೆ ತ್ರಿಗುಣಗಳು ಹೆದರಿಹೋದವು. ಆತನ ಅಂತರಂಗದಲ್ಲಿ ಮಹಿಮೆಯು ಹೆಚ್ಚಾದ ಕೂಡಲೇ, ಅವನು ಜ್ಞಾನದೇವನೇ ಸರಿ. ಕಣ್ಣಿನ ಎದುರಿಗೆ ವಸ್ತು ಕಂಡೊಡೆ ಅವನು ಸಾಕ್ಷಾತ್ ದೇವನೇ ಆಗಿ ಜಗತ್ತಿನಲ್ಲಿ ಜ್ಞಾನದೇವನಾದನು. ಗುಹ್ಯವನ್ನು ಪ್ರಕಟಿಸಿದನು. ವಿಶ್ವದ ಜನರನ್ನು ಬ್ರಹ್ಮನನ್ನಾಗಿ ಮಾಡಿದ ಆತನು ನಿಜವಾಗಿಯೂ ಧನ್ಯನು. ಇನ್ನು ಹಂಸ, ಪರಮಹಂಸರೆಂದರೆ ಯಾರು? ಇವರ ಲಕ್ಷಣಗಳನ್ನು ನಿರೂಪಿಸುವೆನು, ಕೇಳಿರಿ. ಹಂಸ ಎಂದರೆ ಪ್ರಪಂಚದಲ್ಲಿ ಉತ್ಸಾಹದಿಂದ ಇದ್ದು ಪರಮಾರ್ಥ ಮಾಡುವವರು ಅಂತರ್ಯದಲ್ಲಿ ಮುಕ್ತರು. ಪ್ರವೃತ್ತಿ ಮಾರ್ಗದಲ್ಲಿದ್ದರೂ ಮುಕ್ತರಾಗಿ, ಸಾಧಕ ಸಮುದಾಯವನ್ನು ಬೆಳೆಸಿ, ಅವರನ್ನು ಮುಕ್ತರನ್ನಾಗಿ ಮಾಡುತ್ತಾರೆ. ಮೇಲೆ ತೂರಿ ಆಡಿಸುವಂಥ ಮಗುವಿಗೆ, ತಂದೆಯ ಆಧಾರವಿರುವಂತೆ, ಹಂಸರು ಸಂಸಾರದಲ್ಲಿ ಇದ್ದು, ದೇವರನ್ನು ಆಶ್ರಯಿಸುವರು. ಪರಮಹಂಸರು ಎಂದರೆ ನಿವೃತ್ತಿ ಮಾರ್ಗದಲ್ಲಿದ್ದು

ಪರಮಾರ್ಥ ಸಾಧಿಸಿ, ಅನನ್ಯ ಭಕ್ತರಿಗೆ ಉಪದೇಶಿಸುವರು. ಹೀಗಾಗಿ ಹಂಸ ಪರಮಹಂಸರಲ್ಲಿಯ ಸೂಕ್ಷ್ಮ ಭೇದವು ಸಹಜವಾಗಿ ತಿಳಿಯುವುದಿಲ್ಲ. ಇಬ್ಬರಿಗೂ ಪದವಿ ಒಂದೇ. ಇನ್ನು ಮುಕ್ತಿಯ ಲಕ್ಷಣವನ್ನು ಹೇಳುವೆ. ಸಾವಧಾನದಿಂದ ಕೇಳಿರಿ. ಗುರುವಿನ ಅನುಗ್ರಹವಿಲ್ಲದೆ ಮುಕ್ತಿಯು ದೊರೆಯದು ಎಂದು ಸಿದ್ಧಾಂತ ಹೇಳುತ್ತದೆ. ಈಗ ನಾಮಧಾರಕನನ್ನು ಕುರಿತು ಹೇಳುತ್ತೇನೆ. ನಾಮಧಾರಕ ಹಾಗೂ ನಿತ್ಯಸಾಧನೆಮಾಡುವವರಿಬ್ಬರೂ ಗುರುರ್ವಚನದಲ್ಲಿ ಶ್ರದ್ಧೆಯನ್ನಿಟ್ಟು ಸದಾಚಾರದಿಂದ ಶೋಭಿಸುತ್ತ ಮುಕ್ತಿಯನ್ನು ಪಡೆಯುತ್ತಾರೆ. ವಾಸನೆಗಳು ಇಲ್ಲದಂತಾಗುವುದೇ ಮುಕ್ತಿ ಎಂದು ಎಲ್ಲರೂ ಹೇಳುತ್ತಾರೆ. ಆದರೆ ಇಂಥ ನಾಮಧಾರಕನ ಸ್ಥಿತಿಯು ಬೇರೆಯಾಗಿದೆ. ಯಾವ ಕ್ಷಣದಲ್ಲಿ ಗುರುವಿನ ಅನುಗ್ರಹವಾಗುವುದೋ ಆ ಕ್ಷಣವೇ ಮುಕ್ತಿ ಸಿಗುತ್ತದೆ. ಆತ್ಮಕ್ಕೆ ಬಂಧನವೇ ಇಲ್ಲ. ಅಭ್ಯಾಸ ಬಲದಿಂದ ಆತ್ಮದರ್ಶನ ಪಡೆದು ನಾನೇ ಆತ್ಮಾ ಎಂಬುವ ಅನುಭವ ಮಾಡಿಕೊಂಡು, ವಿಶ್ವವೇ ಬ್ರಹ್ಮವೆಂದು ಬಲ್ಲವರು ಮಾತ್ರ ಜೀವನ್ಮುಕ್ತರಾಗುತ್ತಾರೆ. ಮುಕ್ತಿ ಮತ್ತು ಜೀವನ್ಮುಕ್ತಿ ಇವುಗಳಲ್ಲಿ ಮಹದಂತರವಿದೆ. ಆದ್ದರಿಂದ ಅಭ್ಯಾಸ ಬಲದಿಂದ ಸ್ವರೂಪದರ್ಶನದ ಅನುಭವ ಪಡೆಯಬೇಕು. ಇದೇ ದೇಹದಲ್ಲಿ, ಇದೇ ಕಣ್ಣಿನಿಂದ ಮುಕ್ತಿಯ ಆನಂದವನ್ನು ಸವಿಯಬೇಕು. ಆದರೆ ಸ್ವರೂಪದರ್ಶನವು ಇಲ್ಲದ ಸಾಧಕನ ಜೀವನ ವ್ಯರ್ಥ. ನಮಗೆ ಸಾಧನೆ ಬೇಡ, ಕೇವಲ ನಾಮದಿಂದಲೇ ಮುಕ್ತಿ ಪಡೆದರೆ ಸಾಕು, ಎಂದು ಮನಸ್ಸಿನಲ್ಲಿ ದೃಢ ನಿರ್ಧಾರ ಮಾಡಿ ಸಾಧನೆಯನ್ನು

ತಪ್ಪಿಸುತ್ತಾರೆ. ಸಾಧನೆಯ ಹೊರತು ಪ್ರಪಂಚದ ಭೀತಿ ಹೋಗಲಾರದು. ಕಾಮಕ್ರೋಧಗಳನ್ನು ಜಯಿಸಲಾಗದು. ವರ್ಣನಾತೀತವಾದ ಆನಂದ ಸಿಗಲಾರದು. ಸಾಧನೆ ಇಲ್ಲದೆ ವಿಷಯಜಾಲದಲ್ಲಿ ತಾತ್ಕಾಲಿಕವಾಗಿ ಸಿಕ್ಕು ಬೀಳುತ್ತಾನೆ. ಅವನಿಗೆ ಅಭ್ಯಾಸಬಲದಿಂದ ವಾಸನೆಗಳನ್ನು ಸಮೂಲವಾಗಿ ತೆಗೆಯಬೇಕಾಗುವುದು. ಯಾವ ನಾಮಧಾರಕನು ಆಚಾರಭ್ರಷ್ಟನೋ, ಅವನು ಯೋಗಭ್ರಷ್ಟನೆಂದೂ, ಅವನಿಗೆ ಮುಕ್ತಿ ಸಿಗಲಾರದೆಂದೂ, ಗುರುವಚನ ಸ್ಪಷ್ಟವಾಗಿ ಹೇಳುತ್ತದೆ. ಗುರುವಿಗೆ ಪುನಃ ಶರಣು ಹೋಗಿ ಮುಕ್ತಿ ಪಡೆಯಬೇಕು, ಗುರುವಿನ ಅನುಗ್ರಹವಾಗದಿದ್ದರೆ ಪುನಃ ಸಂಸಾರಕ್ಕೆ ಹುಟ್ಟಿ ಬರಬೇಕಾಗುವುದು. ಯೋಗಭ್ರಷ್ಟನು ಮಾನವ ಕುಲದಲ್ಲೇ ಹುಟ್ಟುತ್ತಾನೆ. ಆದರೂ ಎಂಬತ್ನಾಲ್ಕು ಲಕ್ಷ ಯೋನಿಗಳಲ್ಲಿ ಹುಟ್ಟುವುದು ತಪ್ಪುವದು; ಹೇಗೆಂದರೆ ಮಾನವನಾಗಿ ಹುಟ್ಟಿದಮೇಲೆ ಬೇಗನೆ ಜ್ಞಾನಮಾರ್ಗ ಹಿಡಿದು ಪ್ರಯತ್ನಮಾಡಿ ಮೋಕ್ಷ ಪಡೆಯಬಹುದು. ಈ ವಿಷಯದಲ್ಲಿ ಸದ್ಗುರುವಚನ ಒಂದೇ ಪ್ರಮಾಣವು. ಗ್ರಂಥಗಳಿಗಿಂತ ಗುರುವಚನದಲ್ಲಿ ಹೆಚ್ಚು ನಿಷ್ಠೆ ಇಡಬೇಕು. ಸಂಶಯದಿಂದ ಅರ್ಥಕ್ಕೆ ಅನರ್ಥವಾದರೆ ಗ್ರಂಥವೇನು ಮಾಡಬಲ್ಲದು? "ಮಾತಾಪಿತೃಗಳನ್ನು (ಜೀವಂತ) ಕೊಂದು ಹಾಕಬೇಕು; ಹೆಂಡತಿಯ (ಬಾಯಕೋ) ಚರಣಗಳಿಗೆ ನಮಸ್ಕರಿಸಬೇಕು", ಎಂಬ ಅಭಂಗ ಅನರ್ಥವನ್ನು ಉಂಟುಮಾಡುತ್ತದೆ. ಆದರೆ ಅನರ್ಥದಲ್ಲಿಯೂ ಅರ್ಥವಿದೆ. ಶಬ್ದಾರ್ಥವನ್ನು ಎಲ್ಲರೂ ಬಲ್ಲರು. ನಿಜವಾಗಿ ಗುಟ್ಟಾಗಿರುವ ಅರ್ಥವನ್ನು ಆತ್ಮಜ್ಞಾನಿಗಳು ಮಾತ್ರ ಬಲ್ಲರು. ಅದರ

ಅರ್ಥವನ್ನು ಈಗ ತಿಳಿಯೋಣ. ತಿಳಿಯುತ್ತ ಹೋದಂತೆ ಹೆಚ್ಚು ಹೆಚ್ಚು ತಿಳಿಯುತ್ತದೆ. ಶೋಧನೆ ಮಾಡುತ್ತ ಹೋದಂತೆ ಹೆಚ್ಚಿನ ಶೋಧವಾಗುತ್ತದೆ. ಆಳವನ್ನು ಹೊಕ್ಕು ನೋಡಿದಾಗ ಗುಹ್ಯಾರ್ಥವು ತಿಳಿಯುತ್ತದೆ. ಮಾತಾ ಎಂದರೆ ಹರಿಮಾಯೆ. ಪಿತಾ ಎಂದರೆ ಅಹಂಕಾರ. ಆತ್ಮಬೋಧ ಎಂಬ ಶಸ್ತ್ರದಿಂದ ಇಬ್ಬರನ್ನೂ ಜೀವಂತ ಕೊಲ್ಲಬೇಕು. "ಬಾ" ಎಂದರೆ ಸಂಬೋಧನೆ. 'ಏಕ' ಎಂದರೆ ವಸ್ತುರೂಪ. ದರ್ಶನವಾದ ಕೂಡಲೇ ಆದರ ಚರಣ ವಂದಿಸಬೇಕು ಎಂಬುದು ಗುಹ್ಯಾರ್ಥ. ಆತ್ಮವು ಹೇಗಿದೆ? ಯಾವುದರಿಂದ ಆತ್ಮಜ್ಞಾನವಾಗುವುದು, ಅದನ್ನು ಹೇಳುವೆನು. ಆತ್ಮವು ದ್ರಷ್ಟವ್ಯ, ಶ್ರೋತವ್ಯ, ಮಂತವ್ಯ, ನಿದಿಧ್ಯಾಸಿತವ್ಯ ಇರುವುದು. ಆತ್ಮವನ್ನು ಆತ್ಮವು ಕಣ್ಣಿನಿಂದ ಕಂಡುಕೊಂಡು, ಕಿವಿಯಿಂದ ಕೇಳಿ, ಮನಸ್ಸನ್ನು ಮಥಿಸಿ ಎಂದರೆ ವಿಚಾರಮಾಡಿ, ಧ್ಯಾನಿಸಿ (ಸಾಧನೆ ಮಾಡಿ) ಕಂಡುಕೊಳ್ಳಬಹುದು. ಆಗ ಅದು ಇತರ ಜೀವಿಗಳಲ್ಲಿಯೂ, ಮನಸ್ಸಿನಲ್ಲಿಯೂ ಯಾವಾಗಲೂ ಕಾಣುವುದು. ಎಂದರೆ ಧ್ಯಾನ ಮಾಡುತ್ತ ಸ್ವರೂಪವನ್ನು (ತಿಳಿಯಬೇಕು) ಕಂಡುಕೊಳ್ಳಬೇಕು. ಧ್ಯಾನ ಮಾಡಿ ರೂಪವನ್ನು ಕಂಡುಕೊಳ್ಳಬೇಕು. ಮೂಲವನ್ನು ನೋಡಿದರೆ ಜನ್ಮ ಇಲ್ಲಾ, ಹೀಗೆ ಮನದಲ್ಲಿ ಆಶೆಯನ್ನು ಇಟ್ಟುಕೊಂಡಿರಬೇಕು. ॥ ಶ್ಲೋಕ ॥ ನಭಾಸಾರಿಖೇ ರೂಪ ಯಾ ರಾಘವಾಚೇ। ಮನೀ ಚಿಂತಿತಾ ಮೂಳ ತೂಟೇ ಭವಾಚೇ। "ಭಗವಂತನ (ರಾಘವನ) ರೂಪವು ಆಕಾಶದಂತೆ ವ್ಯಾಪಕವಿದೆ. ಅವನ ಸ್ಮರಣೆ ಮಾಡಿದರೆ ಭವದ ಬೇರು ಬಿಟ್ಟುಹೋಗುವುದು."

ಐದು ಸಮಾಸಗಳು

ಕಬೀರನ ವಚನವು ಇದಕ್ಕೂ ಸುಲಭವಿದೆ. ಮೂಢರಿಗೆ ಅದು ಕಷ್ಟವಾಗಿ ಕಾಣಬಹುದು. ಶ್ರೋತೃಗಳು ಮನಸ್ಸು ಕೊಟ್ಟು ಕೇಳಿರಿ. ॥ ವಚನ ॥ ದೇಖೋ ತೋ ಖಿಸಖಿಸ, ಮುರೀದ ಮರೆ ತೋ ಬಸಬಸ. "ಖಿಸಖಿಸಿಯಷ್ಟು ಆತ್ಮಸಾಕ್ಷಾತ್ಕಾರವಾದರೂ ಶಿಷ್ಯನು ಪುನರ್ಜನ್ಮ ಹೊಂದಲಾರ." ಕನ್ನಡದಲ್ಲಿ ಕೂಡ ಇದೇ ಅರ್ಥವುಳ್ಳ ಶ್ಲೋಕ ಸಾಧಕರಿಗೆ ಸುಲಭವಾಗಿ ಹೇಳಿದೆ. "ಕುರುಹು ಕಂಡರೆ ಮರಳಿ ಭವಕ್ಕೆ ಬರಲಾರಿ." ಇಷ್ಟು ಪ್ರಮಾಣಗಳಿದ್ದರೂ ಜನರು ನಂಬುವುದಿಲ್ಲ. ಆದ್ದರಿಂದ ಸಂತರಿಗೆ ಇದು ಆಶ್ಚರ್ಯವೆನಿಸುತ್ತದೆ. ಸತ್ಯಮಾರ್ಗವನ್ನು ಹಿಡಿ, ಅಸತ್ಯ ಮಾರ್ಗವನ್ನು ಬಿಡು. ಭಗವದ್ಭಜನೆ ಮಾಡಿ ನಿನ್ನ ಕೀರ್ತಿಯನ್ನು ಉಳಿಸು. ಸಾಂಪ್ರದಾಯಕ್ಕೆ ಗೌರವ ಸಲ್ಲಿಸಿ ಜ್ಞಾನಮಾರ್ಗ ಹೇಳಿದ್ದಾಯಿತು. ಅಜ್ಞಾನಿಯಾದ ಈ ಬಾಲಕನನ್ನು ಕ್ಷಮೆ ಮಾಡಿರಿ. ಅಥವ ಕ್ಷಮೆ ಬೇಡುವ ಅಗತ್ಯವಿಲ್ಲ. ಯಾಕೆಂದರೆ ಸಮರ್ಥರ ಕೃಪೆಯಿಂ. ಬರೆದದ್ದಾಯಿತು. ನಾನು ಸಮರ್ಥರ ಕೈಯಲ್ಲಿಯ ಲೆಕ್ಕಣಿಕೆ ಮಾತ್ರ. ಅವರ ಪ್ರೇರಣೆಯಿಂದ ಲೇಖನಿ ಓಡುತ್ತದೆ. ತಿಲಮಾತ್ರವೂ ನನ್ನಲ್ಲಿ ದೋಷವಿಲ್ಲ. ಬೇಕಾದದ್ದನ್ನು ಕೊಡುವ ಸದ್ಗುರುವೇ ಗ್ರಂಥಕರ್ತನು. ಗಣಪತಿ ಹೆಸರಿನ ನಾನು ಅಜ್ಞಾನಿಯು, ದಾಸಾನುದಾಸನು. ಹೀಗೆ ಜ್ಞಾನನಿರೂಪಣೆಯೆಂಬ ಐದನೆಯ ಸಮಾಸವು ಮುಗಿಯಿತು. ಪುಂಡಲೀಕ ವರದ ಹರಿವಿಠ್ಠಲ.

ಜಯಜಯಜಯ ಭಾವೂರಾವ ರಾಜಸದ್ಗುರು। ಪದಕಮಲೀ ನಮಿತ ಅಸೇ ದಾಸ ಶ್ರೀಗುರು ॥ ಧೃ ॥ ಕವಿ ಗಣಪತಿ ರಚಿತ ಗ್ರಂಥ ಯೇಥ ಪಾತಲಾ।

ಮಂದಮತಿ ಪರಿ ಮಜಸೀ ಮಾನ ಹಾ ದಿಲಾ। ತ್ವಾಂ ದಿಧಲ್ಯಾ ಬುದ್ಧೀನೇ ಮ್ಯಾಹಿ ಪಾಹಿಲಾ। ಶುದ್ಧಾಶುದ್ಧೀ। ಬುದ್ಧೀ। ಪರಿ ಕರೂನಿ। ಕರಿ ಲಿಹುನೀ। ಪದಿ ನಮುನೀ। ಧಾಡಿ ಪಾಮರೂ। ಜಯಜಯ ॥ ೧ ॥ ಫೇರಫಾರ ಗುರ್ವಾಜ್ಞೇ ಅಲ್ಪ ಜಾಹಲಾ। ಶಬ್ದಾನ್ವಯ ಜನಧಾಟೀ ಕಾಹೀ ಘಾತಲಾ। ಮಮ ಶಿರೀ ತವ ಛತ್ರಕೃಪಾ ಮ್ಹಣುನಿ ಸಂಪಲಾ। ಭಕ್ತಿ। ಉಕ್ತಿ। ಯುಕ್ತಿ। ಮಜಜವಳೀ। ನಾಹಿ ಮುಳೀ। ಭವಜಾಳೀ। ಬುಡತ ಶ್ರೀಗುರು। ಜಯಜಯ ॥ ೨ ॥ ಜಠರಾನಳಕಾಜೇ ಯಾ ದಿವಸ ಲಾಗಲೇ। ಮ್ಹಣುನಿ ಕ್ಷಮಾ ಮಾಗಾಯಾ ಪದ್ಯ ನಿರ್ಮಿಲೇ। ಪದ್ಯ-ಪುಷ್ಪ-ಚರಣಾಂಬುಜಿ ಆಜಿ ವಾಹಿಲೇ। ಕಾಂಠೀ। ವಾಠೀ। ಸಾಠೀ। ಮದ್ಭೀತಿ। ಸೌಖ್ಯತತೀ। ಮಾಗೇ ಅತಿ। ಕಂಚನದಿಕರೂ। ಜಯಜಯ ॥ ೩ ॥

ಭಾವಾರ್ಥ: ಸದ್ಗುರು ರಾಜವರ್ಯ ಭಾವೂರಾಯರಿಗೆ ಜಯವಾಗಲಿ. ದಾಸನಾದ ನಾನು ಅವರ ಪಾದಕಮಲಕ್ಕೆ ಎರಗುವೆನು. ಗಣಪತಿ ಕವಿಯು ರಚಿಸಿದ ಪಂಚಸಮಾಸಿ ಎಂಬ ಚಿಕ್ಕ ಹೊತ್ತಿಗೆಯು ತಲುಪಿತು. ಅದನ್ನು ಓದಿ ಸಲಹೆಸೂಚನೆಗಳನ್ನು ಮಾಡಲು ಆಜ್ಞಾಪಿಸಿ ಸದ್ಗುರುಗಳು ಮಂದಮತಿಯಾದ ನನ್ನನ್ನು ಕೃತಾರ್ಥರನ್ನಾಗಿ ಮಾಡಿದರು. ಅವರೇ ದಯಪಾಲಿಸಿದ ಬುದ್ಧಿಯ ಮೇರೆಗೆ ಸದ್ಗುರುವನ್ನು ಸ್ಮರಿಸಿ, ಹೊತ್ತಿಗೆಯನ್ನು ಪರಿಶೀಲಿಸಿ ನನಗೆ ತಿಳಿದಂತೆ ತಿದ್ದುಪಡೆಮಾಡಿ ಅವರಿಗೆ ಕಳಿಸಿದೆನು. ಅವರ ಅಪ್ಪಣೆಯಂತೆ ಬರಹದಲ್ಲಿ ಅಲ್ಪಸ್ವಲ್ಪ ಬದಲು ಮಾಡಿದೆ. ಶಬ್ದಾನ್ವಯ ಆಡುಮಾತಿನ ಶೈಲಿ, ಇವನ್ನು



ಶ್ರೀ ಅಂಬುರಾವ ಮಹಾರಾಜ ಇಂಚಗೇರಿ, ಜಿ. ವಿಜಾಪೂರ

ಜನ್ಮ : ಜಿಗಜನ್ನಿ
ಕ್ರಿ.ಶ.೧೮೫೭

ಸಮಾಧಿ : ಇಂಚಗೇರಿ
ಕ್ರಿ.ಶ. ೨೨-೧೨-೧೯೩೩
ಪುಷ್ಯ ಶುದ್ಧ ಷಷ್ಠಿ, ಶುಕ್ರವಾರ

ಕೆಲವೆಡೆಯಲ್ಲಿ ಹಾಕಿದೆ. ಸದ್ಗುರುಗಳ ಕೃಪಾಪ್ರಸಾದವಿದ್ದುದರಿಂದಲೇ ಒಪ್ಪಿಸಿದ ಕಾರ್ಯವನ್ನು ಕೊನೆಗಾಣಿಸಿದೆ. ನನ್ನಲ್ಲಿ ಭಕ್ತಿ-ಯುಕ್ತಿ-ಉಚಿತೋಕ್ತಿ ಇವು ಯಾವವೂ ಇಲ್ಲ. ಸಂಸಾರ ಸಾಗರದಲ್ಲಿ ಮುಳುಗಿರುವೆ. ಹಗಲಿರುಳೂ ಹೊಟ್ಟೆಯ ಚಿಂತೆಯೇ ನನಗೆ. ಆದ್ದರಿಂದಲೇ ಕ್ಷಮೆ ಯಾಚಿಸಲು ಈ ಪದ್ಯ ರಚಿಸಿರುವೆ. ಈ ಪದ್ಯಪುಷ್ಪವನ್ನು ಇಂದು ಗುರುಚರಣಾರವಿಂದದಲ್ಲಿ ಅರ್ಪಿಸಿದೆ. ಭವಭೀತಿ ನಷ್ಟವಾಗಿ ಆತ್ಯಂತಿಕ ಸುಖವು ನನಗೆ ಲಭಿಸಲಿ ಎಂದು ಅವರಿಗೆ ಬೇಡುವೆ. ಅವರಿಗೆ ಚಿರಕಾಲ ಜಯವಾಗಲಿ ಎಂದು ಪಂಚನದೀಕರರು ಹೇಳುತ್ತಾರೆ.

## ಆರನೆಯ ಸಮಾಸ
## ಶ್ರೀ ಸಮರ್ಥ ಅಂಬೂರಾವಮಹಾರಾಜರ ಚರಿತಾಮೃತ

ಓಂ ನಮೋ ಸದ್ಗುರುವರಾ। ಆತ್ಮತೇಜದ ಆಕರಾ।
ಸುಮನ ಮಮ ವಿಕಸನ ಮಾಡಿ। ಆತ್ಮರೂಪ ಪ್ರಭಾಕರಾ ॥ ೧ ॥

ದಿವ್ಯ ಉಮದೀಶ್ವರನ್[1] ಶಿಷ್ಯರ। ಗಣದಲಂಬೂರಾಯನು।
ಭವ್ಯ ಉಡುಗಣ ಮಧ್ಯದಲ್ಲಿಯ। ತಿಂಗಳೊಲು ತಾ ಮೆರೆವನು ॥ ೨ ॥

ಮರುಳ ವೇಷವ ತಳೆವನಾದರು। ಒಳಗೆ ಆತ್ಮನ ಕಳೆಯನು।
ಪರಮ ಭಕುತಿಯ ಸೆಳೆಯನೆದೆಯೊಳು। ಸತತ ತಾನಿರಿಸಿರುವನು ॥ ೩ ॥

---

೧. ಶ್ರೀ ಭಾವೂಸಾಹೇಬ ಮಹಾರಾಜರು.

ಗುರುವೆ ಹರಿಯೆಂದರಿತಿಡುವ ಗುರು। ಚರಣದಲಿ ವರಭಾವವ।
ಗುರುವಿಗೊಪ್ಪಿಸೆಯೆಲ್ಲವನು ತಾ। ನಿತ್ಯ ಆವನಲಿ ಬೆರೆಯುವಾ ॥ ೪ ॥

ಮತಿಯು ಅತಿಹರತಾದುದಿರುವುದು। ನೀತಿ ನಿಯಮವು ಕಟುತರ।
ಆತುಮನ ಅನುಭಾವವವನಿಗೆ। ದೊರೆತಿಹುದು ಅದ್ಭುತತರ ॥ ೫ ॥

ಕೃಪೆಯ ಸಾಗರನಿರುತಿರುವನವ। ವಿಸಯ ಗುಣಕವನಾಗರ।
ಸ್ವಪ್ನದಲ್ಲಿಯು ಸೋಂಕದಾತಗೆ। ಎಂದಿಗೂ ಅತಿಹಂಕಾರ ॥ ೬ ॥

ಅಮಿತಪ್ರೀತಿಯ ಪುತ್ತಳಿಯನವ। ನಚಲನೇಮದ ಮೂರ್ತಿಯು।
ತುಮಲವವನಿಂ ಭಕ್ತಿಭಾವವ। ಭಾವಿಕರ ಎದೆಯಲ್ಲಿಯೂ ॥ ೭ ॥

ಅವನಡೆಸಿದ ಆತ್ಮಸಾಧನ। ಸಾವಕನ ಎಡೆಬಿಡದೆಯೇ।
ದೇವನುಳಿವವ ಕಳೆಯಲಿ। ಲ್ಲೆಂದೆಂದಿಗೂ ಅರಗಳಿಗೆಯೇ ॥ ೮ ॥

ಇವನೆ ನಮ್ಮಯ ಒಡೆಯ "ಬಾಬಾ"। ಎಂದವನ ಪ್ರಿಯನಾಮವು।
ಇವನ ತಪದಿಂ ಭಕುತಿ ಬೆಳೆಯಿತು। ಭಾವಿಕರ ಬಳಗದಲ್ಲಿಯೂ ॥ ೯ ॥

ತನ್ನ ಜನನದಿ ಜಗದಿ ಜಿಗಜಿನ್ನಿ[1]ಯನು ಸಂತತ ಮೆರೆಸಿಹ।
ತನ್ನ ವರಜೀವನದಿ ಕರಣಿಕ-। ಕುಲವ ಪಾವನಗೊಳಿಸಿಹ ॥ ೧೦ ॥

---

೧. ಹಳ್ಳಿಯ ಹೆಸರು.

## ಆರನೆಯ ಸಮಾಸ

ಹಿರಿಯ ಗುರುಗಳ[೨] ಭಕುತನಿರುತಿಹ। ಕಕ್ಕ ಬಾಪೂರಾಯನ।
ಆರಹುತಿರೆ ಗುರುನಾಥ ಅರ್ಥವ। ಬೋಧ[೩] ಓದುತಲಿರುವನು ॥ ೧೧ ॥

ನಿಂಬರಗಿಯಲಿ[೪] ಬಾಲರಾಯನು। “ನಿತ್ಯನಾಥನ”[೫] ಕಾಣುವ।
ತುಂಬ ಪ್ರೀತಿಸಿ ನಾಥರಾಯನು। ಅವಗೆ ಸಕ್ಕರೆ ನೀಡುವ ॥ ೧೨ ॥

ಕಾಣನೆಂದಿಗೆ ಸಕ್ರೀ ಮುತ್ಯನು[೬]। ಅಂದು ಶಿಕ್ಷೆಯು ಖಂಡಿತ।
ಕಾಣ್ಬನೆಂದಾ ಪುಣ್ಯಪುರುಷನು। ಅಂಮ ಶಿಕ್ಷಕ ಪ್ರಮುದಿತ ॥ ೧೩ ॥

ಅಂದವಾದೀ ಅನುಭವದಿ ಬೆಳೆ-।ದಿಹುದು ಬಾಲನ ಭಾವವು।
ಅಂದಿನಿಂದಲೇ ನಾಥರಾದರು। ಅಂಬುರಾಯನ ದೈವವು ॥ ೧೪ ॥

ಒಡನೆ ಮದುವೆಯು ಜರಗುತಲೆ ತಾ। ತರುಣ ಬಾಬಾ ಪ್ರಮುದಿತ।
ಮಡದಿಯೊಡನವನಿಂಬಗಿರಿಯಲಿ। ಇರುವ ಕರಣಿಕನಾಗುತ ॥ ೧೫ ॥

ನಾಥನೊಂದಾವರ್ತಿರಾಯನ। ಮನೆಯಲಿಯೆ ಬಂದಿಳಿದನು।
ಸಾಧನಕೆ ಇರುಳಲ್ಲಿ ಕುಳಿತನು। ರಾಯನಚ್ಚರಿಗೊಂಡನು ॥ ೧೬ ॥

---

೨. ನಿಂಬರಗಿ ಮಹಾರಾಜರು.

೩. ಶ್ರೀರಾಮದಾಸರ ದಾಸಬೋಧೆ ಎಂಬ ಗ್ರಂಥ.

೪. ಹಳ್ಳಿಯ ಹೆಸರು.

೫. ನಿಂಬರಗಿ ಮಹಾರಾಜರು.

೬. ನಿಂಬರಗಿ ಮಹಾರಾಜರು.

ಮೂರು ಸಲ ಕೇಳಿದನು ಆತಗೆ। ಕುಳಿತ ಕಾರಣ ರಾಯನು।
ಭಾರಿ "ಕೆಮ್ಮು" ಇನ್ನಾಯಿತಪ್ಪ। ಎಂದು ಬೆಳಗಲಿ ಹೊರಟನು ॥ ೧೭ ॥

ಕಳೆಯೆ ಕೆಲದಿನ ಇನಿತು ಬಂದಿತು। ಯಮನ ಕಡುತರ ಬಾಧೆಯು।
ಸೆಳೆದು ಒಯ್ದಿತು ಮಡದಿ ಮಗಳನು। ಕ್ರೂರ ಕಾಲನ ಪಾಶವು ॥ ೧೮ ॥

ಆಗಸದ ಕಡು ಕೊಡಲೆ ಬೀಳಲು। ಎದೆಯು ಗದಗದ ನಡುಗಿತು।
ಬಗೆಯು ಹರಿಯದೆ ಹೋಯ್ತು। ಬಾಳಲೀ ಚಂಡ ವಿಪ್ಲವ ಒದಗಿತು
॥ ೧೯ ॥

ಬೆಳೆದು ಬಗೆಯಲಿ ಬಲುವಿರಾಗವು। ಗಾಣಗಾಪುರ[1] ಸೇರಿಹ
ಕಳೆದುಪೋಷಣದಿಂದ ಕೆಲದಿನ। "ಗುರುಚರಿತ"[2]ವನು ಮುಗಿಸಿಹ
॥ ೨೦ ॥

ದತ್ತದರುಶನವಿತ್ತನವನಿಗೆ। ಸದ್ಗುರುಗಳನು ತೋರ್ದನು।
ಅತ್ತ ತೆರಳಲು ಪೇಳ್ದನಾತಗೆ। ರಾಯನಾಗ ಮರಳ್ದನು ॥ ೨೧ ॥

ನಿಂಬರಗಿಯಲಿ ಅಂದು ನೆರೆದಿತ್ತು। ಭೀಮರಾಯನ ಜಾತ್ರೆಯು।
ಅಂಬುರಾಯನ ಕಣ್ಗೆ ಬಿದ್ದಿತು। ಅಲ್ಲಿ ಸದ್ಗುರು ಮೂರ್ತಿಯು ॥ ೨೨ ॥

---

೧. ಶ್ರೀ ದತ್ತನ ಕ್ಷೇತ್ರ.

೨. ಒಂದು ಪವಿತ್ರ ಗ್ರಂಥ.

## ಆರನೆಯ ಸಮಾಸ

ದೇಗುಲೆದುರಿನ ವೇದಿಕೆಯನೇ। ರಿದ್ದನುಮದಿಯ ಈಶನು।
ಬೇಗ ನೋಡುತ 'ಸದ್ಗುರು'ಗಳಿವ।ರೆಂದು ಗುರುತಿಸಿದವರನು ॥ ೨೩ ॥

ಆದರವನದು ಸಭಯಗಾದರ। ವಾಯಿತಾಗಳ ಚಿತ್ತವು।
ಅದನರಿತ ಗುರುರಾಯ ಕರೆದವ। ಗಿತ್ತ ತುಸು ತಂಬಾಕವ ॥ ೨೪ ॥

ಭಯವು ಆದರಿಂದಳಿಯೆ ರಾಯನು। ಗುರುಗಳೆಡೆಯಲಿ ಕುಳಿತನು।
ನಯದಿ ತನ್ನಯ ಕರ್ಮಕಥೆ ಗುರು। ರಾಯಗೆಲ್ಲವ ಪೇಳ್ದನು ॥ ೨೫ ॥

ಆತ್ಮನಿಂದಲೆ ಸುಖವು ದೊರೆವುದು। ನಾಮದಿಂ ದೊರೆವಾತ್ಮನು।
"ಆತ್ಮ ನಾಮವ ಪಡೆಯೊ ಭಾವದಿ"। ಉಸುರಿದನು ಗುರುರಾಯನು
॥ ೨೬ ॥

"ಮರಳಿ ಬರುವೆನು" ಎಂದು ಹೇಳಿಯೆ। ಅಂಬುರಾಯನು ತೆರಳಿದ।
"ಭರದಿಯದು ಸಂಸಾರವಳಿಸುವ"ದೆಂದು। ನಾಮಕೆ ಹೆದರಿದ ॥ ೨೭ ॥

ಅರಿತು ರಾಯನ ಸುಪ್ತ ಶಕ್ತಿಯ। ನಾಮ ಕೊಡಲನುವಾದರು।
ಗುರುಗಳಾಗಲೆ ಶಿಷ್ಯರಿಂದಲೆ। ರಾಯನನು ಕರೆತಂದರು ॥ ೨೮ ॥

ಬಳಿಯಲಿಯೆ ಗುರು ಬಂಧು ಸಾವಳ। ಸಂಗರಾಯರು[೧] ಇದ್ದರು
ತಿಳಿಸಿದರು ನಾಮವನು ನೀಡಲು। ಅವರಿಗೆಯ ಗುರುರಾಯರು॥ ೨೯ ॥

---

೧. ಸಾವಳಸಂಗ ಭಾವೂರಾಯ.

ದೇವ ನಾಮವ ಕೇಳಿದೊಡನೆಯೆ। ಭಾವದಲಿ ಬದಲಾಗುತ।
ರಾಯನಾಸಾಗ್ರದಲಿ ನೋಡುತ। ನಡೆದ ಗುರುವಿನ ನೆನೆಯುತ ॥ ೩೦ ॥

ಇಂಚಗಿರಿಯಲಿ ಬಂದ ರಾಯನು। ನಿತ್ಯ ನೇಮವ ಮಾಳ್ಪನು।
ಮುಂಚಿನಂತೆಯೇ ನೆಟ್ಟನೋಟದಿ। ತಿಂಗಳೊಂದನು ಕಳೆದನು ॥ ೩೧ ॥

ಕಣ್ಣುನೋವಂದ್ದಣ್ಣು ಮಾಡಿತು। ಬೆಳಕು ರೂಪಗಳಗಣಿತ।
ಕಣ್ಣನೆದುರಲಿ ಸತತ। ಸುಳಿದವು ಮಂಕನವನನು ಮಾಡುತ ॥ ೩೨ ॥

ಒಡನೆ ಸಾವಳ-ಸಂಗದಲಿ ಗುರು।ರಾಯಗೆಲ್ಲವನರುಹಿದ।
"ಬಡವನೆನ್ನಯ। ಕಣ್ಣು ಕಳೆದವು ಮಾಡಲೇ"ನೆಂದುಸುರಿದ ॥ ೩೩ ॥

ಗುರುಗಳಾಗಲೆ ನಸುನಗುತ। ಶಿಷ್ಯರನು ಒಡನೆಯೆ ಕರೆದರು।
ಅರುಹಿ ಆತನ ಅನುಭವವ ಅನು। ಭವಪದಗಳೆನಿರೆಂದರು ॥ ೩೪ ॥

ಬೆಳಗಿನಲಿ ಬೇಗೆದ್ದು ನೇಮಕ। ಗುಡ್ಡದೆಡೆಯಲಿ ಸಾರುವ।
ಇಳಿಯೆ ನೇಸರ ಮನೆಗೆ ಮರಳುವ। ಇನಿತು ಕಡುತಪವ ಮಾಡುವ
॥ ೩೫ ॥

ನಿತ್ಯಸಾಧನದಿಂದ ಸಿದ್ಧಿಯ। ಗಳಿಸಿ ಚಿಂತೆಯನಳಿಸಿದ।
ಸತ್ಯ ಭಕುತಿಯ ಪಥವ ತುಳಿಯುತ। ಗುರುಗಳೊಲವನು ಗಳಿಸಿದ
॥ ೩೬ ॥

## ಆರನೆಯ ಸಮಾಸ

ಅಂದು ಹೊಲವೊಂದನ್ನು ರಾಯನು। ಅಳಿಯನಿಂದಲೆ ಪಡೆದಿಹ।
ಒಂದೆರಡು ಚೀಲ್ಗಾಳಿನಿಂದಲೆ। ತನ್ನ ಜೀವನ ನಡೆಸಿದ ॥ ೩೭ ॥

ಎರಡರೆಡೆಯಲಿ ಮೂರು ಬಂದವು। ಮೂರಣಾರಾಗಿರುತಿರೆ।
ತ್ವರಿತ ರಾಯನು ಚೀಲನೊಂದನು। ದೇವ ಕಾರ್ಯಕೆ ಇಡುತಿರೆ ॥ ೩೮ ॥

ತಣಿದ ಗುರುವರ ಕಂಡು ಅಂದನು। "ಆದೆ ಆಯುವ ಕೊಳ್ವನು।
ಇನಿತು ಏತಕೆ? ಒಕ್ಕಳಲಿ ನೀ। ಕೊಡುತಲಿರು ಒಮ್ಮನವನು" ॥ ೩೯ ॥

"ನಿನ್ನ ಮನದಲಿ ಮೊಳೆತ ಭಾವವ। ಪೇಳಲೇನ್ನೈ ಬೆಲೆಯನು?।
ಇನ್ನು ದೇವನು ಒಳ್ಳೆ ಬೆಳೆಯನು। ಈವನೆಂದನು" ಈಶನು[೧] ॥ ೪೦ ॥

ಆರು ತರುವಾಯದಲಿ ಆರೆರ-ಡಾಗಿ ಆರ್ಮೂರಾದವು।
ಆರು ಮೂವತ್ತಾಗಿ ಕೊನೆಯಲಿ। ದೇವ ವೈಭವ ಸಾರ್ದವು ॥ ೪೧ ॥

ದೇವಮಿತ ಕೈಯಿಂದ ಕೊಡುತಿರೆ। ಎನಿತೆರಡರಿಂ ಪಿಡಿವುದು?।
ದೇವ ಯೋಗಕ್ಷೇಮ ನೋಳ್ವನು। ಚಿಂತೆಯೇತಕೆ ಮಾಳ್ಪುದು ॥ ೪೨ ॥

ತೊರೆದ ಕೆಲಸವನಂಬುರಾಯನು। ಬರಿದೆಯೊಲಿಸಿದ ಪರಮನ।
ಬೆರೆತ ನಾಮದ ನೆನವಿನಲಿ। ನಿರುತ ಸೇವಿಸಿ ಗುರುವಿನ ॥ ೪೩ ॥

---

೧. ಉಮದೀಶ ಶ್ರೀ ಭಾವೂಸಾಹೇಬರು.

ಮನದಿ ನಾಮವು ಸತತ ನೆಲೆಸಿರೆ। ಏನು ಮಾಳ್ಪನು ಕಾಮನು?।
ಮನಸಿಜನು ಮಾಯಿಕನು ಮಡಿದರು। ನಂಬಬಾರದು ಅವನನು
॥ ೪೪ ॥

ಹರೆಯತನದಲಿ ಕಡುವಿರಾಗವು। ಬೆರೆತು ಇರುವದಸಾಧ್ಯವು।
ಹಿರಿಯ ಗುರು-ಕರುಣದಲಿ ರಾಯಗೆ। ಲಭಿಸಿತೀ ಸೌಭಾಗ್ಯವು ॥ ೪೫ ॥

ಈ ತೆರದಿ ಗುರುಕರುಣ ಸುಧೆಯನು। ಸವಿಯುತವರೆಡೆ ನಿಲ್ಲುವ।
ಆತನೆಲ್ಲವನರಿಯ-ಬಯಸುತ। ಸತತ ಶಂಕೆಯ ಕೇಳುವ ॥ ೪೬ ॥

ಅರಿತು ಬಯಕೆಯ ಸಿರಿಸಮರ್ಥರು। ಒಲವಿನಿಂ ಮರು ನುಡಿದರು।
ತ್ವರಿತದಲಿ ಶಂಕೆಯ ನಿವಾರಿಸಿ। ಅವನಿಗೆ ಸಂತಸ ಸಲಿಪರು ॥ ೪೭ ॥

ಆರು ವರುಷಗಳಳಿದವೀಪರಿ। ವಾದದಲಿ ಆ ರಾಯನ।
ಭಾರಿ ಅರಿಯುವ ಬಯಕೆಯವನದು। ಪೀಡಿಸಿತು ಗುರುರಾಯನ
॥ ೪೮ ॥

ಒಂದು ದಿನ "ನಿಮಗಾರು ಕೊಟ್ಟರು। ನಾಮ ಕೊಡುವಧಿಕಾರವಾ?"।
ಎಂದು ಕೇಳಲು ನೊಂದ ಗುರುವರ। ಅಂದು ತಾಳ್ದರು ಮೌನವಾ
॥ ೪೯ ॥

ಅಂದು ದೃಷ್ಟಾಂತದಲಿ ನೇಮದಿ। ನಿಂಬರಗಿ ಗುರುನಾಥನು।
ಬಂದು ಬೆದರಿಸಿ "ಯಾಕೊ ನಾಲಿಗೆ। ಯುದ್ಧ ಮಾಡಿಹೆ?" ಎಂದನು
॥ ೫೦ ॥

## ಆರನೆಯ ಸಮಾಸ

"ಭಾವುರಾಯಗೆ ನಾನು ಕೊಟ್ಟಿಹೆ। ನಾಮಕೊಡುವಧಿಕಾರವಾ।
ಭಾವದಿಂದಲಿ ನೇಮ ಮಾಡ್ಕೈ। ಒಡನೆ ಬಿಡು ಅತಿ ವಾದವಾ"
॥ ೫೧ ॥

ಅಂದು ಗದ್ಗದ ರಾಯ ಗುರುವಿಗೆ। ದೇಹಭಾವವ ನೀಡಿಹ।
ಅಂದಿನಿಂ ಗುರುವಚನವನ್ನವ। ವೇದ-ವಚನೆಂದೆಣಿಸಿಹ ॥ ೫೨ ॥

ಕಾಯಭಾವವ ನಳಿಸಿ ರಾಯನು। ಗುರುವಿನಲ್ಲಿಯೆ ಬೆರೆತಿಹ।
ಜೀಯ ತನ್ನ ಅನನ್ಯ ಭಕುತಿಗೆ। ದಿವ್ಯ ಅನುಭವ ಇತ್ತಿಹ ॥ ೫೩ ॥

ಒಲಿದು ಭಾವಕೆ ಅಂಬುರಾಯನ। ಇಂಚಗಿರಿಯಲಿ ಮಠವನು।
ನಿಲಿಸಿ ಪಾವನಗೊಳಿಸಿದನು ಸು। ದಾಮನ ಬಡಮನೆಯನು ॥ ೫೪ ॥

ಬೆಳೆಯಿತಾಗ ಸಮರ್ಥ-ಶಿಷ್ಯರ। ಬಳಗ ಅಲ್ಲಿಯೇ ಮಠವದು।
ನೆಲಸಿ ಸಪ್ತಾಹದಲಿ ನೆರೆವುದು। ಹಿರಿ ನೆರವಿ ಸಾಧಕರದು ॥ ೫೫ ॥

ನವಮಠವು ತವರೂರು ಭಕುತಿಯ। ರಾಯ ಮಠದಧಿಕಾರಿಯು।
ನವನವೋತ್ಸವಗಳನು ನಡೆಸಿತು। ಅವಿರತಾತನ ಸೇವೆಯು ॥ ೫೬ ॥

ಇನಿತು ಸೇವೆಯ ಕಂಡು ಸಂತಸ।ದಿಂದ ಉಸುರಿದ 'ಈಶನು'[೧]।
"ಎನಿತು ಬಣ್ಣಿಪೆ ನಿನ್ನ ಸೇವೆಯ। ಧನ್ಯ ಅಂಬೂರಾಯನೇ" ॥ ೫೭ ॥

---

೧. ಉಮದೀಶ.

ಬಂತು ಸದ್ಗುರು ಸಿರಿಸಮರ್ಥರ। ನಿರ್ಗಮನ ದುರ್ದಿನವದು।
ಚಿಂತೆ ಭಕುತರ ಎದೆಯ ಆಡರಿತು। ದುಗುಡ ದುರ್ಧರವಾದುದು
॥ ೫೮ ॥

ಸಿರಿಸಮರ್ಥರ ವರ ಸಮಾಧಿಯು। ಮರುಗಿಸಿತು ಬಲು ರಾಯನ।
ನಿರತ ನೇಮದಲಿದ್ದ ರಾಯನು। ತೊರೆಯಲಿಲ್ಲವ ಮಠವನು ॥ ೫೯ ॥

ನಾಮಕೊಡುವಧಿಕಾರ ರಾಯಗೆ। ಮೊದಲೆ ಕೊಟ್ಟರು "ಈಶ"ನು।
ನಾಮವನು ಕೊಡಲಿಲ್ಲವಾರಿಗೂ। ವರುಷವರೆಗದನಾತನು ॥ ೬೦ ॥

ಮುಂದೆ ಭಕುತಿಯ ಬೆಳೆಯು। ನಿಲ್ಲುವದೆಂದರಿತು ಆ ರಾಯನು।
ಅಂದು ಗುರುಗಳು ಪ್ರೇರಿಸಲು। ಅವನಾಮ ಕೊಡಲನುವಾದನು
॥ ೬೧ ॥

ಒಂದು ಶುಭದಿನ ಜನರನುದ್ಧರಿ।ಸಲು ನಡೆದನಾರಾಯನು।
ಚಿಂದ ಹರಿನಾಮವನು ಸಾರುತ। ನೆಡುವ ಗುರುವಿನ ಗುಡಿಯನು
॥ ೬೨ ॥

ಊರು-ಊರಿಗೆ ನಗರ-ನಗರಕೆ। ಭಕುತರೊಯ್ದರು ಅವರನು।
ಮೂರು ಸಲ ಭಜನಾದಿ ಮಾಡುತ। ಉದ್ಧರಿಪ ಭಾವಿಕರನು ॥ ೬೩ ॥

ರಾಯ ತನ್ನ ತ್ರಿಕಾಲ ಸಾಧನ। ಗುರುಗಳೊಲು ತಾತೊರೆಯನು
ಜೀಯನೊಲು ಗ್ರಂಥಗಳ ಹೊಲಬನು। ಭಕುತರಿಗೆ ತಾನೊರೆವನು
॥ ೬೪ ॥

## ಆರನೆಯ ಸಮಾಸ

ಅರ್ಥಕೇಳಿದ ನಿಂದಕರು ರಾ।ಯನನು ಬಗೆ ಬಗೆ ಹಳಿವರು।
'ವ್ಯರ್ಥ ಸಬ್ದವ ಹರಿದು ಅವುಗಳ। ಸೊಬಗ ಕಳೆವರು' ಎಂಬರು
॥ ೬೫ ॥

ಮಾತು ಬರಿವಾಹನವು ಅರ್ಥವೇ। ವಾಹಕವು ಎಂದರಿಯರು।
ಜಾತಿಕುಹಕರು ರಸಿಕ ಭಕುತರು। ಅರ್ಥಸತ್ವವ ಸವಿವರು ॥ ೬೬ ॥

ನುಡಿಯ ಸಾಧನದಿಂದ ರಾಯನು। ತನ್ನ ಅನುಭವ ಸಾರುವ।
ಒಡನೆ ಅಸಾರವ ತೊರೆದು ಸಾರವ। ರಾಜಹಂಸನು[1] ಹೀರುವ ॥ ೬೭ ॥

ಮುಂದೆ ಮಠದಲಿ ಕಲಹ ಬೆಳೆಯಿತು। ಮಠವ ತೊರೆದನು ರಾಯನು।
ನಿಂದು ಹೊರಗೆಯ ಸಣ್ಣ ಬಗೆಯಲಿ। ಭಕುತಿಯನು ಹಬ್ಬಿಸಿದನು
॥ ೬೮ ॥

ಭಾವವಿರುವುದು ದಾಸರಾಯನ। ಯಾರಿಗೇನನು ಬೇಡನು।
'ಭಾವದಿಂ ದೇವನನು ಭಜಿಸಿರಿ'। ಎಂದು ಬೇಡುತಲಿರುವನು ॥ ೬೯ ॥

ಅಲೆಯುತಿಹ ವಿಶ್ರಾಂತಿಯರಿಯದೆ। ಭಕುತಿ ಬೆಳೆಸಲು ರಾಯನು।
ಒಲಿದು ಭಕುತರನೇಕರಿಗೆ। ತಾನಾತ್ಮನನುಭವವಿತ್ತನು ॥ ೭೦ ॥

---

೧. ರಸಿಕ ಭಕುತ.

ಮುಂದೆ ಮುಪ್ಪಿನಕಾಲ ಒದಗಲು। ಶ್ರಮವು ದುಃಸಹವಾಯಿತು।
ಅಂದು ಕಾಯವು ಕರಗಿದರು। ಉದ್ಧಾರಕಾರ್ಯವು ನಡೆಯಿತು ॥ ೭೧ ॥

ಉದರಬೇನೆಯು ಬಳಲಿಸಿದರೂ। ಬಿಡದೆ ನೇಮವು ನಡೆವುದು।
ಮುದದಿ ಸಾಧನನಿರತನಿರುತಿರೆ। ದುಗುಡ ಮೊಗದಲಿ ಕಾಣದು॥ ೭೨ ॥

ಕೊನೆಗೆ ತನ್ನಯ ಗಮನದಿನವನು। ಅರಿತು ಒಸಗೆಯನಿತ್ತನು।
'ಮನದಿ ನಾಮವ ನಿತ್ಯ ನೆನೆಯಿರಿ। ಪಥ್ಯ[೧] ಪಾಲಿಸಿ'ರೆಂದನು ॥ ೭೩ ॥

"ಉಳಿಯಲಿಲ್ಲೆನ ಬಯಕೆ ನಾರಾ।ಯಣನ ನಾಮವ ಸಾರುತ।
ಗಳನೆ ಹಾರುವೆ ಆಗಸಕೆ ನಾ।ನೆಂದು" ದೇಹವ ತೊರೆಯುತ ॥ ೭೪ ॥

ಸತತ ಸಾದರ ನಾಮನೆನೆಯುತ। ನೀತಿ ನಿಯಮವು ಪಿಡಿವುದು।
ಸತತ ಸತ್ಸಂಗವನು ಸೇವಿಸಿ। ಆತ್ಮಸುಖವನು ಪಡೆವುದು ॥ ೭೫ ॥

ಇದುವೆ ಬಾಬಾರಾಯನೊಸಗೆಯು। ನಡೆದ ಮೇಲದ ನುಡಿದಿಹ।
ಇದನೆ ಮಾಡುತ ಮಾಡಿಸುತಲವ। ಭಕುತರನು ಉದ್ಧರಿಸಿಹ ॥ ೭೬ ॥

ರಾಮರಾಯನು ಪ್ರೇರಿಸಲು ತಾ। ಕೃಷ್ಣಸಖ ನೆರವಿತ್ತಿಹ।
ಈ ಮನೋಹರ ಹಾರ ಹೆಣೆದು। ಸಿರಿಯಡಿಯೊಳದನಿರಿಸಿಹ ॥ ೭೭ ॥

---

೧. ಪರರ ಹೆಣ್ಣು, ಹೊನ್ನು, ಮಣ್ಣು ಮುಟ್ಟದಿರುವುದು.



ಶ್ರೀ ಗುರುದೇವ ರಾನಡೆ, ನಿಂಬಾಳ ಜಿ. ವಿಜಾಪೂರ

ಜನ್ಮ : ಜಮಖಂಡಿ
ಕ್ರಿ.ಶ. ೩-೭-೧೮೮೬

ಸಮಾಧಿ : ನಿಂಬಾಳ
ಕ್ರಿ.ಶ. ೬-೬-೧೯೫೭

# ಏಳನೆಯ ಸಮಾಸ

# ಶ್ರೀ ಗುರುದೇವ ರಾಮಭಾವೂ ರಾನಡೆಯವರ ಸಂಕ್ಷಿಪ್ತ ಚರಿತ್ರೆ

## ೧

ಓಂ ಗುರುದೇವಾ, ನಿನಗೆ ನಮಸ್ಕಾರಗಳು. ಸಚ್ಚಿದಾನಂದನೂ, ಚಿತ್‌ಸೂರ್ಯನೂ, ಆತ್ಮವಿದ್ಯೆಯ ಆಚಾರ್ಯನೂ ಆದ ನೀನು ನನಗೆ ಬುದ್ಧಿಪ್ರಕಾಶವನ್ನು ಕೊಡು. ನನ್ನ ಹೃದಯದಲ್ಲಿ ಇದ್ದು, ದಿವ್ಯದರ್ಶನ ನೀಡಿ ಮಂದಮತಿಯಾದ ನನ್ನಿಂದ ನಿನ್ನ ಚರಿತ್ರೆಯನ್ನು ಹೇಳಿಸು. ರಾಮಜನ್ಮಕಾರಣದಿಂದ ಜಮಖಂಡಿಯು ಪರಮಪಾವನವಾಗಿ, ಉತ್ತಮ ಹೊಸ ಪುಣ್ಯಕ್ಷೇತ್ರವಾಗಿ ಭೂಮಂಡಲದಲ್ಲಿ ಪ್ರಸಿದ್ಧಿ ಪಡೆಯಿತು. ಒಂದು ಕನ್ಯೆ ಜನಿಸಿದ ನಂತರ ಬಹಳ ದಿನಗಳವರೆಗೆ ಮಕ್ಕಳಾಗಲಿಲ್ಲವೆಂದು ಪಾರ್ವತೀಬಾಯಿಗೆ ಬಹಳ ದುಃಖವಾಯಿತು. ಪುತ್ರಸಂತಾನವಾಗಬೇಕೆಂದು ರಾಮೇಶ್ವರನ ಉಪಾಸನೆಯನ್ನೂ ಅಖಂಡ ನಾಮಸ್ಮರಣೆಯನ್ನೂ ಅನನ್ಯಭಾವದಿಂದ ಮಾಡಿದಳು. ಆಕೆಯ ತಪಸ್ಸು ಫಲಿಸಿತು. ಪುತ್ರರತ್ನ

ಜನಿಸಿತು. ಕೃತಜ್ಞತೆಯಿಂದ ಆನಂದಭಾಷ್ಪಗಳು ಸುರಿದವು. ರಾಮೇಶ್ವರನ ವರದಿಂದ ಹುಟ್ಟಿದ್ದರಿಂದ ರಾಮಚಂದ್ರ ಎಂದು ಅವನಿಗೆ ಹೆಸರಿಟ್ಟರು. ಅವನ ಜನ್ಮ ರಾನಡೆ ಮನೆತನವನ್ನು ಪಾವನಗೊಳಿಸಿತು. ಭಗವದ್ಭಕ್ತಿಯನ್ನು ಪ್ರಚಾರಮಾಡಿ, ಲೋಕೋದ್ಧಾರದ ಕೆಲಸ ಮಾಡಿದ ಭಕ್ತಶ್ರೇಷ್ಠನನ್ನು ಪಡೆದ ಮಾತೆಯು ನಿಜವಾಗಿಯೂ ಧನ್ಯಳು.

ಹುಟ್ಟಿನಿಂದಲೇ ಬಂದ ಜಿಜ್ಞಾಸೆ, ಪ್ರಜ್ಞೆ, ವಿವೇಕ ಮುಂತಾದ ಅಲೌಕಿಕ ಗುಣಗಳನ್ನು ಪಡೆದ ಬಾಲಕನು ನಿಜವಾಗಿಯೂ ಶಾಲೆಯಲ್ಲಿ ಪ್ರತಿಭಾವಂತ ವಿದ್ಯಾರ್ಥಿಯಾಗಿದ್ದನು. ಭಕ್ತರ ಉದ್ಧಾರಕ್ಕಾಗಿ ಜಮಖಂಡಿಗೆ ಬರುತ್ತಿದ್ದ ಶ್ರೀ ಭಾವೂರಾವ ಮಹಾರಾಜರು ಶಕೆ ೧೮೨೩ರಲ್ಲಿ (೧೯೦೧ನೇಇಸ್ವಿ) ಜಮಖಂಡಿಯಲ್ಲಿ ವೈಕುಂಠಚತುರ್ದಶಿಯ ಶುಭ ಮುಹೂರ್ತದಲ್ಲಿ ರಾಮಚಂದ್ರನಿಗೆ ನಾಮಬೀಜವನ್ನು ಕೊಟ್ಟರು. ನಾಮಸ್ಮರಣೆಯ ಬಲದಿಂದ ಪರೀಕ್ಷೆಯಲ್ಲಿಯೂ ಉತ್ತಮ ರೀತಿಯಿಂದ ಉತ್ತೀರ್ಣನಾಗಲಿಕ್ಕೆ ಬರುತ್ತದೆಂದು ಸಹಜವಾಗಿ ಅವರು ಹೇಳಿದ ಮಾತು ಅವನ ಕಿವಿಗೆ ಬಿದ್ದಿತು. ಶಾಲೆಯ ಪರೀಕ್ಷೆ ಬಂತು. ಬರೆದೂ ಆಯಿತು. ರಾಮಚಂದ್ರನಿಗೆ ಮೇಲಿನ ಮಾತಿನ ಮಹತ್ವ ನೆನಪಿಗೆ ಬಂದು ತನ್ನ ಮನೋಭಾವವನ್ನು ಸಿದ್ಧಮಾಡಿ ನಾಮಸ್ಮರಣೆ ಮಾಡತೊಡಗಿದನು. ಫಲಿತಾಂಶ ಬಂತು. ಗುರುಕೃಪೆಯಿಂದ ವಿಶ್ವವಿದ್ಯಾಲಯಕ್ಕೆ ಇವನಿಗೆ ಎರಡನೇ ಸ್ಥಾನ ದೊರಕಿತು. ಜಗನ್ನಾಥ ಶಂಕರಶೇಠ ಶಿಷ್ಯವೃತ್ತಿಯೂ ದೊರಕಿತು. ಆಮೇಲೆ ರಾಮಚಂದ್ರನು ಪುಣೆಗೆ ಹೋಗಿ

## ಏಳನೆಯ ಸಮಾಸ

ವಿದ್ಯಾಕೇಂದ್ರವೆನಿಸಿದ ದಕ್ಷಿಣ ಮಹಾವಿದ್ಯಾಲಯದಲ್ಲಿ ಶಿಕ್ಷಣ ಮುಂದುವರೆಸಿದನು. ಅವನ ಅಸಾಧಾರಣ ಬುದ್ಧಿಮತ್ತೆ ಮತ್ತು ಉತ್ತಮ ಗುಣಶೀಲಗಳಿಂದ ಪ್ರಾಧ್ಯಾಪಕರು ಇವನ ಮೇಲೆ ಸಂತುಷ್ಟರಾದರು. ಆ ಮಹಾವಿದ್ಯಾಲಯದಲ್ಲಿ ಅಧ್ಯಯನ ಮತ್ತು ನಾಮಸಾಧನೆ ಎರಡೂ ಸಮಸಮನಾಗಿ ನಡೆದ ಆ ಸಮಯದಲ್ಲಿ, ಪಾರಮಾರ್ಥದ ಅನುಭವಗಳು ಸ್ವಲ್ಪಮಟ್ಟಿಗೆ ಅವನಿಗೆ ಬಂದವು. ಮುಂದೆ ಒಂದು ದಿನ ಜಮಖಂಡಿಯಲ್ಲಿ ಮಹಾರಾಜರು ತರುಣ ರಾಮರಾಯನಿಗೆ ಪೋಥೀ (ಗ್ರಂಥ) ಓದಲು ಹೇಳಿದರು. ಅವನಿಗೆ ಒಳಗೊಳಗೆ ಸಂಕೋಚವೆನಿಸಿತು. ತಪ್ಪಿಸಲು ಬಹಳ ಪ್ರಯತ್ನ ಮಾಡಿದರೂ ಆ ಮಹಾರಾಜರ ಆಗ್ರಹದಿಂದ ಓದಬೇಕಾಯಿತು. ಗ್ರಂಥವಾಚನ, ಭಜನೆಯಾದ ನಂತರ ಕೋಣೆಯಲ್ಲಿ ಶಿಷ್ಯರೆಲ್ಲರನ್ನೂ ಕರೆದು ಏಕಾಂತದಲ್ಲಿ ಮಹಾರಾಜರು ಹೀಗೆ ಹೇಳಿದರು. ನಿಂಬರಗಿ ಮಹಾರಾಜರ ಮೊಮ್ಮಗನೂ ಆ ಸಾಧಕರಲ್ಲಿ ಇದ್ದನು. ಅವನನ್ನುದ್ದೇಶಿಸಿ "ನಿಮ್ಮ ಅಜ್ಜನ ಕೀರ್ತಿಯು ಭೂಮಂಡಲದಲ್ಲೆಲ್ಲ ಸಪ್ತಸಾಗರದ ಆಚೆಯ ಪರ್ಯಂತ ಈ ತರುಣನ ತಪೋಬಲದಿಂದ ಹರಡುವುದು" ಎಂದು ಭವಿಷ್ಯ ನುಡಿದರು. "ಇವನ ಅಹಂಕಾರ ಹೋಗಲಿಕ್ಕೆಂದು ಅವನಿಗೆ ಪೋಥೀ ಓದಲು ಆದೇಶ ನೀಡಿದ್ದೇನೆ. ನಿಮಗೆ ಆಶ್ಚರ್ಯವಾಗುವ ಕಾರಣವಿಲ್ಲ" ಎಂದು ಹೇಳಿದರು. ಅದನ್ನು ಕೇಳಿ ಎಲ್ಲರಿಗೂ ಅತ್ಯಂತ ಹರ್ಷವಾಯಿತು. ರಾಮಚಂದ್ರನ ಬಗ್ಗೆ ಇರುವ ಅವರ ಪ್ರೇಮ, ಗೌರವ ಇಮ್ಮಡಿಸಿತು.

## ನಿತ್ಯನೇಮಾವಳಿ

೨

ಪದವೀಧರರಾದ ಮೇಲೆ ಫೆಲೋಶಿಪ್ ಪಡೆದು, ವಿದ್ಯಾರ್ಥಿ ವರ್ಗದವರೊಡನೆ ಬಂಧುಗಳಂತೆ ಪ್ರೇಮದಿಂದ ನಡೆದುಕೊಂಡರು. ಕೊನೆಯ ಎಂ.ಎ. ಪರೀಕ್ಷೆಯಲ್ಲಿ ತತ್ತ್ವಜ್ಞಾನವನ್ನು ತೆಗೆದುಕೊಂಡು ಮೊದಲನೇ ಸ್ಥಾನವನ್ನು ಪಡೆದರಲ್ಲದೆ ಕುಲಪತಿಯ ಸುವರ್ಣ ಪದಕವನ್ನೂ ಪಡೆದರು. 'ಪರೀಕ್ಷಕರಿಗಿಂತ ಪರೀಕ್ಷೆಗೆ ಒಳಪಟ್ಟವನ ಜ್ಞಾನವು ಹೆಚ್ಚಿಗೆ ಇದೆ' ಎಂದು ಪರೀಕ್ಷಕರಿಂದ ಪ್ರಶಸ್ತಿಯನ್ನು ಪಡೆದು ಧನ್ಯರಾದರು. ಮುಂದೆ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ, ಜ್ಞಾನಶಾಖೆಯ ಮುಖ್ಯಸ್ಥರಾಗಿ, (Head of the Faculty) ಕೊನೆಗೆ ಕುಲಪತಿಗಳಾದರು. ಹೀಗೆ ಮೆಟ್ಟಲು ಮೆಟ್ಟಲುಗಳನ್ನೇರುತ್ತ ತಮ್ಮ ಬುದ್ಧಿಬಲ ಹಾಗೂ ಗುರುಕೃಪೆಯಿಂದ ಪ್ರಾಪಂಚಿಕ ವೈಭವದ ಶಿಖರವನ್ನೇರಿದರು. ಅಧ್ಯಯನ ವೃತ್ತಿಯಿಂದ ಬುದ್ಧಿವಿಕಾಸವಾಯಿತು. ನಾಮಸಾಧನೆಯಿಂದ ಪ್ರತಿಭೆ ಬೆಳಗಿತು. ಹೀಗೆ ಅಂತರ್ಬಾಹ್ಯ ಪೂರ್ಣತ್ವ ಲಭಿಸಿತು ರಾಯರಿಗೆ. ಇಂಥ ಪೂರ್ಣಪ್ರಜ್ಞೆಯ ಶಿಕ್ಷಣ ಪ್ರಭಾವದಿಂದ, ಸ್ಫೂರ್ತಿ ಕೊಡುವಂಥ ವಿವೇಚನೆಯಿಂದ, ವಿದ್ಯಾರ್ಥಿಗಳಲ್ಲಿ ಆತ್ಮಬುದ್ಧಿಯ ವಿಕಾಸವಾಯಿತು. ಇತರರಲ್ಲಿ ಇರುವ ಅಲ್ಪ ಗುಣಗಳನ್ನು ಪ್ರಶಂಸೆ ಮಾಡುವುದರಿಂದ, ಅವರ ಬೋಧನೆಯು ವಿದ್ಯಾರ್ಥಿಗಳಿಗೆ ಆತ್ಮವಿಶ್ವಾಸವನ್ನುಂಟು ಮಾಡುತ್ತಿತ್ತು. ಕೇವಲ ವಿದ್ಯಾಲಯದ ಶಿಕ್ಷಣವು ಶಾಂತಿಸಮಾಧಾನವನ್ನು ಕೊಡಲಾರದ್ದರಿಂದ ಅವರು ಲೋಕಶಿಕ್ಷಣವನ್ನೂ

ಕೊಡುವ ಪ್ರಯತ್ನ ಮಾಡುತ್ತಿದ್ದರು. ಹೊಸ ಸಂಸ್ಥೆಗಳನ್ನು ಸ್ಥಾಪನೆಮಾಡಿ, ವ್ಯಾಖ್ಯಾನಮಾಲೆಗಳನ್ನು ಆರಂಭಮಾಡಿ, ಎರಡು ಪತ್ರಿಕೆಗಳನ್ನು ಹೊರಡಿಸಿದ್ದಲ್ಲದೇ ಅಮೌಲ್ಯ ಗ್ರಂಥರಚನೆಯನ್ನೂ ಮಾಡಿದರು. ಬೆಂಗಳೂರಿನಲ್ಲಿ 'ಉಪನಿಷದ್ರಹಸ್ಯ', ಕಲಕತ್ತೆಯಲ್ಲಿ 'ವೇದಾಂತ ರಹಸ್ಯ', ನಾಗಪೂರದಲ್ಲಿ 'ಭಗವದ್ಗೀತಾ ರಹಸ್ಯ' ಗ್ರಂಥಗಳ ವಿವರಣೆ ಮಾಡಿದರು. ಮುಂದೆ ನಾಗಪೂರದಲ್ಲಿ ತತ್ತ್ವಜ್ಞಾನ ಪರಿಷತ್ತು ಕೂಡಿದಾಗ, ಅದರ ಅಧ್ಯಕ್ಷ ಪದವಿಯನ್ನು ಅಲಂಕರಿಸಿ, ತಮ್ಮ ಭಾಷಣದ ಮುಖಾಂತರ ಆತ್ಮತತ್ತ್ವದರ್ಶನವನ್ನು ತಿಳಿಸಿ ಹೇಳಿದರು, ವಿಮರ್ಶಿಸಿದರು. ಪ್ರಾಚೀನ ಋಷಿ-ಸಾಹಿತ್ಯದ ಜೊತೆಗೆ ಪ್ರಾದೇಶಿಕ ಭಾಷೆಯಲ್ಲಿರುವ ಸಂತಸಾಹಿತ್ಯವನ್ನೂ ಅಭ್ಯಾಸಮಾಡಿ, ಬುದ್ಧಿವಾದಿಗಳಿಗೆ ಒಪ್ಪುವಂತೆ ಸಂತಸಾಹಿತ್ಯದ ಸಂದೇಶಗಳನ್ನು ವಿವರಿಸುತ್ತಿದ್ದರು. ಅವರ ಅಮೌಲ್ಯ ಗ್ರಂಥರಚನೆ ಇಂಗ್ಲೀಷಿನಲ್ಲಿದ್ದು, ಗುರುವರ್ಯರ ಜಾಗತಿಕ ವಿಶಾಲದೃಷ್ಟಿಯನ್ನು ತೋರಿಸುತ್ತದೆ.

ಸುಖ ದುಃಖಗಳು ಒಮ್ಮೆಲೆ ಬರುವುದರಿಂದ ಮನುಷ್ಯ ಎರಡನ್ನೂ ಸಮದೃಷ್ಟಿಯಿಂದ ನೋಡಬೇಕೆಂಬ ಪಾಠವನ್ನು ಗುರುದೇವರು ಕಲಿತರು. ಗುರುವರ್ಯರಿಗೆ ಎರಡು ಭೀಕರವಾದ ಬೇನೆಗಳು ಬಂದು, ಬಹಳ ದಿನಗಳವರೆಗೆ ಅವರನ್ನು ಮೃತ್ಯುಶಯ್ಯೆಯಲ್ಲಿ ಮಲಗಿಸಿದವು. ಸದ್ಗುರು ಕೃಪಾಬಲದಿಂದ ಮತ್ತು ನಾಮಸಾಧನೆಯಿಂದ ಕಾಲನ ಪಾಶದಿಂದ ಪಾರಾದರು. ಪ್ರಿಯಜನರ ವಿಯೋಗದ ದಾರುಣ ದುಃಖದಿಂದ ಅವರ

ಹೃದಯ ಬೆಂದು ಹೋಯಿತು. ಮೊದಲು ಪ್ರಿಯಪುತ್ರನ ಮರಣ; ನಂತರ ಪ್ರಿಯ ಪತ್ನಿಯ ವಿಯೋಗ, ನಂತರ ಉಂಟಾದ ತಾಯಿಯ ಮರಣದಿಂದ ಗುರುವರ್ಯರು ಏಕಾಕಿಯಾದರು. ಭಗವಂತನೊಡನೆ ಸಖ್ಯವನ್ನು ಬೆಳೆಸಿದರು. ಉತ್ಕಟತೆಯಿಂದ ಸಾಧನೆ ನಡೆಸಿದರು. ಆದರೆ ಸಮರ್ಥರ ಆದೇಶದಂತೆ ಎರಡನೆಯ ವಿವಾಹ ಮಾಡಿಕೊಂಡು ಒಂದು ಹೆಣ್ಣು ಮಗುವನ್ನು ಪಡೆದರು. ಅಂತೂ ಮೂರು ತಪಗಳವರೆಗೆ ಪಾಠಕಲಿಸಿ, ಉಪಕುಲಗುರು ಪದವಿಯನ್ನು ಅಲಂಕರಿಸಿ, ಜಾಗತಿಕ-ಲೌಕಿಕ ಕೀರ್ತಿ ಸಂಪಾದಿಸಿ ಸೇವಾನಿವೃತ್ತರಾದರು.

೬

ಜಿಜ್ಞಾಸೆ ಮತ್ತು ಸುವೃತ್ತಿ, ಕಾಮನಾಪೂರ್ತಿ ಮತ್ತು ದುಃಖನಿವೃತ್ತಿ, ಉತ್ಕಟ ನಾಮಸ್ಮರಣೆ ಮತ್ತು ಸತ್ಸಂಗತಿ, ಗುರುಕೃಪೆ ಮತ್ತು ಸಾಕ್ಷಾತ್ಕಾರ, ಈ ಎಂಟು ಸಾಧನಗಳು ಪರಸ್ಪರ ಪೋಷಕವಾಗಿ ಬೆಳೆದು ಗುರುವರ್ಯರನ್ನು ಆತ್ಮದರ್ಶನದ ಶಿಖರವನ್ನೇರಿಸಿದವು. ಪರಮಾರ್ಥಪ್ರಾಪ್ತಿ ಮತ್ತು ಅದರ ಪ್ರಚಾರ ಅದೇ ಜೀವನದಸಾರ ಎಂಬ ಮಹೋನ್ನತ ಆದರ್ಶವು ಅವರನ್ನು ಮೊದಲಿನಿಂದ ಪ್ರೇರೇಪಿಸುತ್ತಿತ್ತು. ಮೊದಮೊದಲು ನಾಮಸಾಧನೆ ಸಕಾಮವಾಗಿದ್ದು ಇಚ್ಛೆಗಳು ಪೂರ್ಣವಾದಂತೆ ನಾಮದ ಮೇಲಿನ ಪ್ರೀತಿ ಹೆಚ್ಚಾಗಿ ನಾಮಸ್ಮರಣೆ ಉತ್ಕಟವಾಗಿ ನಡೆಯಿತು. ಮತ್ತು ಅದರ ಜೊತೆಗೆ ಬರುವ ಕೆಲವು ಅನುಭವಗಳನ್ನು ಕಂಡು ಗುರುವರ್ಯರಿಗೆ ಆಶ್ಚರ್ಯ, ಆನಂದಗಳು ಉಂಟಾಗುತ್ತಿದ್ದವು. ವರ್ಣರಂಜಿತ ನಕ್ಷತ್ರಗಳು

ಮಿನುಗುತ್ತಿರುವುದನ್ನು, ಸುತ್ತು ಸುರಳಿ ಹಾಕಿದ ಶೇಷನನ್ನು ಕಂಡು, ಹೊಸ ಸಾಧಕರಾದ ಗುರುವರ್ಯರಿಗೆ, ಆಶ್ಚರ್ಯವಾಗುತ್ತಿತ್ತು. ಇದೇ ಸಮಯದಲ್ಲಿ ಕ್ಷಯವಿಕಾರವು ದುರ್ಧರವಾಗಿ ಬೆಳೆದು ಸಹಿಸಲಸಾಧ್ಯವಾಗಿ ಮೃತ್ಯುವಿನ ಮಹಾದ್ವಾರವನ್ನು ಎಷ್ಟೋ ಸಲ ಕಾಣುವಂತಾಯಿತು. ಶ್ರೀ ಸಮರ್ಥರಿಗೆ ತಮ್ಮ ಪ್ರಕೃತಿಯ ವಿಷಯ ತಿಳಿಸಿ, ಅವರಿಗೆ ಅನನ್ಯಭಾವದಿಂದ ಶರಣು ಹೋಗಿ, ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸಿದರು. ತಕ್ಷಣ ಸಮರ್ಥರ ಪ್ರಸಾದವು ಬಂದು ತಲುಪಿತು. ಮತ್ತು ಪತ್ರ ಬರೆದು ಅವರಿಗೆ ಹಿತೋಪದೇಶ ಮಾಡಿದರು. ಪ್ರಸಾದ ಸ್ವೀಕಾರ ಮಾಡಿದ ನಂತರ ಬೇನೆಯು ದಿನೇದಿನೇ ಹಿಮ್ಮೆಟ್ಟಿತು. ಆಮೇಲೆ ತಾಯಿಯ ಸಂಗಡ ಸಮರ್ಥರ ಭೆಟ್ಟಿಗೆಂದು ಇಂಚಗೇರಿಗೆ ಹೋದಾಗ ತಾಯಿಯ ದುಃಖವನ್ನು ಕೇಳಿ ಕೃಪಾಳುವಾದ ಸಮರ್ಥರು, "ಚಿಂತೆ ಮಾಡಬೇಡಿರಿ. ಅರವತ್ತು ವರ್ಷದವರೆಗೆ ಇವರಿಗೆ ಮರಣ ಭಯವಿಲ್ಲ. ಇವರ ಚಿಂತೆಯನ್ನು ದೇವರು ಮಾಡುತ್ತಾನೆ. ಇವರಿಂದ ದೇವರ ಮಹತ್ಕಾರ್ಯವಾ ಬೇಕಾಗಿದೆ" ಎಂದರು. ಸಮರ್ಥರ ಈ ಮಾತುಗಳನ್ನು ಕೇಳಿ ಇಬ್ಬರೂ ಹರ್ಷಿತರಾದರು. ಸದ್ಗುರುಗಳ ಸನ್ನಿಧಿಯಲ್ಲಿದ್ದು ಸಾಧನ ನಿರತರಾದರು. ಸಮರ್ಥರು ನಂತರ ಅವರಿಗೆ ಅಪ್ಪಣೆ ಕೊಟ್ಟು ಸೂಚಕವಾದ ಸಂದೇಶವನ್ನೂ ಕೊಟ್ಟರು. ಅವರ ಸಂದೇಶವು ಹೃದಯದಲ್ಲಿ ದೃಢವಾಗಿ ನೆಲೆಸಿತು. ಅದೇನೆಂದರೆ "ಗೊತ್ತಿಲ್ಲದೆ ಏನೇನೋ ಆಗುವದು ಆಗಿಹೋಯಿತು. ಆದದ್ದು ಆಗಿಯೂ ಹೋಯಿತು. ತಿಳುವಳಿಕೆಯಿಂದ ನಿಷ್ಠೆಯಿಂದ ವರ್ತಿಸಬೇಕು.

ಮುಂದೆ ಒಳ್ಳೆಯ ದಿನಗಳನ್ನು ಕಾಣುತ್ತೀರಿ. ಭಗವಂತನ ಕೃಪೆಯಿಂದ ಒಳ್ಳೆಯ ವಾರ್ತೆಯನ್ನು ಕೇಳಿ ಆನಂದದಲ್ಲಿಯೇ ಮುಂದುವರೆಯುವಿರಿ." ಅವತಾರಕಾರ್ಯ ಮುಗಿದ ಬಳಿಕ ಸಮರ್ಥರು ಸ್ವಾನಂದದಲ್ಲಿ ಮುಳುಗಿದರು. ಆದರೆ ಶಿಷ್ಯವೃಂದವೆಲ್ಲ ಶೋಕಸಾಗರದಲ್ಲಿ ಮುಳುಗಿತು. ಮುಂದೆ ಗುರುದೇವರು ಆಧ್ಯಾತ್ಮಭವನವನ್ನು ಕಟ್ಟಿಸಿ, ದಿನಾಲೂ ಎಂಟು ತಾಸು ಕಟ್ಟುನಿಟ್ಟಾಗಿ ನಾಮಸ್ಮರಣೆ ಮಾಡುತ್ತಿರುವಾಗ, ಒಂದು ದಿನ ಅವರಿಗೆ ತೇಜಃಪುಂಜರೂಪದ ಹನುಮಂತನ ದರ್ಶನವಾಗಿ ಆಶ್ಚರ್ಯಚಕಿತರಾದರು. ಈ ಅನುಭವದ ಜೊತೆಗೇ ಶರೀರಬಾಧೆಯು ಮತ್ತೆ ಕಾಣಿಸಿಕೊಂಡಿತು. ನಿತ್ಯಬರುವ ಶೀತಜ್ವರದಿಂದ ದೇಹವು ತ್ರಸ್ತವಾಯಿತು. ಸದ್ಗುರುವಿನ ಹೊರತಾಗಿ ಈ ಬಾಧೆ ತಪ್ಪಲಾರದೆಂದೆಣಿಸಿ, ಅವರ ಚರಣಗಳಿಗೆ ಶರಣು ಹೋಗಬೇಕೆಂದು ಗುರುಗಳ ಮನೆಗೆ -ಇಂಚಗೇರಿಗೆ ಬಂದರು. ಶ್ರೀ ಸಮರ್ಥರ ಅಲೌಕಿಕ ಶಿಷ್ಯರಾದ ಶ್ರೀ ಬಾಬಾ ಮತ್ತು ಅಕ್ಕಾ ಶಿವಲಿಂಗವ್ವ ಇವರ ಪಾವನ ಸಾನಿಧ್ಯದಲ್ಲಿ ಉತ್ಸಾಹಭರಿತರಾದರು. ಗುರುಗಳ ಕೃಪೆಯಿಂದ ಅವರ ಪಾರಮಾರ್ಥಿಕ ಜೀವನವು ಉತ್ಕರ್ಷ ಹೊಂದುತ್ತ ನಿತ್ಯವೂ ಹೊಸ ಹೊಸ ಅನುಭವಗಳು ಬರತೊಡಗಿದವು. ಒಮ್ಮೆ 'ಕಣ್ಣುಗಳಲ್ಲಿ ಕಣ್ಣನ್ನು' ಕಂಡರು. ಆನಂದಭರಿತರಾಗಿ ಬಾಬಾ ಅವರಿಗೆ ತಿಳಿಸಿದರು. ಅವರಿಗೂ ಸಂತೋಷವಾಯಿತು. ಮುಂದೆ "ನಾಮಕ್ಕೆ ನಾಮಗಳು" ಆದದ್ದನ್ನೂ ಬಾಬಾ ಅವರಿಗೆ ಹೇಳಿದರು. ಅದನ್ನು ಕೇಳಿ ಅವರಿಗೆ ಆನಂದವಾಯಿತು. "ಮೊದಲಿನ ನಾಮವನ್ನು ಗಟ್ಟಿಯಾಗಿ

ಹಿಡಿಯಬೇಕು" ಎಂದು ಬಾಬಾ ಅವರು ಹೇಳಿದರು. ಈ ಅಲೌಕಿಕವಾದ ಅನುಭವವನ್ನು ನೋಡಿ, ಶ್ರೀ ಬಾಬಾ ಅವರು ಗುರುದೇವರಿಗೆ ನಾಮ ಕೊಡುವಂತೆ ಆದೇಶ ಮಾಡಿದರು. ಆದರೆ ಗುರುವರ್ಯರು ಅದನ್ನು ವಿನಯದಿಂದ ನಿರಾಕರಿಸಿದರು. ಬಾಬಾ ಅವರ ದಾಸ್ಯತ್ವವನ್ನೇ ಮುಂದುವರೆಸಿದರು. ಮುಂದೆ ಒಂದು ದಿನ ಧ್ಯಾನಸ್ಥರಾಗಿ ಕುಳಿತಾಗ ಮಹಾರಾಜರ ಮಾತು ಕೇಳಿಸಿತು. "ಆ ಹೂವನ್ನು ತೆಗೆದು ಕೋ", ಎಂದಾಗ ಗುರುಗಳು ಜಾಗೃತರಾದರು. ಪ್ರತಿದಿನದಂತೆ ಸಮಾಧಿ ದರ್ಶನಕ್ಕೆ ಹೋಗಲಾಗಿ ಅಲ್ಲಿ ಒಂದು ತಾಜಾ ಹೂ ನೋಡಿದರು. ಸ್ವಪ್ನದಲ್ಲಿಯ ಹೂವೇ ಕಂಡಂತಾಯಿತು. ಅದನ್ನು ತೆಗೆದುಕೊಂಡರು. ಆದನ್ನು ಒಣಗಿಸಿ ನಿತ್ಯವೂ ಸ್ವಲ್ಪ ಸ್ವಲ್ಪ ಸೇವನೆ ಮಾಡಿದರು. ಆ ದಿವ್ಯೌಷಧಿಯಿಂದ ಅವರ ಪ್ರಕೃತಿಯು ಸುಧಾರಿಸಿತು. ಬೇಗನೆ ಗುಣಮುಖರಾದರು. ಉಂಡ ಅನ್ನ-ಭಕ್ಕರಿಯು ಜೀರ್ಣವಾಗಹತ್ತಿತು. ಆನಂದಾನುಭವವೂ ವೃದ್ಧಿಸಿತು. ಇನ್ನೊಂದು ದಿನ ಧ್ಯಾನಕ್ಕೆ ಕುಳಿತಾಗ, ಯಾರೋ ಒಬ್ಬ ಬಲವಾದ ಮೈಕಟ್ಟಿನ ಮನುಷ್ಯನು ಕಾಣಿಸಿಕೊಂಡನು. ತೇಜಃಪುಂಜ ಮುದ್ರೆಯುಳ್ಳ ಆ ಮನುಷ್ಯನು ನಿಂಬರಗಿ ಮಹಾರಾಜರ ಶಿಷ್ಯನು. "ಮಹಾರಾಜರು ನಿಂಬಾಳಕ್ಕೆ ಹೋಗಿದ್ದಾರೆ" ಎಂದು ಹೇಳಿದನು. ಗುರುದೇವರು "ಅಲ್ಲಿಯೂ ಭಕ್ತಿಯು ಬೆಳೆಯುವದೇನು?" ಎಂದು ಕೇಳಿದರು. ಈ ಪ್ರಶ್ನೆಯನ್ನು ಕೇಳಿದ್ದಕ್ಕೆ ಆ ಶಿಷ್ಯನು ಗದರಿಸಿ, "ಕಣ್ಣು-ಕಿವಿ-ಬಾಯಿ ಮುಚ್ಚು. ಸುಮ್ಮನೆ ನಾಮಸ್ಮರಣೆ ಮಾಡು" ಎಂದು ಹೇಳಿ ಅದೃಶ್ಯನಾದನು.

ಗುರುಗಳು ಸ್ವಪ್ನದಿಂದೆದ್ದು, ಸಮಾಧಿಗೆ ಭೆಟ್ಟಿಕೊಟ್ಟು ಬರುವಾಗ ಒಬ್ಬ ಗೃಹಸ್ಥನು ಒಂದು ಪತ್ರವನ್ನು ತಂದುಕೊಟ್ಟನು. ನಿಂಬಾಳಸ್ಟೇಶನ್ನಿನ ಹತ್ತಿರ ಒಂದು ಸ್ಥಳವನ್ನು ಒಬ್ಬ ಸ್ನೇಹಿತನು ಇವರಿಗಾಗಿ ಹುಡುಕಿ, ಅದನ್ನು ನೋಡಲಿಕ್ಕೆ ಬರಬೇಕೆಂದು ಆ ಪತ್ರದಲ್ಲಿ ವಿನಂತಿಸಿಕೊಂಡಿದ್ದನು. ಸ್ವಪ್ನದ ರಹಸ್ಯವು ಹೊರಬಿತ್ತು. ಗುರುಗಳು ನಿಂಬಾಳಕ್ಕೆ ಹೋದರು. ಆಶ್ರಮ ಕಟ್ಟುವುದಕ್ಕಾಗಿ ಸ್ಥಳವನ್ನು ತೆಗೆದುಕೊಂಡರು. ಆಶ್ರಮವನ್ನು ಕಟ್ಟಿ ವಾಸ್ತುಶಾಂತಿಯ ವೇಳೆಗೆ ವೈಭವದಿಂದ ನಾಮಸಪ್ತಾಹವನ್ನು ಆಚರಿಸಿದರು. ಗುರುಬಂಧು-ಭಗಿನಿಯರೆಲ್ಲ ಸೇರಿದರು. ಆ ಮಂಗಲ ಸಮಯದಲ್ಲಿ ಆತ್ಮಾನುಭವದ ವೈಭವ, ಮಲ್ಲಿಗೆಯ ಮಧುರ ಸುವಾಸನೆ ಹಾಗೂ ಮಹದಾನಂದದ ಉತ್ಕಟೇಚ್ಛೆ ಈ ತ್ರಿವೇಣಿ ಸಂಗಮದಿಂದ ಆಶ್ರಮವು ತುಂಬಿತುಳುಕಿತು.

೪

ಸಮರ್ಥರ ಕೃಪೆಯಿಂದ ದೊರೆತ ಆ ದಿವ್ಯರಸಾಸ್ವಾದವನ್ನು ಭಕ್ತರಿಗೆ ಹಂಚಲಿಕ್ಕೆ ಅವಕಾಶವು ಗುರುಗಳಿಗೆ ದೊರೆಯಿತು. ಮುಂದೆ ಸಹೋದ್ಯೋಗಿಗಳ ಜೊತೆಗೆ ಮತಭೇದವಾದದ್ದರಿಂದ ಗುರುದೇವರು ಕೆಲಸಕ್ಕೆ ತ್ಯಾಗಪತ್ರವನ್ನು ಕೊಟ್ಟು ಪ್ರಯಾಗದಿಂದ ಕೆಲಸಕ್ಕೆ ಬಂದ ಆಮಂತ್ರಣವನ್ನು ಸ್ವೀಕರಿಸಿದರು. ವಿಶ್ವವಿದ್ಯಾನಿಲಯದ ಕ್ಷೇತ್ರದಲ್ಲಿ ಪರಮ ಪವಿತ್ರ ಪರಿಸರದಲ್ಲಿ ದೊರೆತ ಸ್ವತಂತ್ರ ಪ್ರಾಧ್ಯಾಪಕರ ಕೆಲಸವು ಪಾರಮಾರ್ಥಕ್ಕೆ ಅನುಕೂಲವೆನಿಸಿತು. ಪ್ರಯಾಗದ ಹವೆಯೂ ಅವರ ಪ್ರಕೃತಿಗೆ ಒಗ್ಗಿತು. ಯಾವಾಗಲೂ ಆನಂದಾನುಭವವನ್ನು

ಪಡೆಯುತ್ತ ಉತ್ಕಟ ಸಾಧನೆ ನಡೆಸಿದರು. ಎಲ್ಲಿ ತಮಗೆ ಉಜ್ವಲ ಅನುಭವವಾಗುವುದೋ ಆ ಸ್ಥಳಗಳಿಗೆ ಮೇಲಿಂದ ಮೇಲೆ ಹೋಗುತ್ತಿದ್ದುದರಿಂದ ಆ ಸ್ಥಳಗಳು ಪುನೀತವಾದವು. ಪ್ರಯಾಗದ ಪರಿಸರದಲ್ಲಿ ಇಂಥವು ಅನೇಕ ಸ್ಥಳಗಳಾದವು. ಇಂಥ ಒಂದು ಸ್ಥಳವು ದ್ರೌಪದೀಘಾಟಿನಲ್ಲಿತ್ತು. ಅದನ್ನು ಖರೀದಿಸಿ ಅವರು ವಿಶಾಲವಾದ ಮನೆ ಕಟ್ಟಿಸಿದರು. ಪ್ರತಿವರ್ಷ ಬೇಸಿಗೆಯಲ್ಲಿ ಗುರುದೇವರು ನಿಂಬಾಳಕ್ಕೆ ಬಂದಾಗ ಅವರ ಭಕ್ತರೆಲ್ಲ ಬಂದು ಅವರ ಸನ್ನಿಧಿಯಲ್ಲಿ ವಾಸಮಾಡುತ್ತಿದ್ದರು. ನಾಮ ಕೊಡುವ ಅಧಿಕಾರ ಅವರಿಗೆ ಈ ಮೊದಲೇ ದೊರೆತಿದ್ದರೂ ಮುಮುಕ್ಷುಗಳನ್ನು ಶ್ರೀ ಬಾಬಾ ಅವರ ಕಡೆಗೇ ಕಳಿಸುತ್ತಿದ್ದರು. ಶ್ರೀಬಾಬಾ ಅವರ ನಿರ್ಯಾಣವಾದ ಮೇಲೆ, ಸಮರ್ಥರ ಪ್ರೇರಣೆಗನುಸಾರವಾಗಿ ಭಕ್ತರನ್ನು ಪರೀಕ್ಷಿಸಿ ನಾಮ ಕೊಡಲಾರಂಭಿಸಿದರು. ನಾಮ ಕೊಡುವ ಪದ್ಧತಿ ಸ್ವಲ್ಪ ವಿಲಕ್ಷಣವಾಗಿತ್ತು. ಇಬ್ಬರು ಕಾಕಾ -ಶ್ರೀ ತುಳಪುಳೆ ಮತ್ತು ಶ್ರೀ ಕಾರಖಾನೀಸ ಅವರ ಮೂಲಕ ನಾಮ ಕೊಡಿಸುತ್ತಿದ್ದರು. ಆತ್ಮಕಮಲವು ಅರಳಿದ ತಕ್ಷಣ ಭ್ರಮರ ಸಂಕುಲಕ್ಕೆ ಆಮಂತ್ರಣ ದೊರೆಯಿತೆನ್ನುವಂತೆ, ಭಾವಿಕ ಭಕ್ತವೃಂದವು ಅಲ್ಲಿಗೆ ಉಪದೇಶ-ಮಕರಂದವನ್ನು ಸೇವಿಸಲಿಕ್ಕೆ ಧಾವಿಸಿ ಬರುತ್ತಿತ್ತು. ಸೇವಾನಿವೃತ್ತಿಯ ನಂತರ ನಿಂಬಾಳದಲ್ಲಿ ಗುರುದೇವರು ಇದ್ದರೂ ಕೆಲವು ಕಾಲ ಪ್ರಯಾಗಕ್ಕೆ ಹೋಗಿ ಇರುತ್ತಿದ್ದರು. ಅವರ ಅಲೌಕಿಕ ಸಭೆಗಳಲ್ಲಿ (Sittings) ಭಕ್ತರಿಗೆ ಬೇಕಾದ ಅಮೌಲ್ಯ ಬೋಧನೆ ದೊರೆಯುತ್ತಿತ್ತು. ಗಂಟೆಗಟ್ಟಲೆ ವೇಳೆ ಹೇಗೆ

ಹೋಯಿತೆನ್ನುವುದರ ಅರಿವು ಕೂಡ ಸಾಧಕ ಜನರಿಗೆ ಇರದಷ್ಟು ಅವರು ಅದರಲ್ಲಿ ತಲ್ಲೀನರಾಗಿರುತ್ತಿದ್ದರು. ಭಾವಸಮಾಧಿಯಲ್ಲಿದ್ದಾಗ ಗುರುದೇವರು "ನಾರಾಯಣ, ನಾರಾಯಣ" ಎಂದು ಜಯಘೋಷ ಮಾಡುತ್ತಿದ್ದರು. ಆಗ್ಗೆ ಭಾವಿಕರಿಗೆ ಅವರು ದಿವ್ಯತೇಜಯುಕ್ತರಾಗಿ ಕಾಣುತ್ತಿದ್ದರು. ಹಗಲು-ಇರುಳು ಎನ್ನದೆ ಅಖಂಡಜ್ಯೋತಿಯು ಬೆಳಗುತ್ತಿರುವಾಗ ಆನಂದಲಹರಿಯಲ್ಲಿದ್ದ ಅವರ ಸ್ಥಿತಿ ಅವರ್ಣನೀಯವಾಗಿರುತ್ತಿತ್ತು. ಒಮ್ಮೊಮ್ಮೆ ಆನಂದದ ತೆರೆಯ ಮೇಲೆ ಓಲಾಡುತ್ತಿದ್ದರು. ಒಮ್ಮೊಮ್ಮೆ ಶಾಂತಸಾಗರದಲ್ಲಿ ಮುಳುಗಿ ವಿಶ್ರಮಿಸುತ್ತಿದ್ದರು. ಆದರೂ ಸಾಮಾನ್ಯರಂತೆ ವರ್ತಿಸಿ ನಿಜಸ್ಥಿತಿಯನ್ನು ತೋರಗೊಡುತ್ತಿರಲಿಲ್ಲ. ಆತ್ಮದಲ್ಲಿ ಮಗ್ನರಾಗಿ, ಆತ್ಮಪ್ರೇರಣೆಯಿಂದ ಆತ್ಮಭರಿತರಾಗಿ, ಆತ್ಮಾನಂದದಲ್ಲಿ ಉನ್ಮತ್ತರಾಗಿ, ಧ್ಯಾನದಲ್ಲಿ ಯಾವಾಗಲೂ ಉಲ್ಲಾಸದಿಂದಿರುತ್ತಿದ್ದರು. ಗುರುದೇವರೆಂದರೆ ಮಾಯೆ ಇಲ್ಲದ ತವರೂರು, ವಿಶ್ರಾಂತಿಯ ನಿಜಸ್ಥಾನ. ಅಲ್ಲಿ ಭಕ್ತರಿಗೆ ಯಾವಾಗಲೂ ಅವರ ರಕ್ಷಣೆ, ಆಶ್ರಯ ದೊರೆಯುತ್ತಿತ್ತು. ಶ್ರೀಗಳ ಅಮೃತ ಮಹೋತ್ಸವವು ಅವರ ಜನ್ಮಸ್ಥಳವಾದ ಜಮಖಂಡಿಯಲ್ಲಿ ಆದದ್ದು ಅಲ್ಲಿಯ ಜನರ ಸುದೈವವೆನ್ನಬಹುದು. ಎರಡು ದಿವಸದ ರಾಮತೀರ್ಥದ ಉತ್ಸವದಲ್ಲಿ ಗುರುದೇವರ ಗುಣಗಾನವೂ, ನಾಮಸಪ್ತಾಹವೂ ಅಪೂರ್ವವಾಗಿ ನಡೆದವು. ಉತ್ಸವವಾದ ನಂತರ ಗುರುಗಳು ಒಂದು ತಿಂಗಳ ಕಾಲ ಅಲ್ಲಿದ್ದುದರಿಂದ ಅವರ ಸಾನಿಧ್ಯದಿಂದ ಪರಮಾರ್ಥಕ್ಕೆ ಹೊಸ ಕಳೆ- ಹೊಸ ಚೈತನ್ಯ ಬಂದಿತು. ನಿಂಬಾಳಕ್ಕೆ ಹಿಂದಿರುಗಿ ಬೇಗನೆ ಪ್ರಯಾಗಕ್ಕೆ ಹೋಗಿ

ಸ್ವಸ್ಥಾನದಲ್ಲಿ ಆನಂದದಿಂದ ಇದ್ದರು. ನಂತರ ಬಿರುಗಾಳಿ ಬೀಸಿ, ಮಳೆ ಬಂದು, ಪಕ್ಕದ ಮನೆಯ ಮೇಲೆ ಸಿಡಿಲು ಎರಗಿತು. ಶೀತಬಾಧೆಯಿಂದ ಅವರ ಎದೆಯಲ್ಲಿ ಕಫ ತುಂಬಿಕೊಂಡಿತು. ಸ್ವಲ್ಪ ಹುಷಾರಾದ ಮೇಲೆ ನಿಂಬಾಳಕ್ಕೆ ತಿರುಗಿ ಬಂದಾಗ ಅವರ ಶರೀರವು ಅಸ್ಥಿಪಂಜರದಂತೆ ಕಾಣುತ್ತಿತ್ತು. ಗುರುದೇವರಿಗೆ ಮೃತ್ಯು ಸಮೀಪಿಸಿದೆ ಎಂದೆನಿಸಿತು. ಕಫವು ಹೆಚ್ಚಾಗಿ ಗುಂಟಲು ಕಟ್ಟಿಕೊಂಡಿತು. ಮಾತನಾಡಲಿಕ್ಕೆ ಬರಲಿಲ್ಲ. ಕೊನೆಯ ಐದು ದಿವಸ ಅನ್ನ-ನೀರು ಮುಟ್ಟಲಿಲ್ಲ. ಆದರೂ ತಮ್ಮ ಪತ್ನಿಯನ್ನು ಬಿಟ್ಟು ಯಾರಿಗೂ ಇದನ್ನು ತಿಳಿಯಗೊಡಲಿಲ್ಲ. ನಿರ್ಯಾಣದ ದಿನ ಕೂಡ ಸಾಧನೆಗಾಗಿ ಹೋದರು. ಗುರುಗೃಹದ ಹಾದಿಯನ್ನು ನೋಡಿಕೊಂಡು ಬಂದರು. ತಮ್ಮ ಪತ್ನಿಗೆ ಮಾತ್ರ ತಾವು ಹೋಗುವರೆಂಬ ಸೂಚನೆ ಕೊಟ್ಟರು. ರಾತ್ರಿಯ ಭಜನೆಯಾಯಿತು. ಆರತಿಯ ಜ್ಯೋತಿಯು ಶಾಂತವಾಗುತ್ತಿದ್ದಂತೆ ಇವರ ಆತ್ಮಜ್ಯೋತಿಯು ಅದರಲ್ಲಿ ಐಕ್ಯವಾಯಿತು. ಗುರುದೇವರು ಶ್ರೇಷ್ಠ ಗುರುಗಳು. ಓಡಾಡುತ್ತ, ಮಾತನಾಡುತ್ತ ಇದ್ದಕ್ಕಿದ್ದ ಹಾಗೆ ಮರಣವನ್ನು ಮೆಟ್ಟಿ ಅಮರರಾದರು. ದೇವರಿಂದ ಬಂದವರು ದೇವರ ಕಡೆಗೆ ಹೋದರು. ಧನ್ಯಧನ್ಯರಾದರು. ಶ್ರೀ ಗುರುದೇವರೇ ಧನ್ಯರು.

ಶ್ರೀ ಗುರುದೇವರ ಪರಮಾರ್ಥಸೋಪಾನಕ್ಕೆ ಐದು ಮೆಟ್ಟಲುಗಳಿದ್ದು ಮಾನವನ ಸ್ವಭಾವದ ಮೇಲೆ ಅದು ನಿಂತಿದೆ. ಮಾನವನ ಮನದ

ಅಂಗಗಳೆಂದರೆ ಭಾವನೆ, ಬುದ್ಧಿ, ಇಚ್ಛಾಶಕ್ತಿ ಹಾಗೂ ಇವುಗಳ ಮುಕುಟಮಣಿಯಾದ ಪ್ರತಿಭೆ. ಪರಮಾರ್ಥ ಪ್ರೇರಣೆಯಿಂದ ಭಾವನೆ ಜಾಗೃತವಾಗುತ್ತಿದೆ. ಸದ್ಗುಣ ಸೇವನೆಯಿಂದ ನೀತಿಶಕ್ತಿ ಕ್ರಿಯಾಶೀಲವಾಗುತ್ತಿದೆ. ಆತ್ಮಜ್ಞಾನದಿಂದ ಬುದ್ಧಿ ಪ್ರಸನ್ನತೆಯಾಗುತ್ತಿದೆ. ಧ್ಯಾನದಿಂದ ಪ್ರತಿಭಾ ವಿಕಸಿತವಾಗುತ್ತಿದೆ. ಈ ಎಲ್ಲ ಶಕ್ತಿಗಳು ಪರಸ್ಪರ ಪೋಷಕವಾಗಿದ್ದು ಪರಸ್ಪರ ಸಹಾಯದಿಂದ ಬೆಳೆಯುತ್ತವೆ. ಎಲ್ಲ ಶಕ್ತಿಗಳ ಪರ್ಯವಸಾನದ ಪ್ರಭಾವವು ಆತ್ಮದರ್ಶನದಲ್ಲಿ ಆಗುತ್ತದೆ. ಹಾಗೂ ಕೊನಗೆ ಸ್ವಾನುಭವವು ಆಗುತ್ತದೆ. ಈ ಪ್ರಕಾರ ಶ್ರೀ ಗುರುದೇವರ ಭಕ್ತಿಯೋಗವು, ವಿವೇಕಯುಕ್ತವೂ, ನೀತಿಪ್ರಧಾನವೂ, ಭಾವಯುಕ್ತ ನಾಮಸ್ಮರಣೆಯಿಂದ ಕೂಡಿದ್ದೂ, ಆತ್ಮಸಾಕ್ಷಾತ್ಕಾರ ಸಂಪನ್ನವೂ ಆದ ಭಕ್ತಿಯೋಗವು ಆಗಿರುತ್ತದೆ. ಗುರುದೇವ ಚರಿತಾಮೃತಸಾರವು ಹೀಗಿದೆ. ಗುರುದೇವರ ಪ್ರೇರಣೆಯಿಂದ ಮನೋಹರನಿಂದ ರಚಿತವಾಗಿರುವ ಚರಿತಾಮೃತಸಾರವನ್ನು ಸೇವಿಸುವ ಭಕ್ತರು ಆತ್ಮಾನಂದದಲ್ಲಿ ರಮಮಾಣರಾಗಲಿ. ಇನ್ನು ವಿಶ್ವವನ್ನು ವ್ಯಾಪಿಸಿದ ದೇವರು ಈ ಮಾತಿನ ಯಜ್ಞದಿಂದ ಸಂತುಷ್ಟನಾಗಿ ನಮಗೆ ಪ್ರಸಾದವನ್ನು ದಯಪಾಲಿಸಲಿ. ಹೀಗೆ ಶ್ರೀ ಗುರುದೇವ ರಾಮಭಾವೂ ರಾನಡೆಯವರ ಸಂಕ್ಷಿಪ್ತಚರಿತ್ರಯೆಂಬ ಏಳನೆಯ ಸಮಾಸವು ಮುಗಿಯಿತು.

# ಪಂಚಪದಗಳು

ಪ್ರಸ್ತುತ ನೇಮಾವಲಿಯ ಪ್ರತಿ ತಯಾರಾಗುವುದಕ್ಕಿಂತ ಮೊದಲು ಚಿಮ್ಮಡಮಠದ ಭಜನೆಗಳಲ್ಲಿ ಇಂಚಗೇರಿಯಲ್ಲಿ ಹಾಡುತ್ತಿರುವ ಐದು ಭಜನೆಗಳು ಇಲ್ಲಿವೆ.

### ಪದ-೧

ಭಜ ಸದ್ಗುರುರಾಜಂ ಭಜ ಶ್ರೀ ಗುರುರಾಜಂ॥
ತ್ಯಜ ತ್ಯಜ ಭವಜಂಜಾಲಂ ಮಾಯಾಗುಣಶೀಲಂ ॥ ಧೃ ॥

ಸತ್ವದಚಿತ್ವವರೂಪಂ। ಅಖಿಲಾನಂದಸ್ವರೂಪಂ॥
ಅಗಣಿತತೇಜೋಽಮೂಪಂ। ನೀರಾಂಜನದೀಪಂ ॥ ೧ ॥

ದೃಷ್ಟ್ವಾಪ್ಯದೃಶ್ಯಂ ವ್ಯೋಮಂ। ಪೀತಂ ಶುಭ್ರಂ ತಾಮ್ರಂ॥
ನೀಲಂ ಧವಲಂ ಶ್ಯಾಮಂ। ಅಭಿನವನವರಂಗಂ ॥ ೨ ॥

ಗುಪ್ತಾಗುಪ್ತಸ್ವರೂಪಂ। ದೃಷ್ಟ್ವಾನಾಶನಪಾಪಂ॥
ಹತ್ವಾ ಭವಭಯತಾಪಂ। ಶ್ರುತಿಗರ್ಭಿತಸೋಽಪಂ ॥ ೩ ॥

ಘಂಟಾಕಿಂಕಿಣಿ ನಾದಂ। ಸಿಂಹಂಶಂಖಂ ನಾದಂ।
ಭೇರ್ಯಾದಿಕಮಹಾನಾದಂ। ಅನುಭವ ಮನ ಲುಬ್ಧಂ ॥ ೪ ॥

ಮುನಿಜನಮಾನಸಹರ್ಷಂ। ಮಾಯಾಗುಣ ಆಕರ್ಷಂ।
ಶೋಧನಮಾರ್ಗಶೀರ್ಷಂ। ತವಪುರಾಣಪುರುಷಂ ॥ ೫ ॥

ಇತಿ ಸ್ತೋತ್ರಂ ಪಠ ಶ್ರುತ್ವಾ। ಪಾವನದಾಸಜೀವಿತ್ವಂ।
ಪಾಪಂ ಸರ್ವಂ ಹತ್ವಾ। ಭವಭಯ ನಾಶ ತ್ವಮ್ ॥ ೬ ॥

ಭಾವಾರ್ಥ: ಸದ್ಗುರು ರಾಜನನ್ನು ಭಜಿಸು. ಶ್ರೀಗುರುರಾಜನನ್ನು ಭಜಿಸು. ಮಾಯೆಯಿಂದ ಕೂಡಿದ ಈ ಸಂಸಾರದ ಜಂಜಾಟವನ್ನು ಬಿಟ್ಟು ಬಿಡು. ಚಿನ್ಮಯರೂಪನೂ, ಅಖಿಲಾನಂದ ಸ್ವರೂಪನೂ, ಅಗಣಿತ ತೇಜಃಪುಂಜನಾದ ನೀರಾಂಜನ ಪ್ರಕಾಶ ಸಮಾನನೂ ಆದ ಸದ್ಗುರುವನ್ನು ಭಜಿಸು. ನವರಂಗಗಳಾದ ಹಳದಿ, ಬಿಳಿ, ತಾಮ್ರವರ್ಣ, ನೀಲಿ, ಕಪ್ಪುಗಳಿಂದ ಶೋಭಿಸುವ ಆಕಾಶವನ್ನು ನೋಡು. ಗುಹ್ಯಾಗುಹ್ಯ ಸ್ವರೂಪನೂ, ಪಾಪನಾಶಕನೂ, ಭವಭಯತಾಪ ಪರಿಹಾರಕನೂ, ಶ್ರುತಿಗಳಿಂದ ಹಾಡಿಸಿಕೊಳ್ಳುವವನೂ ಆದಂಥ ಸದ್ಗುರುರಾಜನನ್ನು ಭಜಿಸು. ಘಂಟೆಗಳ ಕಿಣಿಕಿಣಿ ನಾದದಿಂದ, ಸಿಂಹಸದೃಶ ಶಂಖನಾದದಿಂದ, ಭೇರಿ ಮುಂತಾದ ಮಹಾನಾದಗಳ ಅನುಭವದಿಂದ ಮನಸ್ಸು ಮುಗ್ಧವಾಗಿದೆ. ಮುನಿಗಳ ಮನಸ್ಸಿಗೆ ಆನಂದವನ್ನು ಕೊಡುವಂಥವನೂ, ಮಾಯಾಗುಣವನ್ನು ಇಲ್ಲದ ಹಾಗೆ ಮಾಡಿ, ಶ್ರೇಷ್ಠ

# ಪಂಚಪದಗಳು

ಮಾರ್ಗವನ್ನು ತೋರಿಸಿಕೊಡುವಂಥವನೂ, ಪುರಾಣಪುರುಷನೂ ಆದ ಸದ್ಗುರುವನ್ನು ಭಜಿಸು. ಪಾಪಗಳನ್ನೆಲ್ಲ ಕಳೆಯುವ ಭವಭಯವನ್ನು ದೂರಮಾಡುವ ಸ್ತೋತ್ರವನ್ನು ಪಠಿಸಿ ದಾಸನ ಜೀವನ ಪಾವನವಾಯಿತು. ಅಂಥ ಸದ್ಗುರುನಾಥನನ್ನು ಭಜಿಸು. ಶ್ರೀಗುರುರಾಜನನ್ನು ಭಜಿಸು.

## ಪದ-೨

ಸದ್ಗುರು ಚಿದ್ಘನ ತುಜಲಾ।
ಆಲೋ ಶರಣ ಮೀ ತಾರೀ ಮಜಲಾ॥
ಜಯಗುರು ಜಯಗುರು ಜಯಗುರು ಜಯ।
ಜಯಗುರು ಜಯಗುರು ಜಯಗುರು ಜಯ ॥ ಧೃ ॥

ಶೃತಿ-ಸ್ಮೃತಿ ತುಜಲಾ ಗಾತೀ।
ಪರಿ ತೀ ಆಜವರೀ ನ ಹೋಯ ಪುರತೀ ॥ ಜಯ... ॥ ೧ ॥

ಶೇಷ ಸಹಸ್ರಮುಖೀ ವರ್ಣಿತಾ।
ಪರಿ ತೋ ಆಜವರೀ ನ ಹೋಯ ಪುರತಾ ॥ ಜಯ... ॥ ೨ ॥

ಪಹಾ ವಾಗೀಶ್ವರೀ ತುಜ ಸ್ತವಿತೀ।
ಪರಿ ತೀ ಆಜವರೀ ನ ಹೋಯ ಪುರತೀ ॥ ಜಯ... ॥ ೩ ॥

ಸಂತ ಸಜ್ಜನೀ ವರ್ಣಿಲೇ ಬಹೂ।
ಐಸಾ ತೂ ಏಕ ದೇವಾಧಿದೇವೂ ॥ ಜಯ... ॥ ೪ ॥

ಪಾಹೂ ಜಾತಾ ತುಮಚಾ ಅಂತ।
ನಲಗೇ ಮ್ಹಣುನೀ ತುಮ್ಹೀ ಅನಂತ ॥ ಜಯ... ॥ ೫ ॥

ಜಾಣುನಿ ಜೇ ಜನ ಧರಿತೀಲ ಪಂಥ।
ತೇ ತೇ ಝಾಲೇ ತವ ಪದೀ ಸಂತ ॥ ಜಯ... ॥ ೬ ॥

ಸಚರಾಚರ ತೂ ನಿರ್ಮಿತಾ।
ಸರ್ವಾವರತೀ ತುಮಚೀ ಸತ್ತಾ ॥ ಜಯ... ॥ ೭ ॥

ಸಾಧಕಾಚೀ ಪುರವೂನಿ ಕಾಮಾ।
ತೂಚಿ ಸಹಜ ಕರಿಸೀ ನಿಷ್ಕಾಮಾ ॥ ಜಯ... ॥ ೮ ॥

ಯಾ ದಾಸಾ ತವ ಪದೀ ಪ್ರೇಮಾ।
ದೇವೂನಿ ಕರಿಸೀ ಮಲಾ ಉತ್ತಮಾ ॥ ಜಯ... ॥ ೯ ॥

**ಭಾವಾರ್ಥ:** ಚಿದ್ಘನ ಸದ್ಗುರುವೇ, ನಾನು ನಿನಗೆ ಶರಣು ಬಂದಿದ್ದೇನೆ, ನನ್ನನ್ನು ರಕ್ಷಿಸು. ಜಯಗುರು, ಜಯಗುರು, ಜಯಗುರು ಜಯ. ಶೃತಿ-ಸ್ಮೃತಿಗಳು ನಿನ್ನನ್ನು ಹೊಗಳುತ್ತವೆ. ಆದರೂ ಅದು ಇದುವರೆಗೆ ಪೂರ್ಣವಾಗಿಲ್ಲ. ಸಹಸ್ರಮುಖದ ಶೇಷನು ವರ್ಣಿಸಿದರೂ ಅದು ಪೂರ್ತಿಯಾಗಿಲ್ಲ. ಸರಸ್ವತೀದೇವಿ ನಿನ್ನನ್ನು ಸ್ತುತಿಸಿದರೂ ಅದು ಇನ್ನೂ ಮುಗಿದಿಲ್ಲ. ಬೇಕಾದಷ್ಟು ಸಾಧು-ಸಂತರು, ಸಜ್ಜನರು ನಿನ್ನ ಮಹಿಮೆಯನ್ನು ಹಾಡಿದರೂ ಅವರಿಗೆ ತೃಪ್ತಿಯಾಗದಂಥ ದೇವಾಧಿದೇವನು ನೀನು. ನಿನಗೆ ಆದಿಯಿಲ್ಲ, ಅಂತ್ಯವಿಲ್ಲ;

## ಪಂಚಪದಗಳು

ಅನಂತನು ನೀನು. ನಿನ್ನನ್ನು ಅರಿತುಕೊಂಡ ಜನರು ಭಕ್ತಿಪಥ ಹಿಡಿದು ನಿನ್ನ ಚರಣಸೇವಕರಾಗಿ ಸಂತರೆನಿಸಿಕೊಂಡಿದ್ದಾರೆ. ಚರಾಚರ ಸೃಷ್ಟಿಯ ಕರ್ತಾರನು ನೀನು. ನಿನ್ನ ಸತ್ತೆಯಿಂದ ಎಲ್ಲವೂ ನಡೆಯುತ್ತಿದೆ. ಸಾಧಕರ ಕಾಮನೆಗಳನ್ನು ಪೂರೈಸಿ ಅವರನ್ನು ನಿಷ್ಕಾಮರನ್ನಾಗಿ ಮಾಡುತ್ತೀ. ನಿನ್ನ ಚರಣದಡಿಯಲ್ಲಿ ನನಗೆ ಪ್ರೀತಿಯನ್ನು ದಯಪಾಲಿಸಿ ನನ್ನನ್ನು ಉತ್ತಮ (ಶ್ರೇಷ್ಠ)ನನ್ನಾಗಿ ಮಾಡುತ್ತೀ ಎಂದು ದಾಸನು ಅನ್ನುತ್ತಾನೆ.

### ಪದ-೩

ಪ್ರಾರ್ಥನಾ ಐಕಾ ಮಾಝೀ। ಗುರುರಾಯಾ ಸಮರ್ಥಾ।
ತ್ರಿಭುವನೀ ತೂಚಿ ಥೋರ। ದೀನಜನ ಉದ್ಧರಿತಾ ॥ ೧ ॥

ಸದ್ಬುದ್ಧೀ ದೇ ಮಜಲಾ। ದುರ್ಬುದ್ಧೀಚಾ ವೀಟ ಆಲಾ।
ಕಾಮಾದಿವೈರಿ ವಾರೀ। ಕರೀ ನಿಷ್ಕಾಮ ಮಜಲಾ ॥ ೨ ॥

ವಾಸನಾ ಮನೀ ವಸಲೀ। ಕಧೀ ನಿಘೇನಾಶೀ ಜಾಹಲೀ।
ಕೋಠವರಿ ತಿಸಿ ಭಾಂಡೂ। ಮತಿ ಮಾಝೀ ಥಕಲೀ ॥ ೩ ॥

ಮೋಹಮಾಯಾ ಮಮತಾ ಭಾರೀ। ಗಾಂಜಿತಾತೀ ಪರೋಪರೀ।
ಯಾತೂನಿ ಸೋಡವಿ ಬಾ। ತೂಚಿ ಮಾಝಾ ಕೈವಾರೀ ॥ ೪ ॥

ನಿದ್ರಾ ಹೀ ರಾಂಡ ಖೋಟೀ। ನಿತ್ಯ ಲಾಗಲೀಸೇ ಪಾಠೀ।
ಆಯುಷ್ಯ ವ್ಯರ್ಥ ಗೇಲೇ। ಪಾಹೂ ನೇದಿ ಜಗಜೇಠೀ ॥ ೫ ॥

ದೇಹಭಾವ ಬಹು ಖೋಟಾ। ಮಜ ಕರೂನಿ ಕರಂಟಾ।
ದೇಶೋಧಡಿ ಲಾವಿಯೇಲೆ। ಅನ್ನ ನ ಮಿಳೇ ಪೋಟಾ ॥ ೬ ॥

ಐಸೇ ಹೇ ಅನಂತ ಗುಣ। ಗಾಂಜಿತಾತೀ ಕಠೀಣ।
ಯಾತೂನಿ ಕೋಣ ಮಜಲಾ। ಸೋಡವಿ ಬಾ ತುಜವಿಣ ॥ ೭ ॥

ಪ್ರಾರ್ಥನಾ ಪರಿಸಾವೀ। ಗುರುರಾಯಾ ಗೋಸಾವೀ।
ದುರ್ಗುಣ ವಾರೂನಿಯಾ। ದ್ಯಾವೀ ಸಾಯುಜ್ಯಪದವೀ ॥ ೮ ॥

ದಾಸಾಸಿ ಸಂರಕ್ಷಾ। ಕಾಮಧೇನು ಕಲ್ಪವೃಕ್ಷಾ।
ಆಪುಲೇ ಬ್ರೀದ ರಕ್ಷಾ। ಪುರವೀ ಮಾಝೀ ಅಪೇಕ್ಷಾ ॥ ೯ ।

ಭಾವಾರ್ಥ: ಸಮರ್ಥಾ ಗುರುರಾಯಾ, ನನ್ನ ಪ್ರಾರ್ಥನೆಯನ್ನು ಕೇಳು. ದೀನ ಜನರನ್ನು ಉದ್ಧಾರ ಮಾಡುವ ಕಾರ್ಯದಲ್ಲಿ ನೀನೇ ಅತ್ಯಂತ ಶ್ರೇಷ್ಠನು. ನನಗೆ ದುರ್ಬುದ್ಧಿಯಿಂದ ಮನಸ್ಸು ರೋಸಿ ಹೋಗಿದೆ. ಸದ್ಬುದ್ಧಿಯನ್ನು ಕೊಡು. ಕಾಮಾದಿ ವೈರಿಗಳನ್ನು ಹೊಡೆದು ಹಾಕಿ ನನ್ನನ್ನು ನಿಷ್ಕಾಮನನ್ನಾಗಿ ಮಾಡು. ಕೆಟ್ಟ ವಾಸನೆಗಳು ನನ್ನಲ್ಲಿ ಮನೆ ಮಾಡಿಕೊಂಡಿದ್ದು ಹೊರಟು ಹೋಗದಂತಾಗಿವೆ. ಎಷ್ಟೊಂದು ಅವುಗಳ ಕೂಡ ಹೋರಾಡಲಿ? ನನ್ನ ಮನಸ್ಸು ದಣಿಯಿತು. ಮೋಹ-ಮಾಯೆ-ಮಮತೆಗಳ ಸುಳಿಯಲ್ಲಿ ಸಿಕ್ಕು ಒದ್ದಾಡುತ್ತಿದ್ದೇನೆ. ನೀನೇ ನನ್ನ ಕೈವಾರಿ. ನನ್ನನ್ನು ಅವುಗಳಿಂದ ಮುಕ್ತ ಮಾಡು. ನಿದ್ರೆಯೆಂಬ ಕೆಟ್ಟ ಹೆಂಗಸು ದಿನಾಲು ನನ್ನ ಬೆನ್ನು ಹತ್ತಿ ನನ್ನ ಆಯುಷ್ಯವನ್ನೆಲ್ಲ

ಹಾಳುಮಾಡಿದ್ದಾಳೆ. ಮತ್ತು ನಿನ್ನ ದರ್ಶನ ಆಗದಂತೆ ಮಾಡಿದ್ದಾಳೆ. ಕೆಟ್ಟ ದೇಹಬುದ್ಧಿಯು ನನ್ನನ್ನು ತನ್ನ ವಶದಲ್ಲಿರಿಸಿಕೊಂಡು ಹೊಟ್ಟೆಗೆ ಅನ್ನ ಸಿಗದಂತೆ ಮಾಡಿದೆ. ಈ ಅನಂತ ದುರ್ಗುಣಗಳೆಲ್ಲ ನನ್ನನ್ನು ಬಹುವಾಗಿ ಪೀಡಿಸುತ್ತವೆ. ನಿನ್ನ ಹೊರತಾಗಿ ಯಾರು ನನ್ನನ್ನು ಇದರಿಂದ ಪಾರು ಮಾಡುವರು? ನನ್ನ ಪ್ರಾರ್ಥನೆಯನ್ನು ಕೇಳು ಗೋಸಾವಿ, ಗುರುರಾಯಾ. ದುರ್ಗುಣಗಳನ್ನೆಲ್ಲ ನಾಶಮಾಡಿ ನನಗೆ ಸಾಯುಜ್ಯ ಪದವಿಯನ್ನು ಕೊಡು. ನೀನು ಭಕ್ತರ ಕಾಮಧೇನು, ಕಲ್ಪವೃಕ್ಷ. ನನ್ನ ಮನೋರಥಗಳನ್ನು ಈಡೇರಿಸಿ ನಿನ್ನ ಬಿರುದನ್ನು ಉಳಿಸಿಕೋ ಎಂದು ದಾಸನು ಪ್ರಾರ್ಥಿಸುತ್ತಾನೆ.

### ಪದ-೪

ಹೇಚಿ ದಾನ ದೇಯೀ ಸ್ವಾಮೀ।
ರಾಹೋ ಮನ ನಿತ್ಯ ನಾಮೀ ॥ ೧ ॥

ತುಝೀ ಸೇವಾ ಅಖಂಡೀತ।
ಘಡೋ, ರೂಪೀ ಜಡೋ ಚಿತ್ತ ॥ ೨ ॥

ಅಹರ್ನಿಶೀ ಸಂತಸಂಗ।
ಘಡೋ ಮಜ ಹಾ ಪ್ರಸಂಗ ॥ ೩ ॥

ದುರಿತಕಾನನ ದಹನ ಕರಾ।
ಪುಣ್ಯರೂಪ ವೈಶ್ವಾನರಾ ॥ ೪ ॥

ಶಿರೀ ಶೇವೂನಿಯಾ ಹಾತ।
ದಾಸಾ ಕರಿಸೀ ಜೇವನ್ಮುಕ್ತ ॥ ೫ ॥

ತೂಚಿ ಮಾತಾ ಪಿತಾ।
ತೂಚಿ ಮಾಝೀ ಭಗಿನೀ ಭ್ರಾತಾ।
ತೂಜವಿಣೇ ಚಿತ್ತಾ।
ನಾವಡೇಚೀ ದುಸರೆ ॥ ೬ ॥

ತೂಚಿ ಮಾಝೀ ಕುಲದೈವತ।
ತೂಚಿ ಮಾಝೀ ಗಣಗೋತ।
ತೂಚಿ ಮಾಝೀ ವಿತ್ತ।
ನಾವಡೇಚಿ ದುಸರೇ ॥ ೭ ॥

ತೂಚಿ ಮಾಝೀ ಪ್ರೇಮಸುಖ।
ತೂಚಿ ಮಾಝೀ ನಿರಸೀ ದುಃಖ।
ತೂಜವಿಣೇ ದೇಖ।
ನಾವಡೇಚಿ ದುಸರೇ ॥ ೮ ॥

ತೂಚಿ ದಾಸಾಚಾ ಸಾರಥೀ।
ತೂಚಿ ಮಾಝೀ ಭಾಗೀರಥೀ॥
ತುಜವಿಣೇ ಗುರುಮೂರ್ತಿ।
ನಾವಡೇಚಿ ದುಸರೇ ॥ ೯ ॥

ಭಾವಾರ್ಥ: ದಿನಾಲು ನಿನ್ನ ನಾಮವು ನನ್ನ ಮನದಲ್ಲಿರಲಿ. ಇದೇ ದಾನವನ್ನು ನನಗೆ ನೀಡು ಸ್ವಾಮೀ. ನಿನ್ನ ರೂಪವು ಚಿತ್ತದಲ್ಲಿ ಶಾಶ್ವತವಾಗಿ ನೆಲೆಸಲಿ. ನಿನ್ನ ಅಖಂಡಸೇವೆ ನನಗೆ ದೊರೆಯಲಿ. ಹಗಲಿರುಳು ಸತ್ಸಂಗ ದೊರೆಯಲಿ. ಇಂಥ ಪ್ರಸಂಗವು ನನಗೆ ಒದಗುತ್ತಿರಲಿ. ಪುಣ್ಯದ ಸಾಕ್ಷಾತ್ಕಾರ ರೂಪವೆನಿಸಿದ ವೈಶ್ವಾನರಾ, ಪಾಪಗಳನ್ನೆಲ್ಲ ಸುಟ್ಟು ಹಾಕಿ, ತಲೆಯ ಮೇಲೆ ನಿನ್ನ ಕೈಯಿಟ್ಟು ಅನುಗ್ರಹಿಸಿ, ಈ ದಾಸನಿಗೆ ಜೀವನ್ಮುಕ್ತಿಯನ್ನು ಕೊಡು. ನೀನೇ ನನ್ನ ತಾಯಿ, ತಂದೆ; ನೀನೇ ಅಣ್ಣ, ತಮ್ಮ; ನೀನೇ ಅಕ್ಕ, ತಂಗಿ; ನಿನ್ನನ್ನು ಬಿಟ್ಟು ನನ್ನ ಮನಸ್ಸು ಯಾರನ್ನೂ ಇಚ್ಛಿಸುವದಿಲ್ಲ. ನೀನೇ ನನ್ನ ಕುಲದೈವ. ನೀನೇ ನನ್ನ ಐಶ್ವರ್ಯ. ನೀನೇ ನನ್ನ ಬಳಗ. ನನಗೆ ಬೇರೆ ಯಾವುದೂ ಬೇಡ. ನೀನೇ ನನ್ನ ಸುಖ. ನೀನೇ ನನ್ನ ದುಃಖನಿವಾರಕನು. ನೀನೇ ಭಕ್ತರಸಾರಥಿ. ನೀನೇ ನನ್ನ ಭಾಗೀರಥೀ. ನಿನ್ನ ಹೊರತಾಗಿ ಯಾರೂ ನನಗೆ ಬೇಡ ಎಂದು ದಾಸನು ಅನ್ನುತ್ತಾನೆ.

### ಪದ-೫

ಆತಾ ಫಾರ ಕಾಯ ಬೋಲೂ ತುಮ್ಹಾಪುಢೇ।
ಪುರೇ ಕರ್ಮಝಾಡೇ ಭೋಗಣೇ ತೇ॥
ಭೋಗಣೇ ತೇ ಸುಖ ಉಚಿತ ಯಾ ಜೀವಾ
ಪುರವಾವೀ ಕೇಶವಾ ಆಸ ಮಾಝೀ॥
ಮಾಝೀ ಆಸ ತುಮ್ಹೀ ಕರಾವೀ ಸಫಳ।

ಆತಾ ಉತಾವೇಳ ಜೀವ ಝಾಲಾ॥
ಝಾಲಾ ಜೀವ ಕಷ್ಟೀ ತುಜವಿಣ ಝುರೇ।
ಪುರೇ ಆತಾ ಪುಢೇ ಗರ್ಭವಾಸ॥
ಗರ್ಭವಾಸ ಮಾಝಾ ಚುಕವೀ ಬಾ ದಯಾಳಾ।
ವಿನವಿತೋ ಕೃಪಾಳಾ ಪರಿಸಾ ದಾಸಾ॥

ಭಾವಾರ್ಥ: ಕೇಶವಾ, ಇನ್ನು ನಿಮ್ಮ ಮುಂದೆ ಎಷ್ಟೆಂದು ಹೇಳಲಿ? ಹುಟ್ಟು-ಸಾವುಗಳ ಭೋಗ ಸಾಕು. ಈ ಜೀವಕ್ಕೆ ಯೋಗ್ಯವಾದ ಶಾಶ್ವತ ಸುಖ ಭೋಗವನ್ನು ಕೊಡು. ಮನದ ಈ ಇಚ್ಛೆಯನ್ನು ಪೂರೈಸು. ಈ ಜೀವವು ನಿನ್ನನ್ನು ನೋಡಲು ಬಹಳ ಆತುರವಾಗಿದೆ. ಅಪಾರ ಕಷ್ಟವನ್ನನುಭವಿಸಿದೆ. ಪುನಃ ಜನ್ಮವೆತ್ತುವದು ಬೇಡ. ಗರ್ಭವಾಸವನ್ನು ತಪ್ಪಿಸು. ಕೃಪಾಳುವಾದ ದೇವಾ, ಈ ದೀನನ ಪ್ರಾರ್ಥನೆಯನ್ನು ಕೇಳು ಎಂದು ದಾಸನು ಹೇಳುತ್ತಾನೆ.

ಸಪ್ತಾಹದಲ್ಲಿ ಪೋಥೀ ಓದುವ ಮುನ್ನ ಅನ್ನುವ ಸ್ತೋತ್ರ:

## ನಾರಾಯಣಸ್ತೋತ್ರಮ್

॥ ಶ್ರೀ ಗಣೇಶಾಯ ನಮಃ ॥

ನಾರಾಯಣ ನಾರಾಯಣ ಜಯ ಗೋವಿಂದ ಹರೇ॥
ನಾರಾಯಣ ನಾರಾಯಣ ಜಯ ಗೋಪಾಲ ಹರೇ ॥ ಧೃ ॥
ಕರುಣಾಪಾರಾವಾರ ವರುಣಾಲಯಗಂಭೀರ ॥ ೧ ॥

## ನಾರಾಯಣಸ್ತೋತ್ರಮ್

ಘನನೀರದಸಂಕಾಶ ಕೃತಕಲಿಕಲ್ಮಷನಾಶ ॥ ೨ ॥

ಯಮುನಾತೀರವಿಹಾರ ಧೃತಕೌಸ್ತುಭಮಣಿಹಾರ ॥ ೩ ॥

ಪೀತಾಂಬರಪರಿಧಾನ ಸುರಕಲ್ಯಾಣನಿಧಾನ ॥ ೪ ॥

ಮಂಜುಲಗುಂಜಾಭೂಷ ಮಾಯಾಮಾನುಷವೇಷ ॥ ೫ ॥

ರಾಧಾಽಧರಮಧುರಸಿಕ ರಜನೀಕರಕುಲತಿಲಕ ॥ ೬ ॥

ಮುರಲೀಗಾನವಿನೋದ ವೇದಸ್ತುತಭೂಪಾದ ॥ ೭ ॥

ಬರ್ಹಿನಿಬರ್ಹಾಪೀಡ ನಟನಾಟಕಫಣಿಕ್ರೀಡ ॥ ೮ ॥

ವಾರಿಜಭೂಷಾಭರಣ ರಾಜೀವರುಕ್ಮಿಣೀರಮಣ ॥ ೯ ॥

ಜಲರುಹದಲನಿಭನೇತ್ರ ಜಗದಾರಂಭಕಸೂತ್ರ ॥ ೧೦ ॥

ಪಾತಕರಜನೀಸಂಹರ ಕರುಣಾಲಯ ಮಾಮುದ್ಧರ ॥ ೧೧ ॥

ಅಘಬಕಕ್ಷಯಕಂಸಾರೇ ಕೇಶವ ಕೃಷ್ಣ ಮುರಾರೇ ॥ ೧೨ ॥

ಹಾಟಕನಿಭಪೀತಾಂಬರ ಅಭಯಂ ಕುರುಮೇ ಮಾವರ ॥ ೧೩ ॥

ದಶರಥರಾಜಕುಮಾರ ದಾನವಮದಸಂಹಾರ ॥ ೧೪ ॥

ಗೋವರ್ಧನಗಿರಿರಮಣ ಗೋಪೀಮಾನಸಹರಣ ॥ ೧೫ ॥

ಸರಯೂತೀರವಿಹಾರ ಸಜ್ಜನಋಷಿಮಂದಾರ ॥ ೧೬ ॥

## ನಿತ್ಯನೇಮಾವಲಿ

ವಿಶ್ವಾಮಿತ್ರಮಖತ್ರ ವಿವಿಧಪರಾಸುಚರಿತ್ರ ॥ ೧೭ ॥

ಧ್ವಜವಜ್ರಾಂಕುಶಪಾದ ಧರಣೀಸುತಸಹಮೋದ ॥ ೧೮ ॥

ಜನಕಸುತಾಪ್ರತಿಪಾಲ ಜಯ ಜಯ ಸಂಸ್ಮೃತಿಲೀಲ ॥ ೧೯ ॥

ದಶರಥವಾಗ್ಧೃತಿಭಾರ ದಂಡಕವನಸಂಚಾರ ॥ ೨೦ ॥

ಮುಷ್ಟಿಕಬಾಣೂರಸಂಹಾರ ಮುನಿಮಾನಸವಿಹಾರ ॥ ೨೧ ॥

ವಾಲಿವಿನಿಗ್ರಹಶೌರ್ಯ ವರಸುಗ್ರೀವಹಿತಾರ್ಯ ॥ ೨೨ ॥

ಮಾಂ ಮುರಲೀಕರ ಧೀವರ ಪಾಲಯ ಪಾಲಯ ಶ್ರೀಧರ ॥ ೨೩ ॥

ಜಲನಿಧಿಬಂಧನಧೀರ ರಾವಣಕಂಠವಿದಾರ ॥ ೨೪ ॥

ತಾಟೀಮದದಲನಾಢ್ಯ ನಟಗುಣ ವಿವಿಧಧನಾಢ್ಯ ॥ ೨೫ ॥

ಗೌತಮಪತ್ನೀಪೂಜನ ಕರುಣಾಘನಾವಲೋಕನ ॥ ೨೬ ॥

ಸಂಭ್ರಮಸೀತಾಹಾರ ಸಾಕೇತಪುರವಿಹಾರ ॥ ೨೭ ॥

ಅಚಲೋದ್ಧೃತಿಚಂಚತ್ಕರ ಭಕ್ತಾನುಗ್ರಹತತ್ಪರ ॥ ೨೮ ॥

ನೈಗಮಗಾನವಿನೋದ ರಕ್ಷಃಸುತಪ್ರಲ್ಹಾದ ॥ ೨೯ ॥

ಭಾರತಿಯತಿವರಶಂಕರ ನಾಮಾಮೃತಮಖಿಲಾಂತರ ॥ ೩೦ ॥

# ನಾರಾಯಣಸ್ತೋತ್ರಮ್

ನಾರಾಯಣ ನಾರಾಯಣ ಜಯ ಗೋವಿಂದ ಹರೇ॥
ನಾರಾಯಣ ನಾರಾಯಣ ಜಯ ಗೋಪಾಲ ಹರೇ॥

ಇತಿ ಶ್ರೀಮತ್ ಶಂಕರಾಚಾರ್ಯವಿರಚಿತಂ ನಾರಾಯಣಸ್ತೋತ್ರಂ ಸಂಪೂರ್ಣಮ್॥

ಭಾವಾರ್ಥ: ನಾರಾಯಣ ನಾರಾಯಣ ಜಯ ಗೋವಿಂದ ಹರೇ, ನಾರಾಯಣ ನಾರಾಯಣ ಜಯ ಗೋಪಾಲ ಹರೇ. ಕರುಣೆಯ ಸಮುದ್ರದಂತೆ ಅತಿ ಗಂಭೀರನಾಗಿರುವಿ. ದಟ್ಟವಾದ ಮೋಡಗಳ ಶ್ಯಾಮಲವರ್ಣದವನೇ ಕಲಿಯುಗದಲ್ಲಿಯ ಪಾಪಗಳನ್ನು ತೊಳೆಯುವವನು ನೀನು. ಯಮುನಾತೀರದಲ್ಲಿ ವಿಹಾರ ಮಾಡುವವನೇ, ಕೌಸ್ತುಭಮಣಿ ಹಾರವನ್ನು ಹಾಕಿಕೊಂಡವನೇ, ನೀನು ಪೀತಾಂಬರಧಾರಿಯೂ, ದೇವತೆಗಳ ಕಲ್ಯಾಣದ ತವರುಮನೆಯೂ ಆಗಿರುವಿ. ಮಂಜುಳವಾದ ಗುಲಗಂಜಿಯ ಹಾರದಿಂದ ಶೋಭಿಸುವವನೂ, ಮಾಯಾವಿಯಾದ ಮನುಷ್ಯನ ವೇಷಧರಿಸಿದವನೂ, ರಾಧೆಯ ತುಟಿಯಲ್ಲಿಯ ಅಮೃತಸ್ವಾದ ಮಾಡುವವನೂ, ಚಂದ್ರಕುಲಶ್ರೇಷ್ಠನೂ ಆಗಿರುವಿ. ಮುರಲಿಯ ಧ್ವನಿರಂಜಿಸಿದವನು, ವೇದಗಳು ಸ್ತುತಿಮಾಡಿದರಸನು ನೀನು. ನವಿಲಿನ ಗರಿಗಳಿಂದ ಅಲಂಕೃತನೂ, ಕಾಳಿಂಗಸರ್ಪ ಹೆಡೆಯಮೆಟ್ಟಿ ನರ್ತಿಸಿದವನೂ, ಕಮಲಾಭರಣಗಳನ್ನು ಧರಿಸಿದವನೂ, ರುಕ್ಮಿಣಿಯ ರಮಣನೂ ಆಗಿರುವಿ. ನೀನು ಕಮಲದಳದ ಕಾಂತಿಯುಳ್ಳ ಕಣ್ಣುಗಳಿರುವವನು; ಜಗದಾರಂಭದ ಸೂತ್ರಧಾರಿಯು. ಪಾತಕಗಳ ಕತ್ತಲೆಯನ್ನು ಓಡಿಸುವ ಕರುಣಾಸಾಗರನೇ, ನನ್ನನ್ನು ಉದ್ಧರಿಸು.

ಅಘ-ಬಕ (ಇಬ್ಬರೂ ರಾಕ್ಷಸ ಅಣ್ಣತಮ್ಮಂದಿರು) ಹಾಗೂ ಕಂಸನ ಸಂಹಾರಕನೇ. ಕೇಶವ ಕೃಷ್ಣ ಮುರಾರಿಯೇ, ಬಂಗಾರ ಬಣ್ಣದ ಪೀತಾಂಬರಧಾರಿಯೇ, ಲಕ್ಷ್ಮೀವರನೇ, ನನಗೆ ಅಭಯಹಸ್ತ ನೀಡು. ದಶರಥ ರಾಜಕುಮಾರನೂ, ದಾನವರ ಸೊಕ್ಕನ್ನು ಸೂರೆ ಮಾಡುವವನೂ ಆಗಿರುವಿ ನೀನು. ಗೋವರ್ಧನ ಪರ್ವತ ಎತ್ತಿದ ರಮಣನೂ, ಗೋಪೀಜನರ ಮನಸ್ಸನ್ನು ಹರಣ ಮಾಡಿದವನೂ, ಶರಯೂ ತೀರದಲ್ಲಿ ವಿಹಾರ ಮಾಡುವವನೂ, ಸಜ್ಜನ ಋಷಿಗಳಿಗೆ ಮೇರುಸದೃಶನೂ ಆಗಿರುವಿ. ವಿಶ್ವಾಮಿತ್ರ ಋಷಿಯ ಯಜ್ಞದಲ್ಲಿ ಅನೇಕ ಶ್ರೇಷ್ಠ ಕಾರ್ಯಮಾಡಿ ಸಂರಕ್ಷಿಸಿದವನೇ, ಧ್ವಜವಜ್ರಾಂಕುಶ ಈ ಚಕ್ರವರ್ತಿಯ ಲಕ್ಷಣಗಳಿಂದ ಶೋಭಿತ-ಪಾದವುಳ್ಳವನೇ, ಜನಕ-ಸುತೆಯ ಪ್ರತಿಪಾಲಕನು ನೀನು ಇರುವಿ. ಸೃಷ್ಟಿ-ಲಯ-ಉತ್ಪತ್ತಿಯ ಲೀಲೆ ಮಾಡುವವನೇ ನಿನಗೆ ಜಯಜಯಕಾರ. ದಶರಥನ ಮಾತಿನ ಆಜ್ಞಾಪಾಲಕನೇ, ದಂಡಕಾರಣ್ಯ ಸಂಚಾರ ಕೈಕೊಂಡವನೇ, ಮುಷ್ಟಿಕ-ಚಾಣೂರ ರಾಕ್ಷಸರ ಸಂಹಾರ ಮಾಡಿದವನೇ, ಮುನಿಗಳ ಮನಸ್ಸಿನಲ್ಲಿ ಇರುವವನೇ ನೀನು ಆಗಿರುವಿ. ವಾಲಿಯನ್ನು ಶೌರ್ಯದಿಂದ ನಿಗ್ರಹಿಸಿ, ಶ್ರೇಷ್ಠನಾದ ಸುಗ್ರೀವನ ಹಿತವನ್ನು ಸಾಧಿಸಿದವನು ನೀನು. ಕೈಯಲ್ಲಿ ಮುರಲಿಯನ್ನು ಹಿಡಿದವನೂ, ಶ್ರೇಷ್ಠ ಬುದ್ಧಿವಂತನೂ ಆದ ಶ್ರೀಧರನೇ ನನ್ನನ್ನು ರಕ್ಷಿಸು. ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದ ಧೀರನೇ, ರಾವಣ ಸಂಹಾರಕನೇ, ತಾಟೀರಕ್ಕಸಿಯ ಸೊಕ್ಕು ಮುರಿದವನೇ, ಅನೇಕ ಸದ್ಗುಣಗಳಿಂದ ಸುಶೋಭಿತನೇ, ಕೃಪಾಕಟಾಕ್ಷದಿಂದ

ಅಹಲ್ಯೆಯನ್ನುದ್ಧರಿಸಿ ಅವಳಿಂದ ಪೂಜಿತನೇ, ಸೀತೆಯನ್ನು ಸಂಭ್ರಮದಿಂದ ಕರೆದುಕೊಂಡು ಬಂದು ಅಯೋಧ್ಯಾನಗರಿಯಲ್ಲಿ ವಿಹರಿಸುತ್ತಿರುವವನೇ, ಮಂದಾರ ಪರ್ವತವನ್ನು ಎತ್ತಿಹಿಡಿಯುವಲ್ಲಿ ನಿಪುಣ ಹಸ್ತನೇ, ಭಕ್ತ-ರಕ್ಷಣೆಯಲ್ಲಿ ಸದೈವ ತತ್ಪರನೇ, ಸಾಮಗಾಯನದಲ್ಲಿ ಆನಂದಿಸುವವನೇ, ಹಿರಣ್ಯ-ಕಶ್ಯಪುವಿನ ಮಗನಾದ ಪ್ರಹ್ಲಾದನ ರಕ್ಷಕನೇ, ಭಗವತ್ಪಾದ ಶಂಕರರಲ್ಲಿ ನಾಮಾಮೃತ ತುಂಬಿದವನೇ, ನಿನಗೆ ಜಯಜಯವಾಗಲಿ. ನಾರಾಯಣ ನಾರಾಯಣ ಜಯ ಗೋವಿಂದ ಹರೇ, ನಾರಾಯಣ ನಾರಾಯಣ ಜಯ ಗೋಪಾಲ ಹರೇ. ಹೀಗೆ ಶ್ರೀಮತ್ ಶಂಕರಾಚಾರ್ಯರು ರಚಿಸಿದ ನಾರಾಯಣಸ್ತೋತ್ರವು ಮುಗಿಯಿತು.

## ನಿರ್ವಾಣಷಟ್ಕಮ್

ಮನೋಬುದ್ಧ್ಯಹಂಕಾರಚಿತ್ತಾನಿ ನಾಹಮ್
ನ ಚ ಶ್ರೋತ್ರಜಿಹ್ವೇ ನ ಚ ಘ್ರಾಣನೇತ್ರೇ।
ನ ಚ ವ್ಯೋಮಭೂಮಿರ್ನ ತೇಜೋ ನ ವಾಯುಃ
ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥ ೧ ॥

ನ ಚ ಪ್ರಾಣಸಂಜ್ಞೋ ನ ವೈ ಪಂಚವಾಯುರ್
ನ ವಾ ಸಪ್ತಧಾತುರ್ನ ವಾ ಪಂಚಕೋಶಃ।
ನ ವಾಕ್ ಪಾಣಿಪಾದೌ ನ ಚೋಪಸ್ಥಪಾಯೂ
ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥ ೨ ॥

ನ ಮೇ ದ್ವೇಷರಾಗೌ ನ ಮೇ ಲೋಭಮೋಹೌ
ಮದೋ ನೈವ ಮೇ ನೈವ ಮಾತ್ಸರ್ಯಭಾವಃ।
ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷಃ
ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥ ೩ ॥

ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ
ನ ಮಂತ್ರೋ ನ ತೀರ್ಥ ನ ವೇದಾ ನ ಯಜ್ಞಾ।
ಅಹಂ ಭೋಜನಂ ನೈವ ಭೋಜ್ಯಂ ನ ಭೋಕ್ತಾ
ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥ ೪ ॥

ನ ಮೇ ಮೃತ್ಯುಶಂಕಾ ನ ಮೇ ಜಾತಿಭೇದಃ
ಪಿತಾ ನೈವ ಮೇ ನೈವ ಮಾತಾ ನ ಜನ್ಮ।
ನ ಬಂಧುರ್ನ ಮಿತ್ರಂ ಗುರುರ್ನೈವ ಶಿಷ್ಯಃ॥
ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥ ೫ ॥

ಅಹಂ ನಿರ್ವಿಕಲ್ಪೋ ನಿರಾಕಾರರೂಪೋ
ವಿಭುರ್ವ್ಯಾಪ್ಯ ಸರ್ವತ್ರ ಸರ್ವೇಂದ್ರಿಯಾಣಿ॥
ಸದಾ ಮೇ ಸಮತ್ವಂ ನ ಮುಕ್ತಿರ್ನ ಬಂಧಃ
ಚಿದಾನಂದರೂಪಃ ಶಿವೋಽಹಂ ಶಿವೋಽಹಂ ॥ ೬ ॥

ಇತಿ ಶ್ರೀ ಶಂಕರಾಚಾರ್ಯವಿರಚಿತಂ ನಿರ್ವಾಣಷಟ್ಕಂ ಸಂಪೂರ್ಣಮ್॥

## ನಿರ್ವಾಣಷಟ್ಕಮ್

ಭಾವಾರ್ಥ: ನಾನು, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ, ಇವುಗಳಲ್ಲಿ ಯಾವನೂ ಅಲ್ಲ. ನಾನು, ಕಿವಿ, ಮೂಗು, ಕಣ್ಣು, ನಾಲಿಗೆ ಇವೂ ಅಲ್ಲ. ಕೇಳುವವನೂ ಅಲ್ಲ, ಮೂಸಿಸುವನೂ ಅಲ್ಲ, ನೋಡುವವನೂ ಅಲ್ಲ, ಸವಿಯನ್ನು ಸವಿಯುವವನೂ ಅಲ್ಲ, ನಾನು ಭೂಮಿ ಆಕಾಶ, ತೇಜ, ವಾಯುವೂ ಅಲ್ಲ. ಚಿತ್ಸ್ವರೂಪನಾದ ಶಿವನೇ ನಾನು. ನಾನು ಪ್ರಾಣವೂ ಅಲ್ಲ. ಪಂಚವಾಯುಗಳೂ ಅಲ್ಲ, ಸಪ್ತಧಾತುಗಳೂ ಅಲ್ಲ, ಪಂಚಕೋಶಗಳೂ ಅಲ್ಲ, ಕೈ, ಕಾಲು, ಮಾತು, ಯಾವ ಜನನೇಂದ್ರಿಯವೂ ಅಲ್ಲ, ಚಿದಾನಂದರೂಪಿಯಾದ ಶಿವನೇ ನಾನು. ನನ್ನಲ್ಲಿ ದ್ವೇಷ-ಪ್ರೀತಿಗಳೂ ಇಲ್ಲ, ಲೋಭಮೋಹಗಳೂ ಇಲ್ಲ. ಮದ-ಮಾತ್ಸರ್ಯ ಭಾವನೆಗಳೂ ಇಲ್ಲ. ಧರ್ಮಾರ್ಥಕಾಮಮೋಕ್ಷ ಯಾವುದೂ ನಾನಲ್ಲ. ಚಿದಾನಂದರೂಪಿಯಾದ ಶಿವನೇ ನಾನು. ಪಾಪ-ಪುಣ್ಯಗಳೂ ನಾನಲ್ಲ, ಸುಖ-ದುಃಖಗಳೂ ಅಲ್ಲ, ನಾನು ತೀರ್ಥವೂ ಅಲ್ಲ, ಮಂತ್ರವೂ ಅಲ್ಲ, ವೇದವೂ ಅಲ್ಲ, ಯಜ್ಞವೂ ಅಲ್ಲ, ನಾನು ಭೋಜನವೂ ಅಲ್ಲ, ಭೋಜ್ಯವೂ ಅಲ್ಲ, ಭೋಜಿಸುವವನೂ ಅಲ್ಲ, ಚಿದಾನಂದಸ್ವರೂಪ ಶಿವನೇ ನಾನು. ನನಗೆ ಮೃತ್ಯುಭಯವೂ ಇಲ್ಲ, ಜಾತಿ-ಭೇದವೂ ಇಲ್ಲ, ನನಗೆ ಹುಟ್ಟೂ ಇಲ್ಲ, ತಾಯಿ-ತಂದೆ ಇಲ್ಲ, ಬಂಧುಮಿತ್ರರೂ ಇಲ್ಲ, ಗುರುವೂ ಇಲ್ಲ, ಶಿಷ್ಯರೂ ಇಲ್ಲ, ಚಿದಾನಂದಸ್ವರೂಪಿಯಾದ ಶಿವನೇ ನಾನು. ನಾನು ನಿರಾಕಾರನು, ನಿರ್ವಿಕಲ್ಪನು, ವಿಶ್ವವ್ಯಾಪಿಯಾಗಿ, ಎಲ್ಲೆಡೆಗೂ ಇಂದ್ರಿಯಗಳುಳ್ಳವ. ನನಗೆ

ಬಂಧನವೂ ಇಲ್ಲ, ಮುಕ್ತಿಯೂ ಇಲ್ಲ, ಎಲ್ಲವೂ ನನಗೆ ಸಮಸಮತ್ವದ್ದಾಗಿದೆ. ಚಿದಾನಂದರೂಪಿಯಾದ ಶಿವನೇ ನಾನು.ಹೀಗೆ ಶಂಕರಾಚಾರ್ಯರು ರಚಿಸಿದ ನಿರ್ವಾಣಷಟ್ಕವು ಸಂಪೂರ್ಣವಾಯಿತು.

## ಭೂಪಾಳ್ಯಾ-ಸುಪ್ರಭಾತ

೧

ಉಠಾ ಜೀ ಮಾಯಬಾಪ। ಉಠ ಕೀ ಜೀ ಮಾಯಬಾಪ ॥ ಧೃ ॥

ಕಶೀ ಲಾಗಲೀ ಝೋಪ, ಹುಜುರ ಜಾಲೂನಿಯಾ। ಯೇವಢೀ
ಚುಕವಾ ಖೇಪ ॥ ೧ ॥

ಹಿಂಡತಾ ದಿಶಾಂತರೀ। ಲಕ್ಷ ಚೌರ್‍ಯಾಂಶೀ ಚಾರೀ।
ಅಜುನಿ ಸಾಪಡೇನಾ। ತುಮ್ಹಾ ಸುವಾಟ ಬರೀ।
ಕೋಣತೇ ಹಿತ ಕೇಲೇ। ಸಾಂಗಾ ಬಾಪ ಲವಕರೀ ॥ ೨ ॥

ರಾತ್ರಂದಿವಸ। ತುಮ್ಹೀ ಸಾವಧ ಅಸಾ।
ತುಮಚ್ಯಾ ನಗರೀಚಾ। ಆಮ್ಹಾ ನಾಹಿ ಭರವಸಾ।
ಉಜೇಡ ಪಡತಾನಾ। ಗಳಾ ಪಡೇಲ ಫಾಸಾ ॥ ೩ ॥

ತುಮಚೇ ನಾಂದಣೂಕ। ಆಮ್ಹಾ ದಿಸೇನಾ ಬರೀ।
ತುಮಚ್ಯಾ ಶೇಜಾರೀ। ದೋನ ಲೋಭಿಷ್ಟ ನಾರೀ।
ತ್ಯಾಂಚ್ಯಾ ಯೋಗೇ ದುಃಖ। ತುಮಚ್ಯಾ ನಗರಾತ ಭಾರೀ ॥ ೪ ॥

## ಸುಪ್ರಭಾತ

ಮಾಗಲ್ಯಾ ಠೇವಣ್ಯಾಚಾ। ಕಾಹೀ ಐವಜ ಕಥಾ।
ತ್ಯಾಚ್ಯಾ ಸತ್ತೇನೇ। ಆಮ್ಹಿಂ ಬೋಲೂ ಖಡಖಡಾ।
ಏಕಾ ಜನಾರ್ದನೀ। ಧರಾ ಬಳಕಟ ಮೇಂಢಾ।
ಚಾಕರ ಹುಜೂರಾಚಾ। ಅವಘಾ ಘೇತೋ ಝಾಡಾ ॥ ೫ ॥

ಭಾವಾರ್ಥ: ತಾಯಿ ತಂದೆಗಳೇ ಏಳಿರಿ, ಏಳಿರಲ್ಲಾ, ತಾಯಿ ತಂದೆಗಳೇ. ನಿಮಗೆ ನಿದ್ರೆ ಹೇಗೆ ಹತ್ತಿತು. ಗುರುವಿನೆಡೆಗೆ ಹೋಗಿ, ತಿರುಗಿ ತಿರುಗಿ ಹೋಗಿ ಬರುವ, ಈ ಯಾತನೆಯನ್ನು ತಪ್ಪಿಸಿರಿ. ಎಂಬತ್ನಾಲ್ಕು ಲಕ್ಷ ಯೋನಿಗಳಲ್ಲಿ ದಿಕ್ಕುದಿಕ್ಕಿನಲ್ಲಿ ಅಲೆದಾಡುವ ನಿಮಗೆ ದೇವರನ್ನು ತಿಳಿಯುವ ಸುಮಾರ್ಗ ದೊರೆಯಲು ನೀವು ಮಾಡಿದ ಒಳ್ಳೇ ಕೆಲಸವೇನು? ಹೇಳಿರಿ ಬೇಗನೇ ಅಪ್ಪಯ್ಯಗಳಿರಾ. ರಾತ್ರಿ ಹಗಲೂ ನೀವು ಹುಷಾರಾಗಿರಿ. ನಮಗೇನೋ ನಿಮ್ಮ ಶರೀರದ ಬಗ್ಗೆ ಭರವಸೆಯೇ ಇಲ್ಲ. ಬೆಳಗಾಗುವದರೊಳಗಾಗಿ ಯಮನವರು ದಾಳಿ ಮಾಡಬಹುದು. ನಿಮ್ಮ ಆಚರಣೆ ನಮಗೆ ಸರಿ ಕಾಣದು. ಯಾಕೆಂದರೆ ನಿಮ್ಮ ಹತ್ತಿರ ಋದ್ಧಿ ಸಿದ್ಧಿ ಎಂಬ ಇಬ್ಬರು ಹೆಣ್ಣುಮಕ್ಕಳು ಇರುವುದರಿಂದ ಅವರಿಂದ ನಿಮ್ಮ ಶರೀರಕ್ಕೆ ದುಃಖವಾಗುತ್ತದೆ. ಹಿಂದಿನ ಜನ್ಮದ ಪುಣ್ಯದ ಬಲದಿಂದ ದೇವರ ದಾಸರಾದ ನಾವು ಭಕ್ತಿಯ ಸ್ತಂಭವನ್ನು ಬಲವಾಗಿ ಹಿಡಿದು, ಜನ್ಮ ಮರಣ ಇಲ್ಲದಂತೆ ಮಾಡಿ, ಪರಮೇಶ್ವರನ ಜಯಜಯಕಾರ ಮಾಡುವಾ ಅಂತಾ ಏಕನಾಥ ಮಹಾರಾಜರು ಹೇಳುತ್ತಾರೆ.

## ೨

ಉಠಾ ಹೋ ಸದ್ಗುರುರಾಯಾ, ಭಕ್ತ ಆಲೇ ತುಜ ಪಹಾಯಾ।
ಚಲಾವೇ ಮಹಾದ್ವಾರೀ, ದಾಸ ಲಾಗತಸೇ ಪಾಯಾ।
ಉಠಾ ಹೋ ಸದ್ಗುರು ರಾಯಾ ॥ ಧ್ರು ॥

ಮಹಾದ್ವಾರೀ ಸ್ವಾಮೀ ಯಾವೇ, ಜಮಲೇ ಭಕ್ತಾಂಚೇ ಥವೇ।
ವೋಭಾಹತೀ ತುಮಚೀ ಭೇಟೀ, ಪ್ರೇಮೇ ದರ್ಶನ ದ್ಯಾವೇ ॥ ೧ ॥

ಏಕೀ ಘೇವೂನೀ ಪಂಚಾರತೀ, ಏಕೀ ರಂಗಮಾಳಾ ಘಾಲಿತೀ।
ಏಕೀ ದೀಪ ಪಾಜಳೋನೀ, ತುಮ್ಹಾಲಾಗೀ ಓವಾಳಿತೀ ॥ ೨ ॥

ಏಕೀ ಆಣಲೀ ನಕ್ಷತ್ರ, ಮಾಳಾ ವಿದ್ಯುಲ್ಲತಾಪತ್ರ।
ಲಖಲಖಾಟ ಬಹು ಝಾಲಾ, ದಿಸತಸೇ ವಿಚಿತ್ರ ॥ ೩ ॥

ಮುಕ್ತಮೋತೀ ಗುಂಫುನಿ ಹಾರ, ಆಣಲೇ ಸುಮನಾಂಚೇ ಪರಿಕರ।
ಧ್ವಜಾರೋಪಣ ರೋವೂನಿಯಾ, ಪಾಹತೀ ತುಜಲಾ ಸಮೋರ ॥ ೪ ॥

ವಾಜಂತ್ರೀ ವಾಜತಾತೀ, ಢೋಲ ದಮಾಮೇ ಗರ್ಜತೀ।
ಬಹುವಿಧ ವಾದ್ಯೇ ತೇಥೇ, ಲಾಗೇ ಉನ್ಮನಿ ಸ್ಥಿತೀ ॥ ೫ ॥

ಜ್ಯಾಂಚೇ ಜ್ಯಾಂಚೇ ಜೈಸೀ ಭಕ್ತಿ, ತೈಸಿ ಘೇವೂನಿ ಸಂಪತ್ತಿ।
ಆಲೇತೀ ತುಜ ಪಾಹಾಯಾ, ವೇಗೇ ಚಲಾ ಗುರುಮೂರ್ತಿ ॥ ೬ ॥

ವಿನವಿತೋ ದಾಸ ತುಝಾ, ಕೃಪಾ ಕರೀ ಮಹಾರಾಜಾ।
ಭಕ್ತಾಂಚೇ ಪಾಲನ ಕರೂನಿ, ಬೋಲ ಸಾಚ ಕರೀ ಮಾಝಾ ॥ ೭ ॥

ಭಾವಾರ್ಥ: ಏಳಿರಿ ಸದ್ಗುರುಗಳೇ. ನಿಮ್ಮನ್ನು ನೋಡಲಿಕ್ಕೆಂದು ಭಕ್ತರು ಬಂದಿದ್ದಾರೆ. ನಿಮ್ಮ ದಾಸನು ಚರಣಗಳಿಗೆ ವಂದಿಸುತ್ತಾನೆ. ಮಹಾದ್ವಾರದ ಕಡೆಗೆ ನಡೆಯಿರಿ. ಏಳಿರಿ. ಮಹಾದ್ವಾರಕ್ಕೆ ಬಂದು, ನಿಮ್ಮ ದರ್ಶನಕ್ಕೆಂದು ಆತುರರಾಗಿ ಕೂಡಿದ ಭಕ್ತರಿಗೆ, ಸ್ವಾಮೀ, ಪ್ರೇಮ ಪೂರ್ವಕ ದರ್ಶನ ಕೊಡಿರಿ. ಒಬ್ಬಳು ಪಂಚಾರತಿ ಹಿಡಿದಿದ್ದಾಳೆ, ಇನ್ನೊಬ್ಬಳು ಬಣ್ಣಬಣ್ಣದ ರಂಗೋಲಿ ಹಾಕುತ್ತಾಳೆ. ಮತ್ತೊಬ್ಬಳು ದೀಪ ಹಚ್ಚಿ ನಿಮಗೆ ಆರತಿ ಬೆಳಗುತ್ತಾಳೆ. ಒಬ್ಬಳು ನಕ್ಷತ್ರದ ಮಾಲೆಯನ್ನೂ ವಿದ್ಯುಲ್ಲತೆಯ ಎಲೆಯನ್ನೂ ತಂದಿದ್ದಾಳೆ. ಥಳಥಳನೆ ಹೊಳೆಯುವುದರಿಂದ ಬಹು ವಿಚಿತ್ರವಾಗಿ ಕಾಣುತ್ತದೆ. ಮುಕ್ತಾಮಣಿಯ ಹಾರವನ್ನೂ ಹೂಗಳ ರಾಶಿಯನ್ನೂ ತಂದಿದ್ದಾಳೆ. ಧ್ವಜಾರೋಹಣ ಮಾಡಿ ನಿಮ್ಮ ಎದುರು ನೋಡುತ್ತಾರೆ. ಬಜಂತ್ರಿ ಬಾರಿಸುತ್ತದೆ, ಡೋಲು ಬಾರಿಸುತ್ತಲಿದೆ; ಬಗೆಬಗೆಯ ವಾದ್ಯಗಳು ಬಾರಿಸುವುದರಲ್ಲಿ ಉನ್ಮನಿ ಸ್ಥಿತಿ ಹೊಂದಿದ್ದಾರೆ. ತಮ್ಮ ತಮ್ಮ ಭಕ್ತಿಯ ಪ್ರಕಾರ ಅವರು ಬೆಲೆಯುಳ್ಳ ವಸ್ತುಗಳನ್ನು ತಂದಿದ್ದಾರೆ. ನಿಮ್ಮ ದರ್ಶನಕ್ಕಾಗಿ ಬಂದಿದ್ದಾರೆ. ಗುರುಮೂರ್ತಿಗಳೇ, ಬೇಗನೇ ನಡೆಯಿರಿ. ಕೃಪೆಯಿಂದ ಭಕ್ತರನ್ನು ರಕ್ಷಿಸಿ, ನನ್ನ ಮಾತು ಸತ್ಯವನ್ನಾಗಿ ಮಾಡಿರೆಂದು ದಾಸನು ಕೇಳಿಕೊಳ್ಳುತ್ತಾನೆ.

೩

ಏಳಯ್ಯ ಆತ್ಮಾರಾಮಾ
ಯತಿ ಮುನಿ ಜನಪ್ರೇಮಾ।
ಏಳಯ್ಯ ಘನಶ್ಯಾಮಾ
ಎನ್ನ ಪಾಲಿಸೈ ಗುಣಧಾಮಾ ॥ ಪ ॥

ಗುರು ಕರುಣೋದಯದಲ್ಲಿ
ಬೋಧ ಸೂರ್ಯನು ಬರಲು।
ಮರವಿನ ಕತ್ತಲೆ ತೆರಳಿ
ಬೆಳಗಾಯಿತು ಮನದಲ್ಲಿ ॥ ೧ ॥

ವಾದ ತಾರೆಗಳಡಗಿ
ವಿಕಸಿತ ಹೃತ್ಕಮಲಾಗಿ।
ಸಾಧನ ಪಕ್ಷಿಗೊಳದಗಿ
ಕಲಿಕಲಿಸುತಿವೆ ಬಹುವಾಗಿ ॥ ೨ ॥

ಶಮದಮವೇ ನಿಸ್ಸೀಮ
ವಿಭಿಷಣ ಸುಗ್ರೀವ ನೇಮ।
ಸುಮತಿ ಶ್ರದ್ಧಾ ಪರಮಾ
ಇದೋ ಬಂದರು ಜಾಂಬುವ ಹನುಮಾ ॥ ೩ ॥

ಸುಪ್ರಭಾತ

ವಿವೇಕ ತವ ಭರತಾ
ವೈರಾಗ್ಯ ಶತ್ರುಘ್ನತಾ।
ಸಾವಧ ಲಕ್ಷ್ಮಣ ನಿರುತಾ
ಪದ ಸೇವಗೆ ಬಂದಿಹರು ತ್ವರಿತಾ ॥ ೪ ॥

ಶಾಂತಿ ಸೀತೆಯು ಒಲಿದು
ನಿಂತಿಹಳ್ಳೈ ಕೈ ಮುಗಿದು।
ಸಂಚಿತಾರ್ಘವನೆ ಕೊಡು
ಮಹಿಪತಿಸುತಗೊಲಿದು ॥ ೫ ॥

೪

ಏಳಯ್ಯಾ ಬೆಳಗಾಯಿತು
ಏಳು ಶ್ರೀ ಗುರುದೇವ, ಏಳು ದೇವರದೇವ॥
ಏಳು ಉನ್ಮನಿಯೋಗ, ನಿದ್ರೆ ನಿರ್ಮಲನೇ।
ಏಳಯ್ಯಾ ಬೆಳಗಾಯಿತು..... ಏಳಯ್ಯಾ ॥ ಪ ॥

ಏಳು ಸಪ್ತಸಾಗರಧಿಕ ಕ್ಷೀರಸಾಗರ ಮಧ್ಯ-।
ಮೇಲೆನಿಪ ಕೃಷ್ಣಾಶ್ರಯ ದ್ವಾರಕೆಯೊಳು॥
ಆಲಯವ ತಾ ಮಾಡಿ ಜ್ಞಾನಾಂಬಿಕೆಯಬೊಡಗೂಡಿ।
ಲೀಲೆಯಿಂದಲಿ ಪವಡಿಸಿರುವ ಗುರುದೇವ, ಏಳಯ್ಯಾ ॥ ೧ ॥

ಪಾತಾಳಲೋಕದಿಂದಾದಿಶೇಷನು ಬಂದು।
ಜ್ಯೋತಿ ರತ್ನ ಕರದಿ ಕಾಣಿಕೆಯ ಪಿಡಿದಿಹನು॥
ಪ್ರೀತಿಯಿಂದಲಿ ನಾಗಕನ್ನಿಕೆಯರ್ಕೈತಂದು।
ತಾಳಮದ್ದಲೆ ಗೀತ ವಾದ್ಯ ನುಡಿಸುವರು, ಏಳಯ್ಯಾ ॥ ೨ ॥
ಚಂದ್ರಸೂರ್ಯರು ನಿಂದು ಓಲಗವ ಕೊಡುತಿಹರು।
ಮಿಂದು ಗಂಗಾ ಯಮುನೆ ಮಜ್ಜನಕೆ ಹರಿಯುವರು॥
ಇಂದ್ರಲೋಕದಿಂದ ಪಾರಿಜಾತಮಂ ಕೈಗೊಂಡು।
ಇಂದ್ರಾದಿಗಳು ದಿವ್ಯಾಮೃತದ ಕುಂಭ ತಂದಿಹರು, ಏಳಯ್ಯಾ॥ ೩ ॥
ಭೂಲೋಕದರಸು ಮುನಿಮಾನ್ಯ ಭಕ್ತಜನ।
ಪಾಲ ಶರ್ಕರೆ ತುಪ್ಪ ಹಣ್ಣುಗಳ ತಂದಿರಿಸಿ॥
ಮೇಲೆನಿಪ ನಿನ್ನಾಮೃತವಾಕ್ಯದಿಂ ಪರತತ್ತ್ವ।
ಕೇಳಲೋಸುಗ ಕರಮುಗಿದು ನಿಂದಿಹರು, ಏಳಯ್ಯಾ ॥ ೪ ॥
ಮೂರು ಲೋಕದೊಳಿಂತು ಉಪಚರಿಸಿ ಜೀವಿಗಳ।
ನೂರು ಜನ್ಮದ ಕರ್ಮ ಸಂಚಿತವ ಕಳೆಯುತ್ತ॥
ಮೂರು ಪುರಗಳ ಗೆಲ್ದ ಮುಕ್ಕಣ್ಣನೆನಿಸಿರುವ।
ಧೀರ ಗುರು ಮಹಲಿಂಗ ರಂಗ ಭಂಗ... ಏಳಯ್ಯಾ ॥ ೫ ॥

೫

ಕಾಮಾ ಮಧ್ಯೇ ಕಾಮರೇ, ಮ್ಹಣಾ ರಾಮನಾಮ ರೇ।
ಪಾಮರ ಪ್ರಾಣೀ ತರಲೇ ಕೋಟೀ, ನಕಾ ವಿಸರೂ ರಾಮ ರೇ ॥ ಧೃ ॥

# ಸುಪ್ರಭಾತ

ಉಠೋನಿ ಪ್ರಾತಃಕಾಳೀ ರೇ, ಆಠವಾ ವನಮಾಳೀ ರೇ।
ಪ್ರಪಂಚ ಧಂದಾ ಕರತಾ ತ್ಯಾಮಧ್ಯೇ, ಯದುಕುಳಶಿರೋಮಣೀ ರೇ॥ ೧ ॥

ದಿವಸಾ ಯಾತಾಯಾತೀ ರೇ, ಶಿವ ಶಿವ ನಾಮ ಗಾಯೀ ರೇ।
ಆಯುಷ್ಯ ಪ್ರಪಂಚ ಟಾಕೂನಿ ಬಾಪಾ, ಗೌರೀರಮಣಾ ಧ್ಯಾಯೀ ರೇ
॥ ೨ ॥

ಮಧುಸೂದನ ಮನೀ ಧ್ಯಾಯೀ ರೇ, ಮಧೂರಭಾಷಾ ವದನೀ ರೇ।
ಉದಕಾ ಉದರೀ ಘೇತಾ ಸಮಯೀ, ಯದುಕುಲಶಿರೋಮಣೀ ರೇ
॥ ೩ ॥

ಅಜಾಮೇಳ ತೋ ಪಾಪೀ ರೇ, ಗಜೇಂದ್ರ ಪಶುರೂಪೀ ರೇ।
ಗಜೇಂದ್ರಾನೇ ಪದ ಕ್ರಮಿಲೇ, ನಿಜಪದಿ ತ್ಯಾಸಿ ಸ್ಥಾಪಿಯಲೇ ॥ ೪ ॥

ಸಾಯಂಕಾಳೀ ಶಯನೀ ರೇ, ಜಾಯಾ ಸಂಗೇ ರಮಣೀ ರೇ।
ಕಾಯಾ ವಾಚಾ ಮಾನಸಿ ರಮಣಾ, ರಘುನಾಥನಾಮ ಸಾಧನ ರೇ
॥ ೫ ॥

ಸುಖಾಚಾ ಹಾ ರಾಮ ರೇ, ಫುಕಾಚಾ ವಿಶ್ರಾಮ ರೇ।
ರುಕಾ ಕಾಹೀ ಖರ್ಚತ ನಾಹೀ, ನಕಾ ವಿಸರೂ ರಾಮ ರೇ ॥ ೬ ॥

ನಾಮ ಘೇತಾ ವದನೀ ರೇ, ರಾಮ ಯೇತೋ ಸದನೀ ರೇ।
ನಾರಾಯಣ ಶಿವಶಂಕರ ಗುರುಪ್ರಭು, ನಾಮಸ್ಮರಣೀ ವರ್ಣಾ ರೇ
॥ ೭ ॥

ಭಾವಾರ್ಥ: ಕೆಲಸ ಮಾಡುತ್ತಿರುವಾಗ ಸಹ ರಾಮನಾಸ್ಮರಣೆ ಮಾಡಿರಿ. ಅದರಿಂದ ಕೋಟಿ ಪಾಮರ ಪ್ರಾಣಿಗಳು ಸದ್ಗತಿಯನ್ನು ಪಡೆದಿದ್ದಾರೆ ಎಂದರೆ ಉದ್ಧಾರವಾಗಿದ್ದಾರೆ. ರಾಮನನ್ನು ಮರೆಯಬೇಡಿರಿ. ಬೆಳಿಗ್ಗೆ ಎದ್ದು ದೇವರನ್ನು ನೆನೆಯಿರಿ. ಪ್ರಪಂಚದ ವ್ಯವಹಾರ ಮಾಡುತ್ತಿರುವಾಗ ಸಹ, ಯದುಕುಲತಿಲಕನನ್ನು ಸ್ಮರಿಸಿರಿ. ಪ್ರತಿದಿನವೂ ಕೆಲಸ ಕಾರ್ಯದ ಚಿಂತೆ ಇದ್ದೇ ಇದೆ. ಅದರಲ್ಲಿಯೇ ಶಿವನಾಮಸ್ಮರಣೆ ಮಾಡಿರಿ. ಆಯುಷ್ಯದ ಬಗ್ಗೆ ಪ್ರಪಂಚದ ಬಗ್ಗೆ ವಿಚಾರ ಮಾಡದೆ ನಾಮಸ್ಮರಣೆ ಮಾಡಿರಿ. ಮಧುಸೂದನನ ಧ್ಯಾನ ಮನದಲ್ಲಿ ಮಾಡಿರಿ. ಮೃದುವಾಗಿ ಮಾತನಾಡಿರಿ. ನೀರು ಕುಡಿಯುವಾಗ ಸಹ ಯದುಕುಲಶಿರೋಮಣಿಯನ್ನು ಸ್ಮರಿಸಿರಿ. ಪಾಪಿಯಾದ ಅಜಾಮಿಳನೂ ಪಶುರೂಪಿಯಾದ ಗಜೇಂದ್ರನೂ ನಾಮಸ್ಮರಣೆಯಿಂದಲೇ ನಿಜಪದವನ್ನು ಹೊಂದಿದರು. ಸಾಯಂಕಾಲ ಮಲಗುವಾಗ, ಹೆಂಡತಿಯೊಡನೆ ಒಲಿದು ಮಾತಾಡುವಾಗ, ಕಾಯಾ ವಾಚಾ ಮನಸ್ಸಿನಿಂದ, ರಘುನಾಥನ ನಾಮಸಾಧನೆ ಮಾಡಿರಿ. ಈ ರಾಮನು ಸುಖದ ಆಗರ. ಪುಕ್ಕಟೆಯಾದ ವಿಶ್ರಾಂತಿಯ ಸ್ಥಾನವು. ಇದಕ್ಕೋಸುಗ ಒಂದು ಬಿಡಿ ಕಾಸೂ ಖರ್ಚಾಗುವುದಿಲ್ಲ. ಇಂತಹ ರಾಮನನ್ನು ಮರೆಯಬೇಡಿರಿ. ನಾಮಸ್ಮರಣೆ ಮಾಡುವುದಿಂದ ರಾಮನು ನಿಮ್ಮೆಡೆಗೇ ಬರುವನು. ನಾರಾಯಣ ಶಿವಶಂಕರ ಗುರುಪ್ರಭುಗಳು ಈ ರೀತಿ ನಾಮಸ್ಮರಣೆಯ ಮಹತ್ವವನ್ನು ವರ್ಣಿಸಿದ್ದಾರೆ.